# ಸಿರಾ ಸೀಮೆಯ ಸಾಂಸ್ಕೃತಿಕ ವೀರರು

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧ)


ಸಂಶೋಧಕ

**ಕೆ.ಪಿ. ಬಸವರಾಜ**

ಮಾರ್ಗದರ್ಶಕರು

**ಡಾ. ಹರಿಶ್ಚಂದ್ರ ಎಸ್. ದಿಗ್ಗಾಂಗೀಕರ**

ಹಿರಿಯ ಶ್ರೇಣಿ ಅಧ್ಯಾಪಕರು

ಜಾನಪದ ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬.

೨೦೦೭

# ಸಿರಾ ಸೀಮೆಯ ಸಾಂಸ್ಕೃತಿಕ ವೀರರು

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧ)


ಸಂಶೋಧಕ

ಕೆ.ಪಿ. ಬಸವರಾಜ

ಮಾರ್ಗದರ್ಶಕರು

ಡಾ. ಹರಿಶ್ಚಂದ್ರ ಎಸ್. ದಿಗ್ಸಂಗೀಕರ

ಹಿರಿಯ ಶ್ರೇಣಿ ಅಧ್ಯಾಪಕರು

ಜಾನಪದ ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಪ್ರಮಾಣ ಪತ್ರ

ಸಿರಾ ಸೀಮೆಯ ಸಾಂಸ್ಕೃತಿಕ ವೀರರು ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ.ಹರಿಶ್ಚಂದ್ರ ಎಸ್. ದಿಗ್ಸಂಗೀಕರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ಕೆ.ಪಿ.ಬಸವರಾಜ
ಸಂಶೋಧಕ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೬-೦೨-೨೦೦೭
ಸ್ಥಳ : ವಿದ್ಯಾರಣ್ಯ

# ದೃಢೀಕರಣ ಪತ್ರ

ಕೆ.ಪಿ.ಬಸವರಾಜ ಇವರು ಶಿರಾ ಸೀಮೆಯ ಸಾಂಸ್ಕೃತಿಕ ವೀರರು ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಹರಿಶ್ಚಂದ್ರ ಎಸ್. ದಿಗ್ಗಂಗೀಕರ್
ಮಾರ್ಗದರ್ಶಕರು
ಜನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 26.2.07
ಸ್ಥಳ : ವಿದ್ಯಾರಣ್ಯ

## ಸಿರಾ ಸೀಮೆಯ ಸಾಂಸ್ಕೃತಿಕ ವೀರರು

ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ-ಸ್ವರೂಪ-ವ್ಯಾಪ್ತಿ

## ಉದ್ದೇಶ :

ಗ್ರಾಮೀಣ ಜನಪದೀಯರು ಎಲ್ಲಾ ವಿಷಯಗಳಲ್ಲೂ ಬಾವುಕರಾಗಿರುತ್ತಾರೆ. ಪ್ರತಿಯೊಂದು ವಿಚಾರಗಳಲ್ಲೂ ಭಯ, ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾರೆ. ಪ್ರಕೃತಿ ಸಹಜವಾದ ಸೂರ್ಯ, ಚಂದ್ರ, ಭೂಮಿ, ಆಕಾಶ, ಅಮವಾಸೆ, ಬೆಳದಿಂಗಳು, ಕಲ್ಲು, ಮಣ್ಣು, ಗಿಡ ಮರಗಳನ್ನು ಪೂಜಿಸುತ್ತಾರೆ. ಇಂತಹ ಜನಪದೀಯರು ತಮ್ಮ ಜೀವನದ ಬಗ್ಗೆ ಜಾತಿ, ಪಂಗಡ, ಕುಲ ಜನರ ಬಗ್ಗೆ ಅಪಾರ ಅಭಿಮಾನ ವಿಶ್ವಾಸವನ್ನು ಹೊಂದಿರುತ್ತಾರೆ. ತಮ್ಮಲ್ಲೇ ಇದ್ದ ಅಸಮಾನ್ಯ ವ್ಯಕ್ತಿಯೊಬ್ಬ ಗಮನಾರ್ಹ ಕಾರಣಗಳಿಂದ ಮಡಿದರೆ ಆತ ಮೃತನಾದ ಸ್ಥಳದಲ್ಲೇ ಗುಡಿಯೊಂದನ್ನು ಕಟ್ಟಿ ಅವನು ಬಳಸುತ್ತಿದ್ದ ವಸ್ತುಗಳನ್ನು ಅಪಾರ ಭಕ್ತಿ ಭಾವಗಳಿಂದ ಪೂಜಿಸಿ ಕಾಪಾಡಿಕೊಂಡು ಬರುತ್ತಾರೆ. ಇದು ಅವರ ದೈವತ್ವದ ಕೃತಜ್ಞ ತ್ಯಾಗ ಭಾವವನ್ನು ಸೂಚಿಸುತ್ತದೆ. ಅಂದಿನ ಸಮಾಜದ ರೀತಿ-ನೀತಿಗಳಲ್ಲಿ ಯಾವುದನ್ನು ಮೌಲ್ಯವಾಗಿ ಗುರುತಿಸಿದ್ದರೋ ಅಂತಹ ಮೌಲ್ಯಾದರ್ಶಗಳನ್ನು ಸಮಕಾಲೀನದಲ್ಲಿಯೂ ಎತ್ತಿಹಿಡಿಯುವ ಪ್ರಯತ್ನವನ್ನು ಜನಪದೀಯರು ಮಾಡುತ್ತಾರೆ ಎಂದರೆ ತಪ್ಪಾಗಲಾರದು. ಹೀಗೆ ಜನಪದವು ನಿರ್ಜೀವಕ್ಕೂ ಜೀವ ತುಂಬುವ ಹಾಗೂ ಜನರ ಮನಸ್ಸಿನಲ್ಲಿ ಜೀವ ಪಡೆದು ಉಸಿರಾಡುತ್ತಿರುವ (ಗತಿಸಿದ) ಮಾನವನನ್ನು ದೈವವಾಗಿಸುತ್ತದೆ.

ಮಾನವನ ಹುಟ್ಟು-ಸಾವು ಸಹಜವಾಗಿರಬಹುದು ಆದರೆ ಹುಟ್ಟು ಅವನ ಬೆಳವಣಿಗೆ ಕ್ಷೇತ್ರದ ಪರವಾಗಿ ನಿಲ್ಲುತ್ತದೆ. ಸಾವು ಅವನ ಸಾಧನೆಯ ಗುರಿಯನ್ನು ತಲುಪುತ್ತದೆ. ಇಲ್ಲಿ ಹುಟ್ಟು ಸಾವಿನ ಮಧ್ಯೆ ಮಾನವನೊಬ್ಬ ಹೋರಾಡಿ ಏನನ್ನಾದರೂ ಸಾಧಿಸಬೇಕೆಂಬ ಹಂಬಲದಿಂದ ತನ್ನ ಧೈರ್ಯ ಸಾಹಸಗಳನ್ನು ದುಡಿಸಿಕೊಳ್ಳುತ್ತಾನೆ. ಸಾವಿನ ಅಂತಿಮ ಮಟ್ಟವನ್ನು ಮುಟ್ಟುತ್ತಾನೆ. ಎಲ್ಲಾ ವ್ಯಕ್ತಿಗಳೂ ಹೀಗಿರಲು ಅಸಾಧ್ಯ. ಆದುದರಿಂದಲೇ ಇಂತಹ ವ್ಯಕ್ತಿಗಳು ಅಸಾಮಾನ್ಯರಾಗಿ ಕಂಡುಬರುತ್ತಾರೆ. ಸಮಾಜದ ನಾಯಕತ್ವದ ಬಾವುಟವನ್ನು ಹಿಡಿಯುತ್ತಾರೆ. ಸತ್ತ ಮೇಲೆಯೂ ಇಂತಹ ವ್ಯಕ್ತಿಗಳು ಬದುಕಿ ಉಳಿಯುತ್ತಾರೆ. ಇವರೇ ಸಾಂಸ್ಕೃತಿಕ ವೀರ-ನಾಯಕರು ಅಥವಾ ಜನಪದ ವೀರ ನಾಯಕರು ಎಂದು ಕರೆಸಿಕೊಳ್ಳುತ್ತಾರೆ. ಹೀಗೆ ಗ್ರಾಮೀಣ ಜೀವನದಲ್ಲಿ ಆದಿ ಮಾನವನ ಕಾಲದಿಂದಲೂ ಹಾಸುಹೊಕ್ಕಾಗಿ ಬೆರೆತು ಬಂದಿರುವ ಸಾಂಸ್ಕೃತಿಕ ವೀರ-ನಾಯಕರು

ಜನಪದೀಯರ ಬದುಕಿನ ಒಂದು ಅಂಗವಾಗಿ ಕಂಡುಬರುತ್ತಾರೆ. ಸಾಮಾನ್ಯವಾಗಿ ಜನಪದೀಯರ ಸಾಮಾಜಿಕ ಆರ್ಥಿಕ, ರಾಜಕೀಯ ಜೀವನವನ್ನು ಅಧ್ಯಯನ ಮಾಡಬೇಕಾದರೆ ಮೊದಲು ಅವರು ಪೂಜಿಸುವ ಪರಂಪರಾಗತವಾಗಿ ಬಂದಿರುವ ಸಾಂಸ್ಕೃತಿಕ ವೀರರನ್ನು ಕುರಿತು ತಿಳಿದುಕೊಳ್ಳಬೇಕು. ಒಬ್ಬೊಬ್ಬ ಸಾಂಸ್ಕೃತಿಕ ವೀರನಿಗೂ ಸಂಬಂಧಿಸಿದ ಕಥೆಯಾಗಲಿ, ಕಥನ ಗೀತೆಯಾಗಲಿ, ಐತಿಹ್ಯ ಪವಾಡವಾಗಲಿ ಜನಪದೀಯರ ಆಯಾ ಜನಾಂಗಗಳ ಕೆಲವಾರು ಸಮಸ್ಯೆಗಳಿಗೆ ಕಾರಣಗಳನ್ನು, ಕೆಲವೇಳೆ ಪರಿಹಾರಗಳನ್ನು ತಿಳಿಸಿಕೊಡಲು ಸಾಧ್ಯವಿದೆ. ಪ್ರಸ್ತುತ ಪ್ರಬಂಧದಲ್ಲಿ ವೀರ-ನಾಯಕರನ್ನು ಪೂಜಿಸುವ ಜಾತಿ, ಜನಾಂಗ, ಬುಡಕಟ್ಟುಗಳ ಜನರ ಜೀವನ ಆಲೋಚನಾ ಕ್ರಮವಿಧಿಗಳು ಅನಾವರಣಗೊಳ್ಳುತ್ತವೆ.

ನಿತ್ಯ ಪರಿವರ್ತನಾಶೀಲವಾದ ಈ ಸಮಾಜದಲ್ಲಿ ನವ ನಾಗರೀಕತೆಯ ತುತ್ತ ತುದಿಯಲ್ಲಿರುವ ಮಾನವನ ಅಭಿರುಚಿ, ಆಸಕ್ತಿ, ಆಲೋಚನಾ ಶಕ್ತಿ ಬದಲಾಗುತ್ತಾ ಹೋಗುತ್ತವೆ. ಹೊಸ ಹೊಸ ವಿಚಾರಗಳಿಗೆ ಮನುಷ್ಯ ತನ್ನನ್ನು ಅಳವಡಿಸಿಕೊಳ್ಳುತ್ತಾ ತಾನು ಪ್ರಪಂಚದ ನಾನಾ ರೀತಿಯ ವಿಚಾರಗಳಿಗೆ ಮನ ಸೋಲುತ್ತಿದ್ದಾನೆ. ಹೀಗಿರುವಾಗ ನಮ್ಮ ಸಾಂಸ್ಕೃತಿಕ ಸ್ವರೂಪವೂ ಬದಲಾವಣೆ ಹೊಂದಿರುವುದು ಸಹಜವಾಗಿದೆ. ಈಗಾಗಲೇ ಕಣ್ಮರೆಯಾಗುತ್ತಿರುವ ಎಷ್ಟೋ ರೂಢಿ, ಪದ್ಧತಿಗಳು, ಸಂಪ್ರದಾಯಾಚಾರಣೆಗಳ ಜೊತೆಗೆ ಜನಪದೀಯರು ಅತೀ ನಂಬಿಕೆ, ನಿಷ್ಠೆಯಿಂದ ಪೂಜಿಸುತ್ತಿದ್ದ ಸಾಂಸ್ಕೃತಿಕ ವೀರನಾಯಕರು ಮಾಯವಾಗುತ್ತಿದ್ದಾರೆ. ವೈದಿಕ ಸಂಸ್ಕೃತಿಯ ಪ್ರಭಾವವು ಹೆಚ್ಚಾಗುತ್ತಿದ್ದು, ಜನಪದ ಸಂಸ್ಕೃತಿಯು ಪೆಟ್ಟು ತಿನ್ನುತ್ತಿದೆ. ಒಂದು ಕಾಲಘಟ್ಟದಲ್ಲಿದ್ದ ಆಚಾರಣೆಗಳು ಮತ್ತೊಂದು ಕಾಲಘಟ್ಟದಲ್ಲಿ ಇಲ್ಲವಾಗಬಹುದು ಅಥವಾ ಬದಲಾಗಬಹುದು. ಇದರಿಂದಾಗಿ ಅವುಗಳ ಸ್ವರೂಪವನ್ನು ಸಂಗ್ರಹಿಸಿ ತಿಳಿದುಕೊಳ್ಳುವಂತೆ ಮಾಡುವುದು ಅಗತ್ಯವಾಗಿದೆ. ಸಾಮಾನ್ಯವಾಗಿ ಈ ವೀರ-ನಾಯಕರು ಮುಗ್ಧ ಜನಪದೀಯರಿಗೆ ಮಾನಸಿಕ ಸ್ಫೂರ್ತಿಯಾಗಿದ್ದಾರೆ. ಹಾಗೂ ಪ್ರಾತಃ ಸ್ಮರಣೀಯರಾಗಿದ್ದಾರೆ. ಅವರನ್ನು ತಮ್ಮ ಕುಲದೇವರನ್ನಾಗಿ, ಮನೆ ದೇವರನ್ನಾಗಿ ಮಾಡಿಕೊಂಡಿರುವುದರಿಂದ ತಮ್ಮ ಯಾವುದೇ ಕೆಲಸವನ್ನು ಮಾಡಲು ತಮ್ಮ ಮನೆದೇವರಾದ ವೀರ ನಾಯಕರಿಗೆ ಪೂಜೆ ಸಲ್ಲಿಸಿಯೇ ಆ ಕಾರ್ಯವನ್ನು ಕೈಗೆತ್ತಿಕೊಳ್ಳುವುದು. ತಮ್ಮ ಮಕ್ಕಳ ನಾಮಕರಣದಲ್ಲಿ ಹಿರಿಯ ಮಗ ಅಥವಾ ಮಗಳಿಗೆ ಮನೆದೇವರಾದ ವೀರ ನಾಯಕರ ಹೆಸರನ್ನು ಇಡುವ ಮೂಲಕ ಅವರಿಗೆ ಇರುವ ಗೌರವವನ್ನು ಸೂಚಿಸುತ್ತಾರೆ. ಇದರಲ್ಲಿ ಅವರ ಸ್ವಾರ್ಥವೂ ಅಡಗಿದೆ. ಈ ರೀತಿ ಮಾಡುವುದರಿಂದ ಆ ದೇವರು ತಮ್ಮ ಕುಟುಂಬವನ್ನು ಕಾಪಾಡುವನು ಎಂಬ ಪ್ರಭಲವಾದ ನಂಬಿಕೆ ಇದೆ. ಹೀಗೆ ಪ್ರತಿದಿನ ಕಷ್ಟಪಟ್ಟು ದುಡಿಯುವ ಅವರಿಗೆ ದೇವರ ಆಸರೆಯು ತಾಯಿಯ ಮಡಿಲಿದ್ದಂತೆ. ತಮ್ಮ ಕಷ್ಟ ಸುಖಗಳನ್ನು ತುಂಬಾ ಪ್ರಾಮಾಣಿಕತೆಯಿಂದ ತಾವು ಪೂಜಿಸುವ ದೇವರಲ್ಲಿ ಹೇಳಿಕೊಳ್ಳುವರು. ಇದರಿಂದ ಅವರಿಗೆ ಪರಿಹಾರವಂತೂ ಆ

ದೇವರು ನೀಡುವುದಿಲ್ಲ ಎಂಬ ಸತ್ಯ ಅವರಿಗೆ ತಿಳಿದಿಲ್ಲವಾದರೂ ಸ್ವಲ್ಪ ಕಾಲ ಅವರ ಮನಸ್ಸಿಗೆ ನೆಮ್ಮದಿ ಶಾಂತಿ ಸಿಗುವುದರಿಂದ ಚೈತನ್ಯ ಮೂಡಿಬಂದು ಎಂತಹ ಕಷ್ಟವನ್ನಾದರೂ ಎದುರಿಸಲು ಸಿದ್ಧವಾಗುತ್ತಾರೆ. ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿರುವಂತೆ ಹಳ್ಳಿಗಳಲ್ಲಿ ಹಬ್ಬ ಜಾತ್ರೆಗಳೆಂದರೆ ತುಂಬಾ ವಿಶೇಷವಾಗಿ ನಡೆಯುತ್ತವೆ. ಅದರಲ್ಲೂ ಗ್ರಾಮದೇವತೆಗಳೆಂದರೆ ಜನರಿಗೆ ತುಂಬಾ ಭಯ ಭಕ್ತಿ ಇರುತ್ತದೆ. ಗ್ರಾಮದೇವತೆಯ ಜಾತ್ರೆ ಉತ್ಸವಗಳಲ್ಲಿ ಒಂದೊಂದು ಜಾತಿಯ ವ್ಯಕ್ತಿಗಳಿಗೆ ಒಂದೊಂದು ಜವಾಬ್ದಾರಿಯು ಹಂಚಲ್ಪಟ್ಟಿರುತ್ತದೆ. ಈ ಆಚಾರ ಅವರ ವಂಶ ಪಾರಂಪರ್ಯವಾಗಿ ಬಂದಿರುತ್ತದೆ. ಆದರೆ ಸಾಂಸ್ಕೃತಿಕ ವೀರ ನಾಯಕರು ಒಂದು ಕುಲ-ಜಾತಿ-ಪಂಗಡಕ್ಕೆ ಸೇರಿರುವುದರಿಂದ ಇಲ್ಲಿ ಆ ದೇವರ ಎಲ್ಲಾ ಜವಾಬ್ದಾರಿಯೂ ಆಯಾ ಕುಲ-ಜಾತಿಗಳಿಗೆ ಸೇರುತ್ತದೆ. ಅಕಸ್ಮಾತ್ತಾಗಿ ಮಡಿವಾಳ, ಆದಿಕರ್ನಾಟಕ ಜನ ತಮ್ಮ ಕರ್ತವ್ಯಗಳನ್ನು ಇಲ್ಲಿ ಪೂರೈಸುವುದನ್ನು ಕೆಲವು ಕಡೆ ಕಾಣಬಹುದು. ಇಡೀ ಕುಟುಂಬಗಳ ಆಯಾ ಜಾತಿ ಮನೆತನಗಳ ಐಕ್ಯತೆ ಸಾಮರಸ್ಯಗಳಾಗಿ ಈ ವೀರ ನಾಯಕರು ನಿಂತಿದ್ದಾರೆ. ಆದರೂ ಗ್ರಾಮಗಳಲ್ಲಿ ಜಾತಿ ಭೇದಗಳನ್ನು ಸೃಷ್ಟಿಸುವುದಾಗಲಿ, ಜಗಳಗಳು ಉಂಟಾಗಿದ್ದಾಗಲೀ ಎಲ್ಲಿಯೂ ನಡೆದಿಲ್ಲ. ಆಯಾ ಊರಿನಲ್ಲಿರುವ ಎಲ್ಲಾ ದೇವರಿಗೂ ಜನ ಕೈ ಮುಗಿಯುತ್ತಾರೆ. ಆದರೆ ಮೊದಲಿನಿಂದ ವಂಶ ಪಾರಂಪರ್ಯವಾಗಿ ಯಾರು ನಡೆದುಕೊಂಡು ಬಂದಿರುವರೋ ಅವರೇ ಆ ವೀರ ನಾಯಕನ ಪೂಜೆಯ ಸಂಪೂರ್ಣ ಜವಾಬ್ದಾರಿ ಹೊಂದಿರುವರು. ಇದು ಮೊದಲಿನಿಂದಲೂ ನಡೆದುಕೊಂಡು ಬಂದಿರುವ ಸಂಪ್ರದಾಯ.

ಇಂತಹ ಸಾಂಸ್ಕೃತಿಕ ವೀರ ನಾಯಕರನ್ನು ಸಿರಾ ಸೀಮೆಯ ಪ್ರತಿ ಹಳ್ಳಿಗಳಲ್ಲೂ ಕಾಣಬಹುದು. ಅವರನ್ನು ಪೂಜಿಸುವ ಜನಾಂಗದವರು ಹಾಗೂ ವೀರ-ನಾಯಕರನ್ನು ಹಲವಾರು ರೀತಿಗಳಲ್ಲಿ ವರ್ಗೀಕರಿಸಬಹುದು. ಇತ್ತೀಚೆಗೆ ಬದಲಾಗುತ್ತಿರುವ ವೀರನಾಯಕರ ಪರಿಯನ್ನು ಗಮನಿಸಬಹುದು. ಆಚರಣೆಗಳೊಂದಿಗೆ ಇವರನ್ನು ಗುರ್ತಿಸಬಹುದು. ಈ ಅಧ್ಯಯನದಲ್ಲಿ ನನ್ನ ಗ್ರಹಿಕೆಗೆ ಬಂದಷ್ಟು ವಿಷಯಗಳನ್ನು ಅವಲೋಕಿಸಲಾಗಿದೆ.

ಸಿರಾ ಸೀಮೆ ಸಾಂಸ್ಕೃತಿಕವಾಗಿ ಶ್ರೀಮಂತವಾಗಿದ್ದು ವಿವಿಧ ರೀತಿಯ ಜನಪದ ಕಥೆ, ಕಾವ್ಯ, ಲಾವಣಿ, ಐತಿಹ್ಯ, ಮಹಾಕಾವ್ಯಗಳು ಸಾಕಷ್ಟು ಪ್ರಮಾಣದಲ್ಲಿ ಕಂಡುಬರುತ್ತವೆ. ಐತಿಹಾಸಿಕವಾಗಿಯೂ ಈ ನಾಡು ಪ್ರಸಿದ್ಧವಾಗಿದ್ದು ನೂರಾರು ಶಾಸನಗಳು, ಮಾಸ್ತಿಗಲ್ಲು, ವೀರಗಲ್ಲುಗಳು ದೊರಕಿವೆ. ಅನೇಕ ಜನಪದ ವೀರ-ನಾಯಕರನ್ನು ಪಡೆದಿದೆ. ಈಗಾಗಲೇ ಹಲವಾರು ಜನಪದ ಕಥೆ, ಮಹಾಕಾವ್ಯಗಳು ಪ್ರಕಟಗೊಂಡಿವೆ. ಪ್ರಕಟಗೊಳ್ಳುತ್ತಲೂ ಇವೆ. ಇವು ಈ ಪ್ರದೇಶದ ಆತ್ಮಕಥನಗಳೆಂದರೆ ತಪ್ಪಾಗಲಾರದು. ಈ ಕಾವ್ಯ, ಕಥೆಗಳು ಸ್ಥಳೀಯ ಜನರ ಸಾಂಸ್ಕೃತಿಕ ಬದುಕಿನ ಹಿನ್ನೆಲೆಯನ್ನು ಗುರ್ತಿಸುವ ಆಕರಗಳಾಗಿವೆ.

'ಸಿರಾ ಸೀಮೆಯ ಸಾಂಸ್ಕೃತಿಕ ವೀರರು' ಎಂಬ ಈ ಅಧ್ಯಯನದಲ್ಲಿ ಸಿರಾ ಸುತ್ತಮುತ್ತಲಿನ ಪ್ರದೇಶಗಳನ್ನೊಳಗೊಂಡಂತೆ ಪ್ರಭಾವ ಬೀರಿದ ಪ್ರಮುಖ ಜನಪದ ವೀರ-ನಾಯಕರ ಅಧ್ಯಯನ ನಡೆಸಲಾಗಿದೆ. ಇದುವರೆವಿಗೂ ಸಿರಾ ತಾಲ್ಲೂಕಿನಲ್ಲಿ ನಡೆದಿರುವ ಜನಪದ ಸಂಗ್ರಹ-ಸಂಶೋಧನಾ ಚಟುವಟಿಕೆಗಳು ಬಿಡಿಬಿಡಿಯಾಗಿ ನಡೆದಿದ್ದು ಕೆಲವೊಂದು ವೀರ ನಾಯಕರ ಬಗೆಗೆ ಇರುವ ಕಥೆ, ಪದಗಳನ್ನು ಸಂಗ್ರಹಿಸಿ ಪ್ರಕಟಿಸುವ ಪ್ರಯತ್ನವಷ್ಟೇ ನಡೆದಿದೆ.

ಸಿರಾದ ಪಾಳೇಗಾರ ರಂಗಪ್ಪನಾಯಕನ ಯುದ್ಧದ ಲಾವಣಿಗಳನ್ನು ಎಚ್.ವಿ.ವೀರನಾಯಕರು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಡಾ.ಆರ್.ಸಿ.ಮುದ್ದೆಬಿಹಾಳ 'ಬೇಡನಾಯಕರ ಪಾಡು' ಕೃತಿಯಲ್ಲಿ ಪ್ರಕಟಿಸಿದ್ದಾರೆ. ಮಧುಗಿರಿಯ ದಿವಂಗತ ಶ್ರೀ ಉಮಾಪತಿಯವರು 'ಕಲ್ಪಸಿರಿ' ಕೃತಿಯಲ್ಲಿ ಗುಮ್ಮನಹಳ್ಳಿ ಕದನದ ಹಾಡುಗಳನ್ನು ಪ್ರಕಟಿಸಿದ್ದಾರೆ. ಈ ಎಲ್ಲಾ ಸಂಗ್ರಹಗಳಲ್ಲಿನ ಕಥೆ ಒಂದೇ ಆಗಿದ್ದು ರಂಗಪ್ಪನಾಯಕನ ಕೋಟೆಯ ಮೇಲೆ ಬಿಜಾಪುರದ ಸೈನ್ಯ ಮುತ್ತಿಗೆ ಹಾಕಿದಾಗ ರಂಗಪ್ಪನಾಯಕ ವೀರಾವೇಷದಿಂದ ಹೋರಾಡಿದ ಕಥೆಯನ್ನು ಒಳಗೊಂಡಿವೆ. ಆದರೆ ಕಲಾವಿದರು ಕಟ್ಟಿಕೊಡುವ ದಾಟಿ, ಸ್ವರೂಪ, ನಿರೂಪಣಾ ವಿಧಾನ, ವರ್ಣನೆಗಳು ಬೇರೆ ಬೇರೆಯಾಗಿವೆ. ವಕ್ತೃಗಳು ಬೇರೆ ಬೇರೆ ಸಂದರ್ಭಗಳಲ್ಲಿ ತಮ್ಮದೇ ಆದ ಶೈಲಿಯಲ್ಲಿ ಹೇಳಿದ್ದಾರೆ. ಡಾ.ಚಿಕ್ಕಣ್ಣ ಯಣ್ಣೆಕಟ್ಟೆಯವರು ಮಾಗೋಡು ಗ್ರಾಮದ ಜೋಗೀರಣ್ಣನಿಂದ ಮಾಗೋಡು ರಂಗನ ಕಾವ್ಯವನ್ನು ಸಂಗ್ರಹಸಿ ಪ್ರಕಟಿಸಿದ್ದಾರೆ. ಇಲ್ಲಿ ಕಾವ್ಯವಷ್ಟೇ ಇದ್ದು ವಿಶ್ಲೇಷಣೆ, ಅಧ್ಯಯನ ನಡೆದಿರುವುದಿಲ್ಲ. ಚಿಕ್ಕಣ್ಣ ಯಣ್ಣೆಕಟ್ಟೆಯವರ ಮತ್ತೊಂದು ಕಾವ್ಯ 'ಚಿತ್ರದೇವರ ಕಾವ್ಯ'. ಇದು ಸಿರಾ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನಡೆದ ಘಟನೆಗಳನ್ನು ಒಳಗೊಂಡ ಕೃತಿ. ಈ ಕಾವ್ಯವನ್ನು ಹಾಡಿದವರು ಸಿರಾ ತಾಲ್ಲೂಕಿನ ಲಕ್ಕವ್ವನಹಳ್ಳಿಗೊಲ್ಲರ ಹಟ್ಟಿಯ ಎಂಬತ್ತು ವರ್ಷದ ನಿಂಗಜ್ಜ. ಚಿತ್ರದೇವರ ಕಾವ್ಯವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ.ಕೆ.ಎಂ.ಮೈತ್ರಿಯವರು 'ಕೃಷ್ಣಗೊಲ್ಲರ ಕಥನ ಕಾವ್ಯಗಳು' ಎಂಬ ಕೃತಿಯಲ್ಲಿ ಸಂಗ್ರಹಿಸಿ ಪ್ರಕಟಿಸಿದ್ದಾರೆ. ಇವರು ಕಸ್ತೂರ ತಿಮ್ಮನಹಳ್ಳಿ ಕೃಷ್ಣಗೊಲ್ಲರ ಶ್ರೀಮತಿ ದೊಡ್ಡ ಈರಮ್ಮ ವಕ್ತೃವಿನಿಂದ ಸಂಗ್ರಹಿಸಿದ್ದಾರೆ. ಈ ಎರಡೂ ಸಂಗ್ರಹಗಳ ಕಥೆ ಒಂದೇ ಆದರೂ ವಕ್ತೃಗಳ ನಿರೂಪಣಾ ವಿಧಾನ, ಹಾಡುಗಳ ದಾಟಿ, ವರ್ಣನಾ ಸ್ವರೂಪ ಬೇರೆ ಬೇರೆಯಾಗಿದೆ. ಈ ಕಾವ್ಯದ ಬಗೆಗೂ ಸಮಗ್ರ ವಿಶ್ಲೇಷಣೆ ನಡೆದಿರುವುದಿಲ್ಲ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಚಲುವರಾಜುರವರು 'ಜುಂಜಪ್ಪನ ಕಾವ್ಯ'ವನ್ನು ಮಧುಗಿರಿ ತಾಲ್ಲೂಕು ಮಾಡ್ಲಾನ ಹಟ್ಟಿಯ ಐವತ್ತು ವರ್ಷದ 'ದಾಸಣ್ಣ' ಎಂಬ ವಕ್ತೃವಿನಿಂದ ಸಂಗ್ರಹಿಸಿ ಪ್ರಕಟಿಸಿದ್ದಾರೆ. ಜುಂಜಪ್ಪನ ಕಾವ್ಯವನ್ನು ಸಿರಾ ತಾಲ್ಲೂಕಿನ ಕಳುವೋರಹಳ್ಳಿ, ಬಿಜ್ಜಂಬೆಳ್ಳ, ಓಜಕುಂಟೆ ಮೊದಲಾದ ಗೊಲ್ಲರ ಹಟ್ಟಿಗಳಲ್ಲಿ ಹಾಡುತ್ತಾರಾದರೂ ಸಮಗ್ರ ಕಾವ್ಯ ಹಾಡಲಾರರು. ದೇವರ

ಹಟ್ಟಿಯ ನಂಜಪ್ಪಜ್ಜ, ಸಿಡಗಟ್ಟೆಯ ಭರಮಣ್ಣ ಮೊದಲಾದವರು ಜುಂಜಪ್ಪನ ಕಾವ್ಯದ ಕೆಲವೊಂದು ಭಾಗಗಳನ್ನು ಹಾಡುತ್ತಾರೆ. ಜುಂಜಪ್ಪನ ಬಗೆಗೆ ಸಾಕಷ್ಟು ಅಧ್ಯಯನ ನಡೆದಿವೆ. ಡಾ.ಮೀರಾಸಾಬಿಹಳ್ಳಿ ಶಿವಣ್ಣನವರು ಎತ್ತಪ್ಪ-ಜುಂಜಪ್ಪ ಕಾಡುಗೊಲ್ಲರ ಸಾಂಸ್ಕೃತಿಕ ವೀರರ ಅಧ್ಯಯನದ ಸಂಶೋಧನಾ ಪ್ರಬಂಧ ಹಾಗೂ ಬಿಡಿಬಿಡಿಯಾದ ಸಂಶೋಧನಾ ಲೇಖನಗಳಲ್ಲಿ ಡಾ.ತೀ.ನಂ.ಶಂಕರನಾರಾಯಣರವರು 'ಕಾಡುಗೊಲ್ಲರ ಸಂಪ್ರದಾಯಗಳು ಹಾಗೂ ನಂಬಿಕೆಗಳು ಕೃತಿ ಹಾಗೂ ಇತರ ಸಂಶೋಧನಾ ಪ್ರಬಂಧಗಳಲ್ಲಿ ಡಾ.ಜೀ.ಶಂ.ಪರಮಶಿವಯ್ಯರವರು 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು' ಹಾಗೂ ಇತರ ಲೇಖನ, ಕೃತಿಗಳಲ್ಲಿ ವಿಸ್ತೃತ ಅಧ್ಯಯನ ನಡೆಸಿದ್ದಾರೆ. ಪ್ರಸ್ತುತ ಇಲ್ಲಿನ ಅಧ್ಯಯನದಲ್ಲಿ ಜುಂಜಪ್ಪನನ್ನು ಸಿರಾ ಸೀಮೆಯ ಸಾಂಸ್ಕೃತಿಕ ವೀರನನ್ನಾಗಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಮೀರಾಸಾಬಿಹಳ್ಳಿ ಶಿವಣ್ಣನವರು ಸಿರಾ ತಾಲ್ಲೂಕು ದೇವರಹಟ್ಟಿಯ ನಂಜಪ್ಪಯ್ಯ, ಚಳ್ಳಕೆರೆ ತಾಲ್ಲೂಕಿನ ಯಲಗಟ್ಟೆ ಗೊಲ್ಲರಹಟ್ಟಿಯ ಎಂಬತ್ತು ವರ್ಷದ ಸಿರಿಯಜ್ಜಿ, ಹಿರಿಯೂರು ತಾಲ್ಲೂಕಿನ ವೇಣುಕಲ್ಲುಗುಡ್ಡ, ಆಂಧ್ರ ಪ್ರದೇಶದ ಮಡಕಶಿರಾ ತಾಲ್ಲೂಕಿನ ಗಂತಕಲ್‌ಹಟ್ಟಿ ಮೊದಲಾದ ಭಾಗಗಳಲ್ಲಿ ಹಾಗೂ ಡಾ.ತೀ.ನಂ. ಶಂಕರನಾರಾಯಣ ಅವರ ಗದ್ಯಕತೆಗಳಿಂದ, ಹಲವಾರು ಹಾಡುಗಾರರ ಕೋಲು ಪದಗಳಿಂದ ಸಂಗ್ರಹಿಸಿದ 'ಎತ್ತಪ್ಪ' ಕೃತಿಯಲ್ಲಿನ್ನ ಕಥೆ ಹಾಗು ಅವರ ಸಂಶೋಧನೆಗಳಲ್ಲಿ ಎತ್ತಪ್ಪನ ಬಗೆಗೆ ವಿಸ್ತಾರವಾದ ಅಧ್ಯಯನ ನಡೆದಿದೆ. ಎತ್ತಪ್ಪನ ಕಾರ್ಯಕ್ಷೇತ್ರಗಳಲ್ಲಿ ಸಿರಾ ಸೀಮೆಯೂ ಒಂದಾಗಿದ್ದು ಈ ಭಾಗದಲ್ಲಿ ಎತ್ತಪ್ಪನ ಪ್ರಭಾವವಿರುವುದರಿಂದ ಪ್ರಸ್ತುತ ಈ ಅಧ್ಯಯನದಲ್ಲಿ ಎತ್ತಪ್ಪನನ್ನು ಸಿರಾಸೀಮೆಯ ಸಾಂಸ್ಕೃತಿಕ ನಾಯಕನಾಗಿ ಗುರುತಿಸಿ ವಿಶ್ಲೇಷಣೆಗೆ ಒಳಪಡಿಸಿಲಾಗಿದೆ. ಎಂ. ವೀರಪ್ಪನವರು 'ವೀರಮಹೇಶ್ವರಿ ಅಮ್ಮಾಜಿಯವರ ಚರಿತ್ರೆ' ಕೃತಿಯಲ್ಲಿ ಬರಗೂರು ವೀರಮ್ಮ ಸತಿಯಾದ ಕತೆಯನ್ನು ಬರೆದು ೧೯೯೪ರಲ್ಲಿ ಪ್ರಕಟಿಸಿದ್ದಾರೆ. ದಿವಂಗತ ಟಿ.ತಾರೇಗೌಡರು 'ಬಂಡೀರಂಗನಾಥಸ್ವಾಮಿ ದೇವಾಲಯದ ಇತಿಹಾಸ ಮಹಿಮೆ' ಎಂಬ ಕೃತಿಯನ್ನು ಬರೆದು ೧೯೯೪ರಲ್ಲಿ ಪ್ರಕಟಿಸಿದ್ದಾರೆ. ೧೯೬೩ರಲ್ಲಿ ಕ.ರಾ.ಕೃಷ್ಣಸ್ವಾಮಿ ಪ್ರಕಟಿಸಿದ 'ಪಾಳೇಗಾರರ ಪದಗಳು ಎಂಬ ಕೃತಿಯಲ್ಲಿ ಪಾಳೇಗಾರ ರಂಗಪ್ಪನಾಯಕನನ್ನು ಕುರಿತ ಕಥನ ಗೀತೆಗಳಿವೆ. ಡಾ.ಅಂಬಳಿಕೆ ಹಿರಿಯಣ್ಣರವರ 'ಕಾಡುಗೊಲ್ಲರ ಜನಪದ ಗೀತೆಗಳು' ಸಂಕಲನದಲ್ಲಿ ಜುಂಜಪ್ಪ, ಎತ್ತಪ್ಪರ ಪದಗಳನ್ನು ಸಂಗ್ರಹಿಸಿದ್ದಾರೆ. ಡಾ.ಹನೂರು ಕೃಷ್ಣಮೂರ್ತಿರವರು 'ಕತ್ತಲ ದಾರಿ ದೂರ' ಎಂಬ ಸಂಕಲನದಲ್ಲಿ ಎತ್ತಪ್ಪ, ಜುಂಜಪ್ಪ ಕಥೆ, ಪದಗಳನ್ನು ಸಂಗ್ರಹಿಸಿದ್ದಾರೆ. ಡಾ.ಕಾಳೇಗೌಡ ನಾಗವಾರವರು ಎಂಬತ್ತರ ದಶಕದಲ್ಲಿ ಸಿರಾ ತಾಲ್ಲೂಕು 'ಬೇವಿನಹಳ್ಳಿಹಟ್ಟಿ ಒಂದು ಅಧ್ಯಯನ'ದಲ್ಲಿ ಜುಂಜಪ್ಪನ ಕಾರ್ಯಕ್ಷೇತ್ರಗಳು, ಹಬ್ಬ, ಸಂಪ್ರದಾಯ, ನಂಬುಗೆಗಳು, ಗಣೆ ಕಲಾವಿದರುಗಳನ್ನು ಕುರಿತು ಅಭ್ಯಾಸ ಮಾಡಿದ್ದಾರೆ. ಈ ಎಲ್ಲ ಪ್ರಕಟಿತ ಕಾವ್ಯ, ಕೃತಿಗಳನ್ನು ಅಧ್ಯಯನಕ್ಕೆ ಪೂರಕವಾಗಿ

ಒಳಸಿಕೊಂಡು ಒಟ್ಟಾರೆಯಾದ 'ಸಿರಾ ಸೀಮೆಯ ಸಾಂಸ್ಕೃತಿಕ ವೀರ-ನಾಯಕರ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ.

ಈವರೆಗೂ ಸಂಗ್ರಹಗೊಳ್ಳದೆ ಪ್ರಕಟವಾಗದೆ ಉಳಿದುಕೊಂಡಿರುವ, ಜನಪದರ ಬಾಯಲ್ಲಿ ಹರಿದಾಡುತ್ತಿರುವ ವೀರ-ನಾಯಕರಾದ ದಿಬ್ಬದ ವೀರ ಬೊಮ್ಮಣ್ಣ, ಬೆಜ್ಜಿಹಳ್ಳಿ ಬೊಪ್ಪರಾಯ, ಬರಗೂರು ವೀರಮ್ಮ, ಬೇವಿನಹಳ್ಳಿ ಕರಿಯಮ್ಮ, ಪುರ್ಲಹಳ್ಳಿ ಭೂತಪ್ಪ, ಗುರುಗುಂಡ ಬ್ರಹ್ಮೇಶ್ವರ ಮೊದಲಾದ ವೀರ-ನಾಯಕರ ಬಗೆಗೆ ಇರುವ ಕಥೆ, ಹಾಡು, ಐತಿಹ್ಯಗಳನ್ನು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿ ಅಧ್ಯಯನಕ್ಕೊಳಪಡಿಸಲಾಗಿದೆ.

ವಿಶ್ವ ಕಿರಿದಾಗುತ್ತಿರುವ, ಎಲ್ಲವೂ ಗ್ಲೋಬಲೀಕರಣವಾಗುತ್ತಿರುವ ಇಂದಿನ ಜಾಗತಿಕ ಸನ್ನಿವೇಷದಲ್ಲಿ ತನ್ನತನದ ಸ್ಥಳೀಯ ಚರಿತ್ರೆಯನ್ನು ಹುಡುಕಾಡುತ್ತಿರುವ ಇಂದಿನ ಅನಿವಾರ್ಯ ಸಂದರ್ಭದಲ್ಲಿ ಸ್ಥಳೀಯ ಚರಿತ್ರೆಯನ್ನು ಗುರ್ತಿಸುವಲ್ಲಿ ಈ ಸಾಂಸ್ಕೃತಿಕ ವೀರ-ನಾಯಕರ ಅಧ್ಯಯನ ಅತೀ ಮುಖ್ಯವಾದುದಾಗಿದೆ. ಸ್ಥಳೀಯ ಚರಿತ್ರೆ ರಚನೆಯ ಸಂದರ್ಭದಲ್ಲಿ ಸಾಂಸ್ಕೃತಿಕ ವೀರ-ನಾಯಕರು ಕಟ್ಟಿಸಿದ ದೇವಾಲಯಗಳು, ಕೆರೆ-ಕಟ್ಟೆಗಳು, ಗ್ರಾಮಗಳು, ಗುಡಿ-ಗೋಪುರಗಳು ಇತಿಹಾಸ ರಚನೆಗೆ ಹೆಚ್ಚು ಮಾಹಿತಿ ಒದಗಿಸುವಲ್ಲಿ ನೆರವಾಗುತ್ತವೆ. ಇವು ಅಂದಿನ ಕಾಲದ ಭೌಗೋಳಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ವಿಷಯಗಳ ಬಗೆಗೆ, ಅವುಗಳ ಐತಿಹಾಸಿಕತೆಯ ಬಗೆಗೆ ತಿಳಿಸುತ್ತವೆ.

ಸಮುದಾಯದ ಬಾಳಿನಲ್ಲಿ ಸಣ್ಣ ಸಾಹಸಗಳನ್ನು ಮಾಡಿ ಐತಿಹ್ಯಗಳಾಗಿ ಉಳಿದಿದ್ದ ಸ್ಥಳೀಯ ನಾಯಕರನ್ನು ಸಾಂಸ್ಕೃತಿಕ ನಾಯಕರನ್ನಾಗಿ ಗುರ್ತಿಸುವ ಪ್ರಯತ್ನ ಇದಾಗಿದೆ. ಅಭಿಜಾತ ಕಾವ್ಯಗಳ ನಾಯಕರ ಸರಿಸಮವಾಗಿ ನಿಲ್ಲುವ ಗಟ್ಟಿತನವನ್ನು ಈ ಜನಪದ ವೀರ-ನಾಯಕರು ಪಡೆದಿದ್ದಾರೆ. ರಂಗಪ್ಪನಾಯಕನನ್ನು ಕೇಂದ್ರ ಮಾಡಿಕೊಂಡು ಆತನ ಸುತ್ತಲೂ ಅನೇಕ ರಂಗಪ್ಪರನ್ನು ಹುಟ್ಟಿಹಾಕುವ ಈ ಜನಪದರು ಒಬ್ಬ ರಂಗನಾಥನಲ್ಲಿ (ವಿಷ್ಣು) ಹಲವಾರು ರಂಗನಾಥರನ್ನು ಸೃಷ್ಟಿಸುವ ಆಧ್ಯತೆಯನ್ನು ಪಡೆದಿರುತ್ತಾರೆ. ಹಾಗಾಗಿ ಹಲವು ಕಥೆಗಳು, ಪುರಾಣಗಳು, ಪದ್ಧತಿಗಳು, ಪದಗಳು ಒಂದೇ ವೀರನ ಹಲವು ಪಠ್ಯಗಳು ಕಾಣಸಿಗುತ್ತಿರುವುದು ಒಂದು ದೈವ, ಒಬ್ಬ ವೀರನ ಸುತ್ತ ಹಲವು ಜನರ ಜೀವನ ವಿಧಾನಗಳು ಬೆರೆತುಹೋಗಿರುತ್ತವೆ. ಇದೇ ವೈಶಿಷ್ಟ್ಯ, ರಂಗನಾಥನಿಗೆ ಹಲವು ವರ್ಗಗಳ ಒಕ್ಕಲಿರುವಂತೆ ಇಲ್ಲಿನ ಕುಂಚಿಟಿಗರಾದಿಯಾಗಿ ಕಾಡುಗೊಲ್ಲ, ಕುರುಬ, ಆದಿಕರ್ನಾಟಕ, ಆದಿದ್ರಾವಿಡರೂ ರಂಗನಾಥನ ಒಕ್ಕಲು, ಮನೆಮಕ್ಕಳಾಗುವ ಮೂಲಕ ಒಂದು ಸಾಮಾಜಿಕ ಆರ್ಥಿಕ, ಸಾಂಸ್ಕೃತಿಕ ಸಂಬಂಧಗಳನ್ನು ಇಂದಿಗೂ ಇಟ್ಟುಕೊಂಡಿದ್ದಾರೆ.

ಸಿರಾ ಸೀಮೆಯಲ್ಲಿ ಸಾಕಷ್ಟು ಸಂಖ್ಯೆಯ ಜನಪದ ವೀರ-ನಾಯಕರು ಆರಾಧನೆಗೊಳ್ಳುತ್ತಿದ್ದು ಈತನಕ ನಡೆದಿರುವ ಅಧ್ಯಯನದಲ್ಲಿ ಎಲ್ಲಿಯೂ ವೀರ-ನಾಯಕರನ್ನು ಸಮಗ್ರವಾಗಿ ಗುರ್ತಿಸುವ

ಪ್ರಯತ್ನ ನಡೆದಿರುವುದಿಲ್ಲ ಕೆಲವು ನಡೆದರೂ ಅವು ಸಂಗ್ರಹ ಸ್ವರೂಪವಿರುವ ಹೊರತು ವಿಶ್ಲೇಷಣಾ ಪೂರ್ವಕವಾದುವಲ್ಲ. ಆಕಾರಣಕ್ಕಾಗಿ ಸಿರಾ ಸೀಮೆಯ ವೀರ-ನಾಯಕರ ಸಮಗ್ರ ಚಿತ್ರಣವನ್ನು ಕಟ್ಟಿಕೊಡುವುದು ಈ ಅಧ್ಯಯನದ ಉದ್ದೇಶವಾಗಿದೆ. ಇವರ ಆರಾಧನಾ ಕ್ಷೇತ್ರಗಳು, ಅವುಗಳ ವೈಶಿಷ್ಟ್ಯತೆ ತಿಳಿಯುವುದು, ಅವರ ಆಚರಣೆ-ಸಂಪ್ರದಾಯಗಳು ಯಾವುವು, ಅವುಗಳ ಸ್ವರೂಪ ಎಂತಹದು ಇವುಗಳ ಇಂದಿನ ಸ್ಥಿತಿ-ಗತಿಯನ್ನು ತಿಳಿಯುವುದು ಸಿರಾ ಸೀಮೆಯ ಸಂಸ್ಕೃತಿಯನ್ನು ರೂಪಿಸುವಲ್ಲಿ ಇವರ ಕೊಡುಗೆ ಏನು? ಇಂದಿನ ಜನಜೀವನದ ಮೇಲೆ ಇವರು ಹೇಗೆ ಪ್ರಭಾವ ಬೀರುತ್ತಿದ್ದಾರೆ?, ಇವರ ಅಸ್ತಿತ್ವ ಸಮಾಜದಲ್ಲಿ ಯಾವ ಸ್ವರೂಪದಲ್ಲಿದೆ ಎಂದು ತಿಳಿಯುವ ಉದ್ದೇಶ ಹೊಂದಿದೆ. ಹಾಗು ಈ ಭಾಗದ ಜನತೆ ಇಂದು ಎದುರಿಸುತ್ತಿರುವ ನಿರುದ್ಯೋಗ, ಬರ, ಬಡತನ ಮೊದಲಾದ ಸಮಸ್ಯೆಗಳಿಗೆ ಈ ಸಾಂಸ್ಕೃತಿಕ ನಾಯಕರ ಬದುಕು, ವೀರತ್ವ ಯಾವ ಮಾರ್ಗದರ್ಶನ ನೀಡುತ್ತದೆ, ಪರಿಹಾರ ಒದಗಿಸುತ್ತದೆ ಎಂಬುದನ್ನು ವಿಶ್ಲೇಷಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಆಧುನೀಕರಣ, ನಗರೀಕರಣಗೊಳ್ಳುತ್ತಿರುವ ಈ ಹೊತ್ತಿನಲ್ಲಿ ಇವರು ಹೇಗೆ ಅಸ್ತಿತ್ವ ಸ್ಥಾಪಿಸಿಕೊಳ್ಳುತ್ತಾರೆ ಎಂದು ಅವಲೋಕಿಸಲಾಗಿದೆ. ಪ್ರಸ್ತುತ ನನ್ನ ಈ ಅಧ್ಯಯನವು ಕನ್ನಡ ಜಾನಪದ ಅಧ್ಯಯನಕ್ಕೆ ಸೀರಾ ಸೀಮೆಯ ವೀರ-ನಾಯಕರ ಬಗೆಗೆ ಸ್ವಲ್ಪ ಮಟ್ಟಿಗಾದರೂ ಹೊಸ ವಿಷಯಗಳನ್ನು ಒದಗಿಸಿದ್ದೇನೆಂಬ ತೃಪ್ತಿ ನನ್ನದಾಗಿದೆ.

**ಸ್ವರೂಪ :**

'ಸೀಮೆ' ಎಂಬ ಪದಕ್ಕೆ ಕಿಟಲ್ ಕೋಶದಲ್ಲಿ ಗಡಿ, ಎಲ್ಲೆ, ದೇಶ, ವಿದೇಶ ಎಂಬ ಅರ್ಥವಿದೆ. 'ಸೀರಾ ಸೀಮೆ' ಎಂಬಪದ ಸಿರಾ ಹಾಗೂ ಅದರ ಸುತ್ತ ಮುತ್ತ ಎಂಬ ಅರ್ಥವನ್ನು ಕೊಡುವುದು. ಈ ಅಧ್ಯಯನದ ವೀರ-ನಾಯಕರು ಕೇವಲ ಸೀರಾ ತಾಲ್ಲೂಕು ವ್ಯಾಪ್ತಿಗೆ ಒಳಪಡದೆ ಸುತ್ತ ಮುತ್ತಲ ಗಡಿನಾಡಿಗೂ ವ್ಯಾಪಿಸಿಕೊಂಡಂತೆ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿರುವುದರಿಂದ ಈ ಅಧ್ಯಯನಕ್ಕೆ "ಸಿರಾ ಸೀಮೆಯ ಸಾಂಸ್ಕೃತಿಕ ವೀರರು" ಎಂಬ ಶೀರ್ಷಿಕೆಯನ್ನು ಕೊಡಲಾಗಿದೆ. 'ಸೀಮೆ' ರಾಜ್ಯದಲ್ಲಿ ಅಂತರ್ಗತವಾಗಿರುತ್ತದೆ. ಈ ವಿಭಾಗ ನಾಮವು ಹೆಚ್ಚಾಗಿ ವಿಜಯನಗರದ ಅರಸರ ಕಾಲದಲ್ಲಿ ಕಂಡುಬರುತ್ತದೆ. ಹಲವು ಸ್ಥಳಗಳನ್ನು ಒಟ್ಟುಗೂಡಿಸಿ 'ಸೀಮೆ' ಎಂದು ಕರೆಯಲಾಗುತ್ತಿತ್ತು. ಸೀಮೆ ಎಂಬ ಪ್ರದೇಶ ವಾಚಕ ಪದವನ್ನು 'ನಾಡು'ಗೆ ಪರ್ಯಾಯವಾಗಿ ಬಳಸಿರುವುದುಂಟು. ಆದುದರಿಂದ ಇದನ್ನು 'ನಾಡು' ಎಂಬುದಕ್ಕೆ ಪರ್ಯಾಯ ಪದವಾಗಿ ಬಳಸಲಾಗಿದೆ. ಅಲ್ಲದೆ ಆಡಳಿತದ ಅನುಕೂಲಕ್ಕಾಗಿ ರಚಿಸಿಕೊಂಡ ಕೃತಕ ಗ್ರಾಮಗಳ ಒಂದು ಗುಂಪನ್ನು ಸೂಚಿಸುವಂತಹದ್ದು. 'ನಾಡು' ವಿಭಾಗವು ಕನ್ನಡ ಪ್ರದೇಶದಲ್ಲಿಯೂ 'ಸೀಮೆ'ಯು ತೆಲುಗು ಪ್ರದೇಶದಲ್ಲಿಯೂ ಕಂಡುಬರುತ್ತದೆ.

"ಸಿರಾ ಸೀಮೆಯ ಸಾಂಸ್ಕೃತಿಕ ವೀರರು" ಎಂದು ಈ ಅಧ್ಯಯನಕ್ಕೆ ಶೀರ್ಷಿಕೆ ನೀಡಿದ್ದರೂ ಸಹ ಈ ಅಧ್ಯಯನದಲ್ಲಿ ಕೇವಲ ವೀರರನ್ನು ಮಾತ್ರ ಪರಿಗಣಿಸದೆ ಸಮುದಾಯದ ಪ್ರಮುಖರಾಗಿ ನಾಯಕತ್ವ ವಹಿಸಿದ, ಈ ಭಾಗದ ಜನರ ಬದುಕಿಗೆ ಸ್ಫೂರ್ತಿಯಾದ, ಹೋರಾಟದ ಬದುಕನ್ನು ನಡೆಸಿ ದೈವತ್ವಕ್ಕೆರಿದ ನಾಯಕರನ್ನು ಇಲ್ಲಿ ಅಧ್ಯಯನಕ್ಕೊಳಪಡಿಸಿರುವುದರಿಂದ ಈ ಅಧ್ಯಯನದ ಶೀರ್ಷಿಕೆಯನ್ನು "ಸಿರಾ ಸೀಮೆಯ ಸಾಂಸ್ಕೃತಿಕ ವೀರ-ನಾಯಕರು" ಎಂಬುದಾಗಿ ಸ್ವಲ್ಪ ಮಟ್ಟಿನ ಬದಲಾವಣೆಯನ್ನು ಮಾಡಿಕೊಳ್ಳಲಾಗಿದೆ. ಈ ಅಧ್ಯಯನದಲ್ಲಿ ವೀರರನ್ನು ಕೆಲವೊಮ್ಮೆ ನಾಯಕರೆಂತಲೂ ವೀರ-ನಾಯಕರನ್ನು ಒಟ್ಟೊಟ್ಟಿಗೆ ಗುರ್ತಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ವೀರ ಪದದ ಅರ್ಥ, ಅವರ ಲಕ್ಷಣಗಳು, ವೀರರ ಸಾಧನೆಗಳು, ಸೋಲು, ಸಾವು, ಆಚರಣೆ, ಸಂಪ್ರದಾಯ, ಆರಾಧನಾ ಸ್ಥಳಗಳು ಮೊದಲಾದ ಅಂಶಗಳನ್ನು ಪರಿಗಣಿಸಲಾಗಿದೆ. ಈ ಪ್ರಾಂತ್ಯದಲ್ಲಿ ಕಂಡುಬರುವ ವೀರರ ಸಾಧನೆಗಳು ಅಂದಿನ ಸಾಮಾಜಿಕ ಸನ್ನಿವೇಷಕ್ಕೆ ಮಹತ್ತರವೆನಿಸಿ ಅಂದಿನ ಜೀವನ ಮೌಲ್ಯಗಳೊಂದಿಗೆ ಬೆರೆತು ಹೋಗಿದ್ದು ಮಹತ್ತರವೆನಿಸಿ ಇಂದಿಗೂ ಜನಮನದಲ್ಲಿ ಬದುಕುಳಿದಿದ್ದಾರೆ. ಈ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ತೊಡಗಿದಾಗ ಲಭ್ಯವಾದ ಎಲ್ಲಾ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಪ್ರಖ್ಯಾತ ಜನಪದ ವೀರ ಜುಂಜಪ್ಪನಿಂದ ಹಿಡಿದು ಒಂದು ಮನೆತನದ, ಕುಲ, ಗೋತ್ರದ ಉಳಿವಿಗಾಗಿ ಹೋರಾಡಿ ಮಡಿದ ಚಿಕ್ಕ ಚಿಕ್ಕ ವೀರ-ನಾಯಕರನ್ನು ಅವರ ಬಗೆಗೆ ಸಿಕ್ಕ ಕಥೆ, ಪದ, ಮಾಹಿತಿಗಳನ್ನಾಧರಿಸಿ ಅಧ್ಯಯನ ನಡೆಸಲಾಗಿದೆ.

ಆಯಾ ನಾಯಕರ ಕುಲ, ಜನಾಂಗ, ಭಕ್ತ ಸಮೂಹ, ಪೂಜಾ ವಿಧಾನ, ಆಚರಣೆಗಳನ್ನು ಕ್ಷೇತ್ರಕಾರ್ಯದಲ್ಲಿ ಪ್ರತ್ಯಕ್ಷ ಕಂಡು, ಹಿರಿಯ ಅನುಭವಿಗಳಿಂದ ವಿಷಯವನ್ನು ಕೇಳಿ ತಿಳಿದು ಸಂಗ್ರಹಿಸಲಾಗಿದೆ. ಕೆಲವೊಂದು ಭಾವಚಿತ್ರಗಳನ್ನು ತೆಗೆದುಕೊಳ್ಳಲಾಗಿದೆ. ಕ್ಷೇತ್ರಕಾರ್ಯಕ್ಕೆ ಹೋದಾಗ ಪ್ರಮುಖ ವೀರ-ನಾಯಕರ ಕುರಿತಂತೆ ಇರುವ ಕಥೆ, ನಂಬಿಕೆ ಆಚರಣೆಗಳನ್ನು ಸಂಗ್ರಹಿಸುವ ಜೊತೆಗೆ ದುರ್ಬಲ ವೀರ-ನಾಯಕರನ್ನು ಕಣ್ಮರೆಯಾಗುತ್ತಿರುವ ವೀರ-ನಾಯಕರನ್ನು ಕುರಿತಾಗಿ ದೊರೆತ ಆಚರಣೆ, ಕಥೆಗಳನ್ನೂ ಸಂಗ್ರಹಿಸಿ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

## ವ್ಯಾಪ್ತಿ :

ಈ ವೀರ-ನಾಯಕರ ಅಧ್ಯಯನಕ್ಕಾಗಿ ಮಾಹಿತಿ ಸಂಗ್ರಹಿಸಲು ಕ್ಷೇತ್ರಕಾರ್ಯ ಕೈಗೊಂಡಾಗ ಒಮ್ಮೊಮ್ಮೆ ಜನರಿಂದ ಮಾಹಿತಿ ಪಡಿಯುವುದು ಕಷ್ಟಕರವಾಯಿತು. ಕೆಲವು ವೀರ-ನಾಯಕರುಗಳ ಬಗೆಗೆ ಮಾಹಿತಿ ನೀಡುವವರೇ ಇಲ್ಲವಾಗಿದ್ದಾರೆ. ಮತ್ತೆ ಕೆಲವರು ಮಾಹಿತಿ ತಿಳಿದಿದ್ದರೂ ಅದನ್ನು ಹೇಳಲು ಹಿಂಜರಿದರು . ಆಗ ಅವರಿಗೆ ಪರಿಚಿತರ ಮೂಲಕ ಹೇಳಿಸಿ, ಆರ್ಥಿಕ ಸಹಾಯವನ್ನು

ನೀಡಿದರೂ ಕೊನೆಗೆ ಪರಿಪೂರ್ಣ ಮಾಹಿತಿ ಕೊಡುವಲ್ಲಿ ಹಿಂಜರಿದ ಘಟನೆಯೂ ಉಂಟು. ಉದಾಹರಣೆಗೆ ದಿಬ್ಬದ ವೀರಬೊಮ್ಮನಹಳ್ಳಿಯ ವೀರಬೊಮ್ಮಣ್ಣನ ಬಗೆಗೆ ಹೇಳುವ ಪದಗಳನ್ನು ಸಂಗ್ರಹಿಸಲು ಹತ್ತಾರು ಸಲ ಭೇಟಿ ನೀಡಿದರೂ ಸಫಲವಾಗಲಿಲ್ಲ. ಪದ ಹಾಡುವ ಅಜ್ಜಿ (ಕೆಂಚಮ್ಮ, ಆಂವರ್ಷ, ಕುಂಚಿಟಿಗ ಜನಾಂಗ) ಈಗ ಸಂಪೂರ್ಣ ವಯಸ್ಸಾಗಿದ್ದು ಹಾಡಲು ಆಗುವುದಿಲ್ಲ ಎಂದು ಕೈಚಲ್ಲಿದರು. ಈ ಅಜ್ಜಿಯ ಜೊತೆಗೆ ಹಾಡುತ್ತಿದ್ದ ಇತರೆ ಜೊತೆಗಾರ್ತಿಯರು ಬೇರೆ ಬೇರೆ ಗ್ರಾಮಗಳಲ್ಲಿ ನೆಲೆಸಿದ್ದಾರೆ. ಅವರಿಗೂ ವಯಸ್ಸಾಗಿದೆ. ಕೆಲವರು ಗತಿಸಿ ಹೋಗಿದ್ದಾರೆ. ಹೀಗಾಗಿ ಪೂರ್ಣವಾದ ವಿವರ ಲಭ್ಯವಾಗುವುದಿಲ್ಲ. ಆದರೂ ಗ್ರಾಮಸ್ಥರು, ಪೂಜಾರರು ಹೇಳುವ ಕಥೆಯನ್ನೇ ಆಧರಿಸಿ ಅಧ್ಯಯನ ನಡೆಸಲಾಗಿದೆ. ಈ ತಲೆಮಾರಿನ ವಕ್ತೃಗಳು ಹೇಳದೆ ಹೋದರೆ, ನಂತರ ಈ ಮಾಹಿತಿ ಸಂಗ್ರಹಿಸುವುದು ಕಷ್ಟವಾಗುತ್ತದೆ. ಅಥವಾ ಆ ಚರಿತ್ರೆ ಇಲ್ಲವಾಗಲೂಬಹುದು.

ಪ್ರಸ್ತುತ ಅಧ್ಯಯನದ ವೀರ-ನಾಯಕರು ಸಿರಾ ತಾಲ್ಲೂಕು ಹಾಗೂ ಸುತ್ತಮುತ್ತಲಿನ ಗಡಿಭಾಗಕ್ಕೆ ಹೊಂದಿಕೊಂಡ ಇತರೆ ತಾಲ್ಲೂಕು, ಜಿಲ್ಲೆಗಳಲ್ಲೂ ಪ್ರಸಿದ್ಧರಾಗಿದ್ದು, ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದಾರೆ. ಆದ್ದರಿಂದ ಪ್ರಸ್ತುತ ಅಧ್ಯಯನ ಸಿರಾ ಸುತ್ತ ಮುತ್ತಲಿನ ಪ್ರದೇಶಗಳಾದ ತುಮಕೂರು ಜಿಲ್ಲೆಯ ಗುಬ್ಬಿ, ಚಿಕ್ಕನಾಯಕನಹಳ್ಳಿ, ಮಧುಗಿರಿ, ಪಾವಗಡ, ಚಿತ್ರದುರ್ಗ ಜಿಲ್ಲೆಯ ಹಿರಿಯೂರು, ಚಳ್ಳಕೆರೆ, ಆಂಧ್ರಪ್ರದೇಶದ ಮಡಕಶಿರಾ ತಾಲ್ಲೂಕಿನ ಕೆಲವು ಪ್ರದೇಶಗಳನ್ನು ವ್ಯಾಪ್ತಿಯಾಗಿರಿಸಿಕೊಳ್ಳಲಾಗಿದೆ.

ಅಧ್ಯಾಯ ೨

## ಶಿರಾ ಸೀಮೆಯ ಸಂಕ್ಷಿಪ್ತ ಪರಿಚಯ.

೧. ಭೌಗೋಳಿಕ ಪರಿಸರ

೨. ಚಾರಿತ್ರಿಕ ಹಿನ್ನೆಲೆ

೩. ಸಾಂಸ್ಕೃತಿಕ ಪರಿಸರ

(ಅ) ಸಾಹಿತ್ಯ

(ಆ) ಕಲೆ-ಕಲಾವಿದರು

(ಇ) ಪ್ರೇಕ್ಷಣೀಯ ಸ್ಥಳಗಳು

ಅಧ್ಯಾಯ ೨

# ಸಿರಾ ಸೀಮೆಯ ಸಂಕ್ಷಿಪ್ತ ಪರಿಚಯ

## ಭೌಗೋಳಿಕ ಪರಿಸರ :

ಸಿರಾ ನಗರ ತುಮಕೂರು ಜಿಲ್ಲಾ ಕೇಂದ್ರದಿಂದ ೫೦ ಕಿ.ಮೀ. ದೂರದಲ್ಲಿದೆ. ೧೩°-೪೧' ಉತ್ತರ ಅಕ್ಷಾಂಶ ಹಾಗೂ ೭೬°-೫೪' ಪೂರ್ವ ರೇಖಾಂಶಗಳ ನಡುವೆ ವಿಸ್ತರಿಸಿರುವುದು. ಸಮುದ್ರ ಮಟ್ಟದಿಂದ ೨-೧೬೦ ಅಡಿ ಎತ್ತರದಲ್ಲಿದ್ದು ಬಿಸಿಲು ಸೆಕೆಗಳಿಂದ ಕೂಡಿದ ಇಲ್ಲಿನ ವಾತಾವರಣ ಡಿಸೆಂಬರ್-ಫೆಬ್ರವರಿ ತಿಂಗಳಲ್ಲಿ ಚಳಿ, ಮಾರ್ಚ್‌ನಿಂದ ಜುಲೈವರೆಗೆ ಬೇಸಿಗೆಯ ಬಿರು ಬಿಸಿಲು. ಜೂಲೈನಿಂದ ನವಂಬರ್ ತನಕ ಮಳೆಗಾಲವಿರುತ್ತದೆ. ೧೫೪೯ ಚದುರ ಕಿ.ಮೀ. ವಿಸ್ತೀರ್ಣವನ್ನು ಹೊಂದಿದ್ದು ಸರಾಸರಿ ಮಳೆಯ ಪ್ರಮಾಣ ೫೨೩.೩ ಮಿಲಿ ಮೀಟರ್ ಆಗಿದೆ. ಜಿಲ್ಲೆಯಲ್ಲಿ ಅತೀ ಕಡಿಮೆ ಮಳೆ ಪಡೆಯುವ ಮಳೆ ನೆರಳಿನ ಪ್ರದೇಶವಾಗಿದೆ. ಭೂಗರ್ಭ ಶಾಸ್ತ್ರದ ಪ್ರಕಾರ ಇಲ್ಲಿನ ಮಣ್ಣು ಮತ್ತು ಕಲ್ಲು ಪ್ರಾಚೀನ ಜಾತಿಯವು. ಅಗ್ನಿ ಶಿಲಾ ಜಾತಿಯ ಸಣ್ಣ ಸಣ್ಣ ಹರಳುಗಳಿಂದ ಕೂಡಿ ಪದರ ಪದರವಾಗಿರುವ ಮತ್ತು ಉದ್ದ ಅಗಲವಾಗಿ ಹರಡಿರುವ ಬಂಡೆಗಳು ಈ ಭೂಮಿಯ ಮೇಲ್ಭಾಗದಲ್ಲಿ ಹರಡಿದೆ. ಸಿರಾ ತಾಲ್ಲೂಕಿನ ನೇರಳ ಗುಡ್ಡ, ಹುಯ್ಯಲದೊರೆ, ಗಾಣದ ಹುಣಸೆ, ಹುಣಸೇಹಳ್ಳಿ, ಮೊದಲಾದ ಕಡೆ ಸುಣ್ಣ ಕಲ್ಲಿನ ಖನಿಜ ನಿಕ್ಷೇಪವಿದೆ. ಅಜ್ಜೇನಹಳ್ಳಿಯ ಬಳಿ ಚಿನ್ನದ ನಿಕ್ಷೇಪವಿದೆ. ಹೆಚ್ಚು ಬಿಸಿಲು ಕಡಿಮೆ ಮಳೆ ಬೀಳುವುದರಿಂದ ಕುರುಚಲು ಸಸ್ಯವರ್ಗ ಕಂಡುಬರುತ್ತದೆ. ಬುಕ್ಕಾಪಟ್ಟಣ ಅರಣ್ಯ ಪ್ರದೇಶವನ್ನು ಹೊಂದಿದ್ದು ಕಾಡುಹಂದಿ, ಕರಡಿ ಹಾಗೂ ಅಲ್ಲಲ್ಲಿ ಜಿಂಕೆಗಳ ಹಿಂಡು ಕಂಡುಬರುತ್ತದೆ. ಪ್ರಕೃತಿ ಸಹಜವಾಗಿ ಬೆಟ್ಟ ಗುಡ್ಡ, ವಿಶಾಲ ಬಯಲು, ಕುರುಚಲು ಸಸ್ಯವರ್ಗದಿಂದ ಕೂಡಿದ ಬರಪೀಡಿತ ಪ್ರದೇಶವಾಗಿರುವುದರಿಂದ ಪುರಾತನ ಕಾಲದಿಂದಲೂ ಇಲ್ಲಿನ ಜನ ಪಶು ಸಂಗೋಪನೆ, ವ್ಯವಸಾಯವನ್ನು ಅವಲಂಭಿಸಿದ್ದಾರೆ. ಇದರ ಜೊತೆ ಜೊತೆಗೆ ಕಂಬಳಿ ನೆಯ್ಗೆ, ಬೀಡಿ ಸುತ್ತುವುದು ಇಂತಹ ಇತರ ಉಪ ಕಸುಬುಗಳನ್ನು ಹೊಂದಿದ್ದಾರೆ.

ಈ ಭೌಗೋಳಿಕ ವಾತಾವರಣ ಈ ಭಾಗದ ವೀರ ನಾಯಕರಾದ ಜುಂಜಪ್ಪ, ಎತ್ತಪ್ಪ, ವೀರಬೊಮ್ಮಣ್ಣ, ಮೊದಲಾದವರ ಹುಟ್ಟಿಗೆ ಕಾರಣವಾಯಿತು. ಇವರು ಪಶುಸಂಗೋಪನೆಯಲ್ಲಿಯೇ ಪಾರಮಾರ್ಥ ಕಂಡವರು. ಇವರ ಕಥೆ, ಕಾವ್ಯಗಳಲ್ಲಿ ಇಲ್ಲಿನ ಭೌಗೋಳಿಕ ಪರಿಸರ ಹಾಗೂ ಬರಗಾಲದ ಚಿತ್ರಣವಿದೆ.

ಬೆಂಗಳೂರು ಪೂನಾ ರಾಷ್ಟ್ರೀಯ ಹೆದ್ದಾರಿ ನಾಲ್ಕು ಈ ನಗರದ ಮೂಲಕ ಹಾದು ಹೋಗುವುದರಿಂದ ಸಾರಿಗೆ ಸಂಪರ್ಕ ಸುಗಮವಾಗಿದ್ದು ಪ್ರಮುಖ ವ್ಯಾಪಾರ ಕೇಂದ್ರವೆನಿಸಿದೆ. ಕಳ್ಳಂಬೆಳ್ಳ, ಬುಕ್ಕಾಪಟ್ಟಣ, ಗೌಡಗೆರೆ, ಹುಲಿಕುಂಟೆ, ಸಿರಾ ಕಸಬ ಎಂಬ ಐದು ಹೋಬಳಿ ಕೇಂದ್ರಗಳನ್ನು, ೨೪೨ ಗ್ರಾಮಗಳನ್ನೊಳಗೊಂಡಿದೆ. ತುಮಕೂರು, ಗುಬ್ಬಿ, ಮಧುಗಿರಿ, ಚಿತ್ರದುರ್ಗ ಜಿಲ್ಲೆಯ ಹಿರಿಯೂರು ಹಾಗೂ ಉತ್ತರ ದಿಕ್ಕಿಗೆ ಆಂಧ್ರ ಪ್ರದೇಶವನ್ನು ತನ್ನ ಮೇರೆಗಳನ್ನಾಗಿಸಿಕೊಂಡಿದೆ. ಕನ್ನಡ ತೆಲುಗು ದ್ವಿಭಾಷಾ ಸ್ಥಳವಾಗಿದೆ. ಚಿತ್ರದುರ್ಗ ಜಿಲ್ಲೆಯನ್ನು ಪ್ರತಿನಿಧಿಸುವ ಲೋಕಸಭಾ ಕ್ಷೇತ್ರ ಹಾಗೂ ಸಿರಾ, ಕಳ್ಳಂಬೆಳ್ಳ ಎಂಬ ಎರಡು ವಿಧಾನಸಭಾ ಕ್ಷೇತ್ರಗಳನ್ನು ಹೊಂದಿದೆ.

ಶೇಂಗ ಈ ಪ್ರದೇಶದ ಪ್ರಮುಖ ಬೆಳೆಯಾಗಿದ್ದು ಇಲ್ಲಿನ ನೀರಾವರಿ ಪ್ರದೇಶ ಕೆರೆ ಹಾಗೂ ಕೊಳವೆ ಬಾವಿಗಳನ್ನು ಆಶ್ರಯಿಸಿದೆ. ತೆಂಗು, ಸೂರ್ಯಕಾಂತಿ, ರೇಷ್ಮೆ, ಹೂ ಹಾಗೂ ತರಕಾರಿ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ.

**ಚಾರಿತ್ರಿಕ ಹಿನ್ನೆಲೆ :**

ಸಿರಾ ನಗರ ನಿರ್ಮಾಣದ ಬಗ್ಗೆ ಒಂದು ಐತಿಹ್ಯವಿದೆ. ಸಿರಾ ಪಾಳೇಗಾರ ರಂಗಪ್ಪ ನಾಯಕನ ವಂಶಜ ರಂಗಪ್ಪರಾಜು ಎಂಬುವವರು ಬೇಟೆಯ ಸಲುವಾಗಿ ಸಿರಾ ಪ್ರಾಂತ್ಯದಲ್ಲಿ ಬೀಡು ಬಿಟ್ಟಿದ್ದರು. ಒಮ್ಮೆ ಪಾಳೇಗಾರನ ಬೇಟೆಯ ನಾಯಿಗಳನ್ನು ಮೊಲವೊಂದು ಅಟ್ಟಿಸಿಕೊಂಡು ಹೋದ ಪ್ರದೇಶವನ್ನು ಗುರುತು ಮಾಡಿ ನಗರದ ನಿರ್ಮಾಣ ಕಾರ್ಯದಲ್ಲಿ ತೊಡಗಿದ. ಆಗ ಆ ಕಾಡು ಪ್ರದೇಶದಲ್ಲಿರುವ ಕುರಿ ಮತ್ತು ದನಗಳ ದೊಡ್ಡಿ ಹಾಕಿಕೊಂಡಿದ್ದ ದೇವಣ್ಣ, ಸಿರಿಯಣ್ಣ ಎಂಬ ಇಬ್ಬರು ಗೊಲ್ಲ ಅಣ್ಣ ತಮ್ಮಂದಿರನ್ನು ವಿಶ್ವಾಸಕ್ಕೆ ತೆಗೆದುಕೊಂಡು ನಗರ ನಿರ್ಮಾಣ ಮಾಡಲು ಭೂಮಿಯನ್ನು ಅಗೆಯುತ್ತಿರುವಾಗ ಹೇರಳವಾದ ದ್ರವ್ಯ ಸಿಕ್ಕಿತು. ಈ ಹಣ ಹಾಗೂ ಸ್ಥಳೀಯ ಗೊಲ್ಲಗೌಡರ ಸಹಾಯದಿಂದ ಕಾಡು ಕತ್ತರಿಸಿ ವಿಶಾಲವಾದ ಬಯಲಿನಲ್ಲಿ ನಗರ ನಿರ್ಮಾಣ ಮಾಡಿದನು. ಹೆಚ್ಚು ಪರಿಶ್ರಮ ಸಹಾಯ ಮಾಡಿದ ಸ್ಥಳೀಯ ಗೊಲ್ಲಗೌಡರ ನೆನಪಿಗಾಗಿ 'ದೇವಣ ಸೀರ್ಯ' ಎಂದು ಹೆಸರಿಟ್ಟನು. ಕಾಲ ಕ್ರಮೇಣ ಅದು ದೊಡ್ಡ ಸೀರ್ಯವಾಗಿ>ಸಿರಿಯಾ>ಸೀರ್ಯಾ> 'ಸಿರ' ಎಂದು ಹೆಸರಾಗಿದೆ. ಗಂಗ, ರಾಷ್ಟ್ರಕೂಟ, ನೊಳಂಬ ಚಾಲುಕ್ಯ, ವಿಜಯನಗರದ ಅರಸರು, ಮೈಸೂರು ಒಡೆಯರು, ರತ್ನಗಿರಿ ಪಾಳೇಗಾರರು, ಬಿಜಾಪುರದ ಸುಲ್ತಾನರು, ಔರಂಗಜೇಬ್ ಹೈದರಾಲಿ, ಟಿಪ್ಪುಸುಲ್ತಾನ್ ಮೊದಲಾದವರು ಈ ಪ್ರಾಂತ್ಯದಲ್ಲಿ ಆಳ್ವಿಕೆ ನಡೆಸಿದ ಇತಿಹಾಸದ ಉಲ್ಲೇಖಗಳಿವೆ. ಇಂತಹ ಐತಿಹಾಸಿಕ ಮಹತ್ವವನ್ನು ಹೊಂದಿದ ಸಿರಾವನ್ನು ಸೀರೆನಾಡು,[1] ಸೀರೆ ಮುನ್ನೂರು,[2] ಸಿರೆಹಸೀಮೆ[3] ಮುಂತಾದ ಹೆಸರುಗಳಿಂದ

ಕರೆಯಲಾಗಿದೆ. ಸಿರಾ ನಗರದ ಮೂಲವನ್ನು ಗುರುತಿಸುತ್ತಾ ಇತಿಹಾಸಕಾರರಾದ ಎಂ.ಚಿತ್ರಲಿಂಗಯ್ಯನವರು ಸಿಬಿರಕಂ-ಶಿವಿರಯಂ, ಸೀರಯಂ, ಸೀರ್ಯ ಎಂದು ತಿಳಿಸಿದ್ದಾರೆ.[೪] ಕೊತ್ತ ಶಿವಿರಂ, ದಂಡಿನ ಶಿಬಿರಗಳನ್ನು ಉದಾಹರಿಸುತ್ತಾ ದೇವನ ಸೀರ್ಯವು ದೇವನ ಸಿವಿರವೆಂದು ಸಿಬಿರವೆಂಬ ಪದರ ಮೂಲವನ್ನು ಸಮರ್ಥಿಸುತ್ತಾರೆ.

ಇಕ್ಕೇರಿಯನ್ನು ಕೇಂದ್ರವಾಗಿರಿಸಿಕೊಂಡು ಕೆಳದಿಯವರೂ, ಶ್ರೀರಂಗಪಟ್ಟಣದಲ್ಲಿ ಮೈಸೂರು ಒಡೆಯರು, ಬಿಜಾಪುರದಿಂದ ಆದಿಲ್ ಶಾಹಿಗಳು ಆಳ್ವಿಕೆ ಮಾಡುತ್ತಿದ್ದರು. ಸಿರಾವು ಮೈಸೂರು ಮತ್ತು ಬಿಜಾಪುರ ರಾಜ್ಯಕ್ಕೂ ಮಧ್ಯಭಾಗದಲ್ಲಿದ್ದು ಆಯಕಟ್ಟಿನ ಪ್ರದೇಶವಾಗಿತ್ತು. ಬಿಜಾಪುರವನ್ನು ಕ್ರಿ.ಶ ೧೬೨೬ರಿಂದ ೧೬೫೬ರ ವರೆಗೆ ಆಳಿದ ಮಹಮದ್ ಆದಿಲ್‌ಶಾನ ದಂಡನಾಯಕನೇ ರಣದುಲ್ಲಾಖಾನ್. ಇವನ ದಾಳಿಗೆ ಬಲಿಯಾದುದು ಇಕ್ಕೇರಿ. ಇದರಿಂದ ಉತ್ತೇಜಿತನಾದ ಸುಲ್ತಾನ ಮೈಸೂರನ್ನು ಗೆಲ್ಲಲು ಖಾನನನ್ನು ಕ್ರಿ.ಶ ೧೬೩೮ರಲ್ಲಿ ಕಳುಹಿಸಿದನೆಂದು ತಿಳಿದುಬರುತ್ತದೆ. ಈ ದಂಡಯಾತ್ರೆಗೆ ರಣದುಲ್ಲಾಖಾನನ ಜೊತೆಗೆ ಶಿವಾಜಿಯ ತಂದೆ ಷಹಜಿಯನ್ನು ದ್ವಿತೀಯ ಸೇನಾಧಿಪತಿಯನ್ನಾಗಿ ಕಳುಹಿಸಿದ್ದು ಗೆದ್ದ ಪ್ರದೇಶಗಳಲ್ಲೊಂದನ್ನು ಜಾಗೀರು ಕೊಡುವ ವಾಗ್ದಾನದ ಮೇಲೆ ಎಂದು ಹೇಳಲಾಗಿದೆ.[೫] ಇದರಿಂದ ಷಹಜಿಯು ಖಾನನ ಜೊತೆಗೂಡಿ ೫೦ ಸಾವಿರ ಕುದುರೆ, ೫೦೦ ಆನೆ, ನಾಲ್ಕು ಲಕ್ಷ ಕಾಲ್ದಳ ಸಮೇತ[೬] ದಕ್ಷಿಣದ ಕಡೆಗೆ ಹೊರಟನು. ಮಾರ್ಗದುದ್ದಕ್ಕೂ ಕೆಂಗಮನ್ನೆಯ ಹನುಮ (ಬಸವಾ ಪಟ್ಟಣದವನು. 'ಗುಮ್ಮನಹಳ್ಳಿ ಕದನ' ಲಾವಣಿಯಲ್ಲಿ ಉಲ್ಲೇಖಿತನಾಗಿರುವ ಕೆಂಗಣ್ಣನಾಯಕ) ತನ್ನ ಸೈನ್ಯದೊಡನೆ ಉತ್ಸಾಹದಿಂದ ಭಾಗವಹಿಸಿದನು. ಸಿರಾಕ್ಕೆ ಉತ್ತರ ದಿಕ್ಕಿನಲ್ಲಿ ರಾಜ್ಯಗಳನ್ನು ಧೂಳೀಪಟಮಾಡಿದ ಖಾನನು ಅತ್ಯುತ್ಸಾಹದಿಂದ ಮುನ್ನುಗ್ಗಿದನು. ಕೆಂಗಹನುಮನು ಖಾನನಿಗೆ ಸಿರಾದ ಮೇಲೆ ದಾಳಿ ಮಾಡುವಂತೆ ಪ್ರೇರೇಪಿಸಿದನು. ಇವನು ಸಿರಾವನ್ನು ಆಳುತ್ತಿದ್ದ ರತ್ನಗಿರಿ ಪಾಳೇಗಾರರಿಂದ ತನಗಾದ ಅವಮಾನ, ಸೇಡನ್ನು ತೀರಿಸಿಕೊಳ್ಳಲು ಖಾನನನ್ನು ಸಿರಾದ ಮೇಲೆ ಧಾಳಿ ಮಾಡಲು ಆಹ್ವಾನಿಸಿದನು ಎಂದು ಬಿ.ಎಲ್. ರೈಸ್‌ರು[೭] ಮತ್ತು ಹಯವದನರಾಯರು[೮] ಅಭಿಪ್ರಾಯ ಪಡುತ್ತಾರೆ. ಇದೇ ಗುಮ್ಮನಹಳ್ಳಿ ಕದನಕ್ಕೆ ಕಾರಣವಾದ ಪ್ರಸಂಗ. ಸೇನಾಪತಿ ರಣದುಲ್ಲಾಖಾನನು ಕೆಂಗಹನುಮನೊಡನೆ ಸಿರಾ ಕೋಟೆಗೆ ಮುತ್ತಿಗೆ ಹಾಕಿದನು. ಆ ಕೋಟೆಯನ್ನು ಸ್ವಾದೀನದಲ್ಲಿಟ್ಟುಕೊಂಡಿದ್ದ ರತ್ನಗಿರಿ ಪಾಳೇಗಾರರ ರಂಗಪ್ಪರಾಜ ಭಲವಾಗಿ ಪ್ರತಿಭಟಿಸಿದ. ಬಹಳ ದಿನಗಳ ಕಾಲ ಯುದ್ಧ ಮುಂದುವರೆದು ಕೊನೆಗೆ ಖಾನನು ಸಿರಾವನ್ನು ಲೂಟಿಮಾಡಿ ರಂಗಪ್ಪನನ್ನು ಕೊಂದು ಹಾಕಿದನು. ಸಿರಾ ಮತ್ತು ಅದರ ಅವಲಂಬಿತ ಪ್ರಾಂತ್ಯವನ್ನು ಗೆದ್ದು 'ಮಲ್ಲಿಕ್ ಹುಸೇನ್' ಎಂಬುವನನ್ನು ನೇಮಕ ಮಾಡಿದನು.[೯] ಹೀಗೆ ಸಿರಾ ಮತ್ತು ರತ್ನಗಿರಿ ಸ್ವಾದೀನ ಪಡಿಸಿಕೊಂಡು ಆಡಳಿತ ನಡೆಸುತ್ತಿದ್ದ ಕಾಲದಲ್ಲಿ ಖಾಸಿಂಖಾನ್ ಎಂಬುವವನು ಸುಬೇದಾರನಿಗೂ ರತ್ನಗಿರಿಯವರಿಗೂ ರಾಜಿ ಮಾಡಿಸಿ ಎರಡು ಲಕ್ಷ

ರಾಜ್ಯದಲ್ಲಿ ಮೂರು ಭಾಗ ಮಾಡಿ ಎರಡು ಭಾಗ ಸಿರಾದವರಿಗೂ ಉಳಿದುದನ್ನು ರತ್ನಗಿರಿಯವರಿಗೂ ಹಂಚಿಕೊಟ್ಟು ಸಿರಾದಲ್ಲಿ ಮುಸಲ್ಮಾನರ ಆಡಳಿತವನ್ನು ಭದ್ರಗೊಳಿಸಿದನು.[೨೮] ಮಲ್ಲಿಕ್ ಹುಸೇನನ ನಂತರ ಈ ಎಲ್ಲಾ ಪ್ರದೇಶಕ್ಕೆ ಶಿವಾಜಿಯ ತಂದೆ ಷಹಜಿಯನ್ನು ಜಾಗೀರ್‌ದಾರನನ್ನಾಗಿ ಮಾಡಿದಂತೆ ತಿಳಿಯುವುದು.[೨೯]

ಮೊಗಲರ ಔರಂಗಾಜೇಬ್ ದಕ್ಷಿಣ ಭಾರತದ ಮೇಲೆ ದಾಳಿ ನಡೆಸಿದಂತಹ ಸಮಯದಲ್ಲಿ ಗೋಲ್ಕಂಡ ಮತ್ತು ಬಿಜಾಪುರಗಳು ಅವನ ವಶವಾದವು. ಬಿಜಾಪುರಕ್ಕೆ ಅಧೀನವಾಗಿದ್ದ ಪ್ರದೇಶಗಳೆಲ್ಲವೂ ಮೊಗಲ್ ಸಾಮ್ರಾಟನ ಅಧೀನಕ್ಕೆ ಬಂದವು. ಈ ಪ್ರದೇಶಗಳ ಆಡಳಿತ ನಿರ್ವಹಣೆಗೆ ಕಿಲ್ಲೇದಾರರು, ಭಕ್ಷುಗಳು, ಮಸಬ್‌ದಾರರು, ಸುಬೇದಾರರು, ದೇಸಾಯಿಗಳು ಎಂಬ ಹೊಸ ಅಧಿಕಾರಿಗಳನ್ನು ನೇಮಿಸಿದರು. ಇಂತಹ ಸಮಯದಲ್ಲಿ ಬಸವಾಪಟ್ಟಣ, ಬೂದಿಹಾಳು, ಸಿರಾ, ಪೆನುಗೊಂಡ, ಕೋಲಾರ, ಹೊಸಕೋಟೆ, ದೊಡ್ಡಬಳ್ಳಾಪುರ ಮುಂತಾದ ಏಳು ಪರಗಣಗಳಿಗೆ ಸಿರಾವನ್ನು ಆಡಳಿತ ಕೇಂದ್ರವನ್ನಾಗಿ ಮಾಡಲಾಯಿತು. ಹರಪನಹಳ್ಳಿ, ಕುಂದರ್ಪಿ, ಆನೆಗೊಂದಿ, ಬಿದನೂರು, ಚಿತ್ರದುರ್ಗ ಮೈಸೂರು ಎಂಬ ಆಶ್ರಿತ ರಾಜ್ಯಗಳಿಂದ ಸಿರಾವು ಬೆಳಗುತ್ತಾ ಪ್ರಸಿದ್ಧಿಗೆ ಬಂದಿತು. ದಕ್ಷ ಆಡಳಿತಗಾರನಾಗಿದ್ದ ಖಾಸಿಂಖಾನನು ಸಿರಾವನ್ನು ಮೊಗಲರ ಒಂದು ಪ್ರಮುಖ ಕೇಂದ್ರ ಹಾಗೂ ಮಿಲಿಟರಿ ನೆಲೆಯನ್ನಾಗಿ ಪರಿವರ್ತಿಸಲು ಶ್ರಮಿಸಿದನು. ಪೌಜುದಾರಿ ದಿವಾನ್ ಎಂಬ ಬಿರುದುಗಳಿಸಿ ರಾಜ್ಯದಲ್ಲಿ ಮುಸಲ್ಮಾನ್ ರೆವಿನ್ಯು ಪದ್ಧತಿಯನ್ನು ಜಾರಿಗೆ ತಂದು ಜಮಿಯಾಮಸೀದಿಯನ್ನು ನಿರ್ಮಿಸಿದನು. ಇದೇ ಸಂದರ್ಭದಲ್ಲಿ ಮರಾಠರ ಸಂತೋಜಿ ಘೋರ್ಪಡೆಯು ತೊಂಬತ್ತು ಸಾವಿರ ಆಶ್ವದಳದೊಡನೆ ಚಿತ್ರದುರ್ಗದ ಕಡೆಗೆ ಬಂದನು. ಸಿರಾದ ಖಾಸಿಂಖಾನನೂ ಕೂಡ ತನ್ನ ಪ್ರಾಂತ್ಯವನ್ನು ವಿಸ್ತರಿಸಲು ತಳಕಿನಿಂದ ದೊಡ್ಡೇರಿ ತನಕ ಹಲವಾರು ಯುದ್ಧಗಳನ್ನು ಮಾಡುತ್ತಾ ದೊಡ್ಡೇರಿ ಕೋಟೆಯಲ್ಲಿ ತಂಗಿದ್ದನು. ಅಲ್ಲಿಗೆ ಆಗಮಿಸಿದ ಮರಾಠರ ಸೇನೆ ದುರ್ಗದ ಭರಮಪ್ಪ ನಾಯಕನ ಸಹಾಯ ಪಡೆದು ದೊಡ್ಡೇರಿ ಮೇಲೆ ಆಕ್ರಮಣ ಮಾಡಿತು. ದಾಳಿಯಿಂದ ಧೃತಿಗೆಡದ ಖಾನನು ವೀರವೇಷದಿಂದ ಹೋರಾಡಿದರೂ ಫಲ ನೀಡದೆ ಯುದ್ಧದಲ್ಲಿ ಖಾಸಿಂಖಾನ್ ಮೃತಪಟ್ಟನು.[೩೦] ನಂತರ ಜುಲ್ಫೀಕರ್ ಖಾನನು ಸಿರಾದ ನವಾಬನಾದನು.

ಮೊಗಲರ ಚಕ್ರವರ್ತಿ ಔರಂಗಜೇಬನ ಕೊನೆಯ ಕಾಲದಲ್ಲಿ ಮೊಗಲರ ಸ್ಥಾನಮಾನಗಳು ಕುಗ್ಗತೊಡಗಿದವು. ಆ ವೇಳೆಗಾಗಲೇ ಮೈಸೂರು ಸಂಸ್ಥಾನ ಪ್ರಬುದ್ಧಮಾನಕ್ಕೆ ಬಂದಿತು. ಮೊಗಲರ ದುರ್ಬಲ ಸ್ಥಿತಿಯನ್ನು ಉಪಯೋಗಿಸಿಕೊಂಡ ಮೈಸೂರಿನ ಚಿಕ್ಕದೇವರಾಜ ಒಡೆಯರು ಸಿರಾದ ಮೇಲೆ ದಾಳಿ ಮಾಡಿ ಮೊಗಲ್ ಸರ್ಕಾರಕ್ಕೆ ಸಲ್ಲಿಸಬೇಕೆಂದು ಇಟ್ಟುಕೊಂಡಿದ್ದ ಕಪ್ಪಕಾಣಿಕೆಯ ಹಣವನ್ನು ಲೂಟಿ ಮಾಡಿದನು. ಕ್ರಿ.ಶ. ೧೭೨೪ರಲ್ಲಿ ಫಡದುಲ್ಲಾಖಾನನು ಸಿರಾದ ನವಾಬನಾದನು. ಇವನ ನಂತರ ದವೊದ್ ಖಾನ್, ನಿಜಾಮ್ ಉಲ್ ಮುಲ್, ಅಮೀನ್

ಖಾನ್,[೧೩] ಎರಡನೇ ದರ್ಗಾ ಕೂಲಿಖಾನ್ ಕ್ರಮವಾಗಿ ನವಾಬರಾಗಿ ಆಳ್ವಿಕೆ ಮಾಡಿದರು. ೧೭೨೪ರಲ್ಲಿ ನವಾಬ ಸಾದತ್ ಖಾನನು ಸಿರಾದ ಮೇಲೆ ಆಕ್ರಮಣ ಮಾಡಿ ಸಿರಾವನ್ನು ಆರ್ಕಾಟಿನ ಆದಿಪತ್ಯಕ್ಕೆ ಒಳಪಡಿಸಿದನು. ತನ್ನ ಕಡೆಯ ಅಬ್ದುಲ್ ನಭೀ ತಾಹರ್‌ಖಾನ್ ಎಂಬುವನನ್ನು ನವಾಬನನ್ನಾಗಿ ಮಾಡಿದನು. ಇವನ ನಂತರ ಕ್ರಿ.ಶ. ೧೭೪೨ರಲ್ಲಿ ದಿಲಾವರ್ ಖಾನನು ಸಿರಾದ ನವಾಬನಾದನು. ಇವನು ದಕ್ಷನೂ ಶ್ರೇಷ್ಠನೂ ಆಗಿದ್ದು ನೆರೆಯ ರಾಜ್ಯಗಳೊಡನೆ ಶಾಂತಿಯಿಂದಿದ್ದನು. ಈ ನವಾಬನ ಕಾಲದಲ್ಲಿ ಸಿರಾದಲ್ಲಿ ಐವತ್ತು ಸಾವಿರ ಮನೆಗಳಿದ್ದವು. ಅಲ್ಲಿ ಸುಂದರವಾದ ಅರಮನೆಯನ್ನು ಕೂಡ ಕಟ್ಟಿಸಿದನು. ಟಿಪ್ಪು ಪ್ರಭಾವಿತನಾಗಿ ಅದೇ ಮಾಧರಿಯ ಅರಮನೆಯನ್ನು ಬೆಂಗಳೂರು ಮತ್ತು ಶ್ರೀರಂಗಪಟ್ಟಣಗಳಲ್ಲಿ ನಿರ್ಮಿಸಿದನು.[೧೪] ಇದರಿಂದ ಸಿರಾನಗರ ಅಂದಿನ ಸಾಮಾಜಿಕ, ಆರ್ಥಿಕ ಕ್ಷೇತ್ರದಲ್ಲಿ ಎಷ್ಟು ಮುಂದುವರೆದಿತ್ತೆಂದು ತಿಳಿಯುತ್ತದೆ. ಇದೇ ಸಂದರ್ಭದಲ್ಲಿ ಪೂನಾದ ಶ್ರೀಮಂತ ಪೇಶ್ವೆ ಬಾಲಾಜಿ ಬಾಬೂರಾವ್ ಮೈಸೂರಿನ ಪ್ರದೇಶಗಳ ಮೇಲೆ ಮುತ್ತಿಗೆ ಮಾಡಲಾರಂಬಿಸಿದನು. ಸಿರಾದ ಮೇಲೆ ನಡೆದ ಯುದ್ಧದಲ್ಲಿ ದಿಲಾವರ್‌ಖಾನನು ಪರಾಭವ ಹೊಂದಿದನು.[೧೫] ಹೀಗೆ ಸಿರಾವು ಮರಾಠರ ಅಧೀನಕ್ಕೆ ಒಳಗಾಯಿತು. ೧೭೫೭ರಿಂದ ೧೭೬೧ರ ವರೆಗೆ ಇಲ್ಲಿ ಮರಾಠರು ಆಳ್ವಿಕೆ ನಡೆಸಿದರು. ನಂತರ ಮೈಸೂರಿನ ಹೈದರಾಲಿಯು ಹೊಸಕೋಟೆಯಲ್ಲಿ ಬಸಾಲತ್ ಜಂಗ್‌ನೊಡನೆ ಒಪ್ಪಂದ ಮಾಡಿಕೊಂಡು ಸಿರಾದ ಮೇಲೆ ದಾಳಿ ಮಾಡಿ ಅಲ್ಲಿಂದ ಮರಾಠರನ್ನು ಹೊಡೆದೋಡಿಸಿದನು. ಹೈದಾರಾಲಿ ಸಿರಾದ ನವಾಬನೆಂದು ಬಿರುದನು ಧರಿಸಿದನು. ಕ್ರಿ.ಶ. ೧೭೬೬ರಲ್ಲಿ ಪುನಃ ಮರಾಠರು ಸಿರಾವನ್ನು ಆಕ್ರಮಿಸಿದರು. ಹೀಗೆ ಸಿರಾ ಮರಾಠರ, ಮೈಸೂರರ ದಾಳಿಗೆ ತುತ್ತಾಗಿ ಸಾಕಷ್ಟು ಸಂಕಷ್ಟ ಅನುಭವಿಸಿತು. ಕ್ರಿ.ಶ. ೧೭೭೪ರಲ್ಲಿ ಮತ್ತೆ ಟಿಪ್ಪುಸುಲ್ತಾನ್ ಸಿರಾವನ್ನು ಗೆದ್ದುಕೊಂಡು ಮೈಸೂರಿನಲ್ಲಿ ವಿಲೀನಗೊಳಿಸಿದನು. ಈ ಸಮಯದಲ್ಲಿ ಗಂಜಾಂಮನ್ನು ವಿಸ್ತಾರಗೊಳಿಸುವ ಉದ್ದೇಶದಿಂದ ಸಿರಾದಿಂದ ೧೨ ಸಾವಿರ ಸಂಸಾರಗಳನ್ನು ಬಲವಂತದಿಂದ ಅಲ್ಲಿಗೆ ಸಾಗಿಸಿದನು. ಈ ಗಲಬೆಗಳಿಂದ ಹಾಗೂ ಮರಾಠರ ಧಾಳಿಗಳಿಂದ ಸಿರಾವು ಐವತ್ತು ಸಾವಿರ ಮನೆಗಳಿಂದ ಕೇವಲ ಮೂರು ಸಾವಿರ ಮನೆಗಳಿಗಿಳಿಯಿತು.[೧೬] ಕ್ರಿ.ಶ.೧೭೯೯ರಲ್ಲಿ ನಾಲ್ಕನೇ ಮೈಸೂರು ಯುದ್ದದಲ್ಲಿ ಟಿಪ್ಪು ಹತನಾಗಿ ಸಿರಾವು ಮೈಸೂರು ಒಡೆಯರಾದ ಮುಮ್ಮಡಿ ಕೃಷ್ಣರಾಜ ಒಡೆಯರ ರಾಜ್ಯದಲ್ಲಿ ವಿಲೀನವಾಯಿತು.[೧೭] ಹೀಗೆ ಈ ಪ್ರದೇಶವು ಪಾಳೇಗಾರರು, ನವಾಬರು, ಮರಾಠರು, ಮೈಸೂರರ ಆಳ್ವಿಕೆಗೆ ಒಳಪಟ್ಟು ಕೊನೆಗೆ ಟಿಪ್ಪು ಇಲ್ಲಿನ ಸಂಸಾರಗಳನ್ನು ಸ್ಥಳಾಂತರಿಸಿದರಿಂದ ಹಾಳಾಯಿತು. ಇಲ್ಲಿನ ಕೋಟೆಯನ್ನು ರತ್ನಗಿರಿ ಪಾಳೇಗಾರ ರಂಗಪ್ಪನಾಯಕ ಕಟ್ಟಿಸಿದನೆಂದು ಇತಿಹಾಸಕಾರರು ಹೇಳುತ್ತಾರೆ. ಆದರೆ ಅದು ಪೂರ್ಣಗೊಳ್ಳುವಷ್ಟರಲ್ಲಿ ಬಿಜಾಪುರದ ದಂಡನಾಯಕ ರಣದುಲ್ಲಾಖಾನ್ ಆಕ್ರಮಿಸಿಕೊಂಡನು. ನಂತರ ಇಲ್ಲಿ ಸುಬೇದಾರನಾಗಿದ್ದ ಮಲ್ಲಿಕ್ ಹುಸೇನನು ಕೋಟೆಯನ್ನು ಪೂರ್ಣಗೊಳಿಸಿದನೆಂದು

ತಿಳಿದುಬರುತ್ತದೆ. ಸುಮಾರು ಒಂದುನೂರಾ ನಲವತ್ತಕ್ಕೂ ಹೆಚ್ಚು ಶಾಸನಗಳು ಈ ಪ್ರಾಂತ್ಯದಲ್ಲಿ ಲಭಿಸಿವೆ.[೨೮] ಚೋಳ, ನೊಳಂಬ, ಮೊಗಲರ ಸಾಂಸ್ಕೃತಿಕ ಧಾರ್ಮಿಕ ಇತಿಹಾಸ ಅಧ್ಯಯನದ ಪ್ರಮುಖ ಕೇಂದ್ರವಾಗಿದೆ. ರಂಗಪ್ಪ ನಾಯಕನ ಆಳ್ವಿಕೆಯ ಕಾಲದಲ್ಲಿ ವೈಭವಯುತವಾಗಿ ಮೆರೆದು ಕೊನೆಗೆ ಬಿಜಾಪುರದ ರಣದುಲ್ಲಾಖಾನನ ಆಕ್ರಮಣಕ್ಕೆ ತುತ್ತಾಗಿದೆ. ನೊಳಂಬ ಚೋಳರ ಕಾಲದ ದೇವಾಲಯಗಳು ಬರಗೂರು, ಸಿರಾ, ಮದಲೂರು, ಹೇಮಾವತಿ, ನಾದೂರು ಮೊದಲಾದ ಕಡೆ ಕಂಡುಬರುತ್ತವೆ. ಮೊಗಲರ ಕಾಲದ ಕಟ್ಟಡ ಮಸೀದಿಗಳು ಇತಿಹಾಸದ ಕತೆಯನ್ನು ಸಾರಿಹೇಳುತ್ತವೆ. ಹದಿನೇಳನೇ ಶತಮಾನದ ಪ್ರಮುಖ ಕಟ್ಟಡ, ಮಸೀದಿಗಳಾದ ಜುಮ್ಮಾ ಮಸೀದಿ, ಮಲ್ಲಿಕ್ ರಿಹಾನ್‌ದರ್ಗಾ, ಬರಕಿ ಮಸೀದಿ, ಔರಂಗಾಜೇಬನ ಮಗಳ ಗೋರಿ, ಈದ್ಗಾ, ಇಬ್ರಾಹಿಂ, ಚೋಟಮಸೀದಿ, ಇಷೇರಿತದರ್ಗ,ಬೇಗುಂಬಿ ಮಸೀದಿಗಳು ಕಂಡುಬರುತ್ತವೆ. ಇವು ಪರ್ಶಿಯನ್ ಶೈಲಿಗೆ ಹೆಸರಾಗಿವೆ. ಹೈದರಾಲಿ, ಟಿಪ್ಪುವಿನ ಅರಮನೆಗಳು, ಬೆಂಗಳೂರಿನ ಲಾಲ್‌ಬಾಗ್, ನಂದಿಬೆಟ್ಟದ ಟಿಪ್ಪುವಿನ ಬೇಸಿಗೆ ಅರಮನೆ ಈ ಎಲ್ಲಕ್ಕೂ ಮೂಲ ಪ್ರೇರಣೆ ಹಾಗೂ ಇದೇ ಮಾಧರಿಯ ಅನುಕರಣೆ ಎಂದು ಹೇಳಲಾಗುತ್ತದೆ.

ನೊಳಂಬರ ಮೂಲದ ಅಧಿಕೃತ ದಾಖಲೆ ಕ್ರಿ.ಶ. ೯೪೩ರದ್ದಾಗಿದ್ದು ಸಿರಾ ತಾಲ್ಲೂಕಿನಲ್ಲಿ ದೊರಕಿದೆ. ಇದರಲ್ಲಿ ನೊಳಂಬ ದೊರೆಗಳ ವಂಶಾವಳಿಯ ಬಗ್ಗೆ ಉಲ್ಲೇಖವಿದೆ. (ಜಯಮಂಗಲಿ. ಶ್ರೀನಿವಾಸಯ್ಯನವರ ಲೇಖನದ ಆಧಾರ.)

ಸಿರಾದ ಮೂವತ್ತೆಂಟನೆಯ ಶಾಸನದಲ್ಲಿ ಮಹೇಂದ್ರನು ಬರಗೂರಿನಲ್ಲಿ ಬೀಡುಬಿಟ್ಟಾಗ ಅಲ್ಲಿಯ ಅದಿದೈವ ಮಹಾದೇವನಿಗೆ ತನ್ನ ಅರಮನೆಯನ್ನೇ ದತ್ತಿ ನೀಡಿ ಮಹೇಂದ್ರೇಶ್ವರ ಮೂರ್ತಿ ಪ್ರತಿಷ್ಠಾಪಿಸಿ ಅದರ ಪೂಜೆ-ಸೇವಾಕಾರ್ಯಗಳಿಗೆ ಸಿರಾ ನಾಡಿನ ನಾದೂರು ಪ್ರಾಂತ್ಯವನ್ನು ದೇವಾಲಯದ ದತ್ತಿಗಾಗಿ ನೀಡಿದ್ದನೆಂದು ತಿಳಿದುಬರುತ್ತದೆ.[೨೯]

ಸ್ವತಂತ್ರ ಹೋರಾಟದಲ್ಲೂ ತಾಲ್ಲೂಕಿನ ಕೊಡುಗೆ ಅಮೂಲ್ಯವಾದದ್ದು. ೧೯೩೯ರಲ್ಲಿ ಅರಣ್ಯ ಸತ್ಯಾಗ್ರಹ ಅಥವಾ ಜಂಗಲ್ ಸತ್ಯಾಗ್ರಹಗಳ ಕಾಲದಲ್ಲಿ ಸಿರಾ ತಾಲ್ಲೂಕಿನ ಎಲೆಯೂರು, ವದ್ದನಹಳ್ಳಿ, ತಾವರೇಕೆರೆಗಳಲ್ಲಿ ಚಳುವಳಿಗಳು ನಡೆದಿದ್ದು ತಾವರೆಕೆರೆಯಲ್ಲಿ ಮಾಲಿ ಮರಿಯಪ್ಪನವರ ನೇತೃತ್ವದಲ್ಲಿ ಈಚಲು ಮರಗಳನ್ನು ಕಡಿಯತೊಡಗಿದರು. ಮಾಲಿ ಮರಿಯಪ್ಪ, ಎಚ್.ಆರ್. ದಾಸೇಗೌಡ, ಬಿ. ಕೆಂಚಣ್ಣ, ತಾವರೇಕೆರೆ ಶೇಷಾದ್ರಿ ಐಯ್ಯಂಗಾರ್, ಎ.ಎಮ್. ಕಾಮಗೌಡ ಇವರನ್ನು ಅಬಕಾರಿ ಸಿಬ್ಬಂದಿ ಬಂದಿಸಿ ನೂರಿಪ್ಪತ್ತೈದು ರೂಪಾಯಿ ದಂಡ ಆರು ತಿಂಗಳು ಸಜೆ ವಿಧಿಸಿದರು. ಸಿರಾದ ಎ. ಗುಂಡೂರಾವ್, ಯಲಿಯೂರು ಸಿದ್ದಲಿಂಗಪ್ಪ, ಸಿದ್ದಪ್ಪ ಕೆ.ಎಲ್. ನರಸಿಂಹಯ್ಯ ಮೊದಲಾದವರು ಬಂಧನಕ್ಕೊಳಗಾದರು. ಕರ ನಿರಾಕರಣ ಚಳುವಳಿಯಲ್ಲಿಯೂ ತಾಲ್ಲೂಕಿನ ಕೊಡುಗೆ ಮಹತ್ತರವಾದುದಾಗಿದೆ.[೩೦]

ನೆರೆಯ ಆಂಧ್ರ ಪ್ರದೇಶದ 'ಹೇಮಾವತಿ' ನೊಳಂಬರ ರಾಜಧಾನಿಯಾಗಿದ್ದ ಸಂದರ್ಭದಲ್ಲಿ ಹೇಮಾವತಿಯ ಅರಸರು ಸಿರಾ ಭಾಗದ ಸುಮಾರು ಅರ್ಧಕ್ಕಿಂತ ಹೆಚ್ಚು ಭಾಗವನ್ನು ಪ್ರಮುಖ ಸಂಪರ್ಕ ಕೇಂದ್ರವನ್ನಾಗಿಸಿಕೊಂಡಿದ್ದರು. ಸಿರಾ ತಾಲ್ಲೂಕಿನ ಬರಗೂರು ಗ್ರಾಮ ಹೇಮಾವತಿ ಸಂಸ್ಥಾನಕ್ಕೆ 'ಬರಗು' ಎಂಬ ಒಂದು ಜಾತಿ ಹುಲ್ಲನ್ನು ಕುದುರೆಗಳಿಗೆ ಒದಗಿಸುತ್ತಿದ್ದ ಪ್ರಮುಖ ಸ್ಥಳವಾಗಿದೆ. ಚಂಗಾವರ, ಪಟ್ಟನಾಯಕನಹಳ್ಳಿ, ಸಿರಾ ಮೊದಲಾದ ಸ್ಥಳಗಳು ಪಾಳೇಗಾರ ಪರಂಪರೆಯ ಪ್ರಮುಖ ನೆಲೆಗಳೆನಿಸಿದವು. ಚಂಗಾವರದ ಚದುರಂಗದ ಕಾವಲು, ಬೇವಿನಹಳ್ಳಿ, ಪುರಲೇಹಳ್ಳಿ ಮೊದಲಾದ ಸ್ಥಳಗಳು ಜುಂಜಪ್ಪ-ಎತ್ತಪ್ಪರ ಕಾವ್ಯಗಳಲ್ಲಿ ಪ್ರಮುಖ ಘಟನಾವಳಿಗಳ ಭಾಗಗಳಾಗಿವೆ.

ಸೀರಾದ ನೆಲ ಅನೇಕ ಜನಪದ ಕತೆ, ಕಾವ್ಯ, ಮಹಾಕಾವ್ಯಗಳನ್ನು ಒಡಲಲ್ಲಿಟ್ಟುಕೊಂಡಿದ್ದು ಐತಿಹಾಸಿಕ ವ್ಯಕ್ತಿಗಳ ಸಾಹಸಮಯ ರಂಜನೆಯ ಬದುಕನ್ನು ಜನಪದೀಯವಾಗಿ ಕಟ್ಟಿಕೊಡುತ್ತವೆ. ರಂಗಪ್ಪನಾಯಕ, ವೀರನಾಗಮ್ಮ, ಬೊಪ್ಪರಾಯ, ನಂಜಾವಧೂತ, ಕರಿಯಮ್ಮ, ಜುಂಜಪ್ಪ, ಎತ್ತಪ್ಪ, ಬೂತಪ್ಪ ಮೊದಲಾದ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ನಾಯಕರ ಸ್ಥಳಗಳ ಬಗ್ಗೆ ದಾಖಲೆಗಳನ್ನು ಒದಗಿಸುತ್ತವೆ.

**ಸಿರಾ ತಾಲ್ಲೂಕಿನ ಸಾಂಸ್ಕೃತಿಕ ಪರಿಸರ :**

ಸಿರಾ ಸೀಮೆ ತುಮಕೂರು ಜಿಲ್ಲೆಯ ಜಾನಪದ ಗಣಿ. ಕುಂಚಿಟಿಗರು, ಕಾಡುಗೊಲ್ಲರು, ಕುರುಬರು, ಹರಿಜನರು ಹೆಚ್ಚಾಗಿ ನೆಲೆಸಿರುವ ಈ ಪ್ರದೇಶದ ಗ್ರಾಮೀಣ ಜನರ ಬಾಯಲ್ಲಿ ಜನಪದ ಕಥೆ, ಕಾವ್ಯ, ಮಹಾಕಾವ್ಯ, ಖಂಡಕಾವ್ಯಗಳು, ಲಾವಣಿಗಳು ನಲಿದಾಡುತ್ತವೆ. ಗುಮ್ಮನಹಳ್ಳಿ ಕದನದಂತಹ ಐತಿಹಾಸಿಕ ಕಾವ್ಯ, ಚಿತ್ರದೇವರಕಾವ್ಯ, ಮಾಗೋಡು ರಂಗನಕಾವ್ಯ, ಎತ್ತಪ್ಪನಕಾವ್ಯ, ಜುಂಜಪ್ಪನಕಾವ್ಯ, ವೀರನಾಗಮ್ಮನ ಪದಗಳು, ಮಣ್ಣಮ್ಮನ ಪದಗಳು ಸಿರಾ ಪ್ರಾಂತ್ಯದ ಗ್ರಾಮ ಗ್ರಾಮಗಳಲ್ಲೂ ಭಿನ್ನತೆಯಿಂದ ಹಾಡಲ್ಪಡುತ್ತವೆ.

**ಧಾರ್ಮಿಕ ಸಮನ್ವಯ ಕೇಂದ್ರವಾಗಿ :**

ಕಾಡುಗೊಲ್ಲರ ಪುರಾಣ ಪುರುಷರಾದ ಚಿತ್ರದೇವರು, ಕಾಟಲಿಂಗೇಶ್ವರರು, ಜುಂಜಪ್ಪ, ಎತ್ತಪ್ಪ, ಮೊದಲಾದವರು, ರಂಗನಾಥ ಬೂತಪ್ಪ, ಕರಿಯಮ್ಮ, ಮಣ್ಣಮ್ಮ, ಲಕ್ಕಮ್ಮ, ಪೀರಮ್ಮ ಮೊದಲಾದವರು ಭಕ್ತಿ ಬಾವದಿಂದ ಆರಾಧಿಸಲ್ಪಡುತ್ತಿದ್ದಾರೆ. ಜುಂಜಪ್ಪನ ಕಾವ್ಯದಲ್ಲಿ ಜುಂಜಪ್ಪನ ಹುಟ್ಟು ಈ ತಾಲ್ಲೂಕಿನ 'ಕಳುವೋರಹಳ್ಳಿ' ಎಂಬುದು ಮುಖ್ಯವಾದ ಸಂಗತಿ. ಈ ಪ್ರಾಂತ್ಯದಲ್ಲಿ ಬರುವ ಪಟ್ಟನಾಯಕನಹಳ್ಳಿ ಶ್ರೀ ಗುರುಗುಂಡ ಬ್ರಹ್ಮೇಶ್ವರರ ಮಠ ಒಂದು ಪವಿತ್ರ ಧಾರ್ಮಿಕ ಸಮನ್ವಯ ಕೇಂದ್ರ. ಜಾತಿ ಮತ ಬೇದವಿಲ್ಲದೆ ಅನ್ನದಾಸೋಹ, ಜ್ಞಾನದಾಸೋಹ ನಡೆಯುತ್ತಿದೆ.

ಶ್ರೀ ನಂಜಾವಧೂತರ ನೇತೃತ್ವದಲ್ಲಿ ಕ್ರಿಯಾಶೀಲವಾಗಿ ಬೆಳೆಯುತ್ತಿದೆ. ಸಿರಾ-ಅಮರಾವತಿ ದಾರಿಯಲ್ಲಿರುವ ಗಂಡಿಹಳ್ಳಿ ಮಠ ಮತ್ತೊಂದು ಧಾರ್ಮಿಕ ಸಮನ್ವಯ ಕೇಂದ್ರ ಹಿಂದೂ-ಮುಸ್ಲಿಂ ಸಂಸ್ಕೃತಿಗಳು ಐಕ್ಯಗೊಂಡು ಶಾಂತಿ ಸಹಬಾಳ್ವೆಗೆ ಹೆಸರಾಗಿದೆ. ಸೀಬಿ ನರಸಿಂಹಸ್ವಾಮಿ ದೇವಾಲಯದಲ್ಲಿರುವ ತೈಲಚಿತ್ರಗಳು, ರಾಮಾಯಣ, ಮಹಾಭಾರತದ ಪ್ರಸಂಗಗಳು ನೋಡುಗರ ಮನಸ್ಸನ್ನು ಸೂರೆಗೊಂಡು ಇತಿಹಾಸ ಪ್ರಸಿದ್ಧವಾಗಿವೆ. ಮಾಗೋಡುರಂಗ, ಮರಡಿಗುಡ್ಡದರಂಗ, ಪುರಲೇಹಳ್ಳಿ ಬೂತಪ್ಪ, ಬೆಜ್ಜಿಹಳ್ಳಿ ಬೊಪ್ಪರಾಯ ಮೊದಲಾದ ಕ್ಷೇತ್ರಗಳು ವೈಭವಯುತ ಧಾರ್ಮಿಕ ತಾಣಗಳಾಗಿದ್ದು ಪ್ರತಿವರ್ಷ ಜಾತ್ರೆ ಮಹೋತ್ಸವಗಳಿಂದ ಪ್ರಸಿದ್ದವಾಗಿದೆ.

ಸೋರೆಕುಂಟೆ ಕರಿಯಮ್ಮ, ಸಾಕ್ಷಿಹಳ್ಳಿ ಮಣ್ಣಮ್ಮ, ಮೂಗನಹಳ್ಳಿ ಲಕ್ಕಮ್ಮ, ಬರಗೂರು ವೀರಮ್ಮ, ಬೇವಿನಹಳ್ಳಿ ಕರಿಯಮ್ಮ, ಬುಕ್ಕಾಪಟ್ಟಣದ ಕಣಿವೆ ಮಾರಕ್ಕ ಪ್ರಮುಖ ಗ್ರಾಮದೇವತೆಗಳಾಗಿವೆ.

ನೊಳಂಬರು ಹಾಗೂ ಚೋಳರ ಕಾಲದ ಪ್ರಸಿದ್ದ ಶಿವ ದೇವಾಲಯಗಳಾದ ಸಿರಾದ ಕೊಳದಪ್ಪಲೇಶ್ವರ, ರೇವಣ್ಣ ಸಿದ್ಧೇಶ್ವರ, ನಾದೂರಿನ ಶಿವದೇವಾಲಯ ಬರಗೂರಿನ ಮಹೇಂದ್ರೇಶ್ವರ, ಮದಲೂರಿನ ಕಲ್ಲೇಶ್ವರ ದೇವಾಲಯಗಳು ಇಂದಿಗೂ ಆರಾಧಿಸಲ್ಪಡುತ್ತವೆ. ಇವುಗಳ ಜೊತೆಗೆ ಪ್ರತಿ ಗ್ರಾಮಗಳಲ್ಲಿ ಆಂಜನೇಯ, ಶನೇಶ್ವರ ಗುಡಿಗಳು, ಬೂತಪ್ಪ, ಮಾರಮ್ಮ, ದುರ್ಗಮ್ಮ, ರಂಗನಾಥ, ನರಸಿಂಹಸ್ವಾಮಿ, ಆಂಜನೇಯನ ದೇವಾಲಯಗಳು ಕಂಡುಬರುತ್ತವೆ.

ಈ ತಾಲ್ಲೂಕಿನ ಉತ್ತರ ಭಾಗದಲ್ಲಿ ಆಂಧ್ರ ಪ್ರದೇಶವು ಗಡಿಯಾಗಿರುವುದರಿಂದ ಇಲ್ಲಿನ ಭಾಷೆಯಲ್ಲಿ ತೆಲುಗು ಶಬ್ದಗಳು ಸಮ್ಮಿಳಿತಗೊಂಡಿರುವುದನ್ನು ಕಾಣಬಹುದು.

**ಸಾಹಿತ್ಯ :**

ಸಾಹಿತ್ಯ ಕ್ಷೇತ್ರಕ್ಕೆ ಸಿರಾ ಸೀಮೆ ಮಹತ್ವದ ಕೊಡುಗೆ ನೀಡಿದೆ. ಹೆಸರಾಂತ ಸಾಹಿತಿ ಪ್ರೊ. ಹೆಚ್.ಜಿ.ಜಿ. ಸಣ್ಣಗುಡ್ಡಯ್ಯ, ಅಂತರ್‌ರಾಷ್ಟ್ರೀಯ ಖ್ಯಾತಿಯ ವ್ಯಂಗ್ಯಚಿತ್ರಕಾರ ದೊಡ್ಡ ಬಾಣಗೆರೆ ಹೆಂಜಾರಪ್ಪ, ಖ್ಯಾತ ಬಂಡಾಯ ಸಾಹಿತಿ ಬರಗೂರು ರಾಮಚಂದ್ರಪ್ಪ, ಪ್ರಸಿದ್ದ ಮಹಿಳಾ ಸಂಶೋಧಕಿ ಡಾ. ಮಂಗಳಾ ಪ್ರಿಯದರ್ಶಿನಿ, ಜನಪದ ವಿದ್ವಾಂಸ ಚಿಕ್ಕಣ್ಣಯಣ್ಣೇಕಟ್ಟೆ, ಯಲದಬಾಗಿ ಚಿಕ್ಕರಂಗೇಗೌಡ, ಪಂಡಿತ ದೊಡ್ಡಬಾಣಗೆರೆ ಭೀಮಣ್ಣ, ದೊಡ್ಡ ಬಾಣಗೆರೆ ವಿ. ಚಂದ್ರಪ್ಪ, ಮಾರಣ್ಣ, ಬರಗೂರು ನೀತಿಸ್ವಾಮಿ, ತಾ.ಸ. ಪುಷ್ಪ ಮೊದಲಾದವರು ಗಮನಾರ್ಹ ಕೃತಿಗಳನ್ನು ಬರೆದು ಗಮನ ಸೆಳೆದಿದ್ದಾರೆ.

ಜನಪದ ಸಾಹಿತ್ಯಕ್ಕೂ ಸಿರಾ ಸೀಮೆಯ ಕೊಡುಗೆ ಅಪಾರವಾದದ್ದು. ಜುಂಜಪ್ಪನ ಕಾವ್ಯ, ಚಿತ್ರದೇವರ ಕಾವ್ಯ, ಮಾಗೋಡು ರಂಗನ ಕಾವ್ಯಗಳು ಜನಪದ ವಿದ್ವಾಂಸರ ಗಮನ ಸೆಳೆದು

ಅನೇಕ ಸಂಶೋಧನಾ ಪ್ರಬಂಧಗಳಿಗೆ ಪ್ರೇರಣೆಗಳಾಗಿವೆ. ಸಿರಾ ತಾಲ್ಲೂಕಿನ ಕಳುವೋರಹಳ್ಳಿ ಜುಂಜಪ್ಪ ಹುಟ್ಟಿ ಬೆಳೆದು ಐಕ್ಯವಾದ ಸ್ಥಳ. ಹಾಗಲವಾಡಿ, ಮರಡಿಗುಡ್ಡ, ಚೇಳೂರು, ಬಿಜ್ಜಂಬೆಳ್ಳ, ಮಂಚಲದೊರೆ ಮೊದಲಾದ ಸ್ಥಳಗಳು ಜುಂಜಪ್ಪನ ಕಾರ್ಯಕ್ಷೇತ್ರಗಳಾಗಿವೆ. ಸತತವಾಗಿ ಆರೇಳು ರಾತ್ರಿ ನಿರಂತರವಾಗಿ ಜನಪದ ಕಾವ್ಯಗಳನ್ನು ಹಾಡುವ ಕಲಾವಿದರು ಈ ಸಿರಾ ಸೀಮೆಯಲ್ಲಿದ್ದಾರೆ. ಬುಡಕಟ್ಟು ಸಂಸ್ಕೃತಿಗೆ ಸೇರಿದ ಜನಪದ ಕಾವ್ಯಗಳಾದ ಚಿತ್ರದೇವರ ಕಾವ್ಯ, ಮಾಗೋಡು ರಂಗನಾಥನ ಕಾವ್ಯಗಳು ಸಿರಾ ಸೀಮೆಯ ಜನಪ್ರಿಯ ಕಾವ್ಯಗಳು. ಚಿತ್ರದೇವರ ಕಾವ್ಯ ಕಾಡುಗೊಲ್ಲರ ಸಂಸ್ಕೃತಿಯ ಪುಣ್ಯದೈವವಾಗಿ ಪುರಾಣದೊಂದಿಗೆ ಕಾವ್ಯ ಬೆಳೆಯುತ್ತಾ ಹೋದರೆ ಕಂಬದ ರಂಗನಾಥನ ಕಾವ್ಯ ಹದಿನೈದು ಹದಿನಾರನೇ ಶತಮಾನದಲ್ಲಿ ಇದ್ದ ವ್ಯಕ್ತಿಯೊಬ್ಬನನ್ನು ಕೇಂದ್ರವಾಗಿಟ್ಟುಕೊಂಡು ರಂಗನಾಥ ಬೇರೆ ಬೇರೆ ಅವತಾರಗಳನ್ನು ಎತ್ತಿದ, ಮಾನವರೊಂದಿಗೆ ದೈವದ ಒಡನಾಟ, ಮಹಿಮಾವಳಿ, ಮಾನವನ ಉದಾಸೀನತೆಗಾಗಿ ತೆತ್ತಬೆಲೆ. ಈ ಎಲ್ಲಾ ಚಿತ್ರಗಳೊಂದಿಗೆ ಸಿರಾದ ಆಡಳಿತ, ಸಂತೆ, ನೀರಾವರಿ, ಮಾಗೋಡಿನ ಪ್ರಾದೇಶಿಕ ವಿವರಗಳನ್ನು ಕಂಬದ ರಂಗನಾಥನ ಕಾವ್ಯ ಕಥನ ಕವನದ ಮಾದರಿಯಲ್ಲಿ ನಿರೂಪಿಸುತ್ತಾ ಸಾಗುತ್ತದೆ. ಜುಂಜಪ್ಪನ ಕಾವ್ಯ, ಚಿತ್ರದೇವರ ಕಾವ್ಯ, ಮಾಗೋಡು ರಂಗನ ಕಾವ್ಯಗಳನ್ನು 'ಗಣೆ' ಎಂಬ ವಿಶಿಷ್ಟ ವಾದನದೊಂದಿಗೆ ಲಯಬದ್ಧವಾಗಿ ಹಾಡಿಕೊಂಡು ಬರುವ ಪರಂಪರೆ ಸಿರಾ ಸೀಮೆಯಲ್ಲಿದೆ.

**ಕಲೆ-ಕಲಾವಿದರು :**

ಸಿರಾ ಸೀಮೆ ಕಲಾಭೂಮಿ, ದಣಿವರಿಯದೆ ದಿನವಿಡೀ ಕುಣಿಯಬಲ್ಲ, ಹಾಡಬಲ್ಲ ಕಲಾವಿದರಿದ್ದಾರೆ. ಜನಪದ ಮಹಾಕಾವ್ಯಗಳನ್ನು ಹಾಡುವ ಲಕ್ಕವ್ವನಹಳ್ಳಿ ಗೊಲ್ಲರಹಟ್ಟಿಯ ನಿಂಗಜ್ಜ, ಹುಲಿಗೆರೆ ಚಿಕ್ಕಣ್ಣ, ವೀರಣ್ಣ, ಮಾಗೋಡಿನ ಜೋಗೀರಣ್ಣ, ಬೇವಿನಹಳ್ಳಿ ನಂಜಪ್ಪ ಕರ್ನಾಟಕದ ಪ್ರಮುಖ ಜನಪದ ಮಹಾಕಾವ್ಯ ಹಾಡುಗಾರರು. ಇವರು ಹಾಡಿದ ಕಾವ್ಯಗಳು ಕರ್ನಾಟಕ ಗೆಜೆಟೀಯರ್‌ಗಳೂ ಸೇರಿದಂತೆ ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳ ಪಠ್ಯ ಆಕರ ಗ್ರಂಥಗಳಾಗಿವೆ. ಇವರು ಹಾಡಿದ ಕಾವ್ಯ-ಕಥೆಗಳನ್ನು ಡಾ.ತೀ.ನಂ. ಶಂಕರನಾರಾಯಣ, ಚಿಕ್ಕಣ್ಣಯಣ್ಣೆಕಟ್ಟೆ, ಶ್ರೀ ಕಂಬಾಳು ಸಿದ್ದಗಂಗಯ್ಯ ಇವರು ಸಂಪಾದಿಸಿ ಪ್ರಕಟಿಸಿದವರಲ್ಲಿ ಮುಖ್ಯರಾದವರು.

**ಲಕ್ಕವ್ವನಹಳ್ಳಿ ನಿಂಗಜ್ಜ :** ಚಿತ್ರದೇವರ ಕಾವ್ಯವನ್ನು ಹಾಡುವ ಅಪರೂಪದ ಕಲಾವಿದರಲ್ಲೊಬ್ಬ ಲಕ್ಕವ್ವನಹಳ್ಳಿ ನಿಂಗಜ್ಜ. ಸಿರಾ ತಾಲ್ಲೂಕು ಹುಲಿಕುಂಟೆ ಹೋಬಳಿ ಲಕ್ಕವ್ವನಹಳ್ಳಿ ಈತನ ಮೂಲ ಸ್ಥಳ. ಸುಮಾರು ೭೫ರ ವಯಸ್ಸು. ಸುಮಧುರ ಕಂಠ. ಸಿರಾ ತಾಲ್ಲೂಕಿನಾದ್ಯಂತ ಜುಂಜಪ್ಪ,

ಎತ್ತಪ್ಪ, ಕಾಟಂದೇವರ ಪದಗಳನ್ನು ಹಾಡುವ ಕಲಾವಿದರಿದ್ದಾರೆ ಆದರೆ ಚಿತ್ರದೇವರ ಪದಗಳನ್ನು ಹಾಡುವವರು ವಿರಳ. ಓದು ಬರಹ ಕಲಿಯದ, ಕುರಿಕಾಯುವ ಕೆಲಸದಲ್ಲಿ ತೊಡಗಿರುವ ನಿಂಗಜ್ಜ ಬಡತನದ ಬದುಕು ಸಾಗಿಸುತ್ತಿದ್ದಾನೆ. ಚಿಕ್ಕಂದಿನಿಂದಲೇ ಕುರಿಕಾಯುತ್ತಾ ಹುಲ್ಲು ನೀರಿಗಾಗಿ ಮಂಡ್ಯ, ಮೈಸೂರು, ಚಾಮರಾಜನಗರ, ಬಾಬಾ ಬುಡನ್‌ಗಿರಿ, ನಾಗಮಂಗಲ ಮೊದಲಾದ ಕಡೆ ತನ್ನ ಹಿರಿಯರೊಡನೆ ಹೋದಾಗ ಅವರು ಹಾಡುತ್ತಿದ್ದ ಪದಗಳನ್ನು ಕಲಿತುಕೊಂಡೆ ಎಂದು ಹೇಳುತ್ತಾನೆ. ಅನೇಕರು ತಮ್ಮ ತಮ್ಮ ಮನೆಗಳಲ್ಲಿ ದೇವರ ಪದಗಳನ್ನು ಹಾಡಿಸುತ್ತಾರೆ. ಹೀಗೆ ಹಾಡಿಸುವುದರಿಂದ ಸಮೃದ್ಧ ಮಳೆಯಾಗುತ್ತದೆ, ತೊಂದರೆಗಳು ನಿವಾರಣೆಯಾಗುತ್ತವೆ, ಪಶುಸಂಪತ್ತು ಹೆಚ್ಚುತ್ತದೆ, ಖಾಯಿಲೆ ಖಸಾಲೆಗಳು ಬರುವುದಿಲ್ಲವೆಂದು ನಂಬುತ್ತಾರೆ. ಹಬ್ಬ-ಹರಿದಿನಗಳಲ್ಲಿ ಶುಭಕಾರ್ಯಗಳನ್ನು ಮಾಡುವಾಗಲೂ ಹಾಡಿಸುವುದುಂಟು. ನಿಂಗಜ್ಜ ಹಾಡುವಾಗ ಕರಿಯ ಕಂಬಳಿ ಹಾಸಿ ಅದರ ಮೇಲೆ ಕುಳಿತು ಒಂಟಿ ಧ್ವನಿಯಲ್ಲಿ ಇಂಪಾಗಿ ಹಾಡುತ್ತಾನೆ. ಇತರ ಕಲಾವಿದರಿಗೆ ಬೇಕಾದಂತೆ ಗಣೆಯಾಗಲಿ, ಹಿಮ್ಮೇಳ, ಮುಮ್ಮೇಳವಾಗಲಿ ಬೇಕಿಲ್ಲ. ರಾತ್ರಿಯೆಲ್ಲಾ ಹಾಡಬಲ್ಲ. ಜುಂಜಪ್ಪ, ಕಾಟಂದೇವರ ಮೊದಲಾದ ಇತರ ಕಾವ್ಯಗಳನ್ನೂ ಸಹ ನಿಂಗಜ್ಜ ಹಾಡಬಲ್ಲ. ಜನಪದ ವಿದ್ವಾಂಸರಾದ ಡಾ. ಚಿಕ್ಕಣ್ಣಯಣ್ಣೆಕಟ್ಟೆಯವರು ನಿಂಗಜ್ಜನು ಹಾಡುವ ಚಿತ್ರದೇವರ ಕಾವ್ಯವನ್ನು ಸಂಗ್ರಹಿಸಿ ೧೯೯೮ರಲ್ಲಿ ಪ್ರಕಟಿಸಿದ್ದಾರೆ.

**ಜೋಗೇರ ದಾಸಣ್ಣ :** ಮಾಗೋಡು ರಂಗನ ಕಾವ್ಯವನ್ನು ಸಮಗ್ರವಾಗಿ ಹಾಡಬಲ್ಲ ಏಕೈಕ ಕಲಾವಿದ ಜೋಗರ ದಾಸಣ್ಣ. ಸಿರಾ ತಾಲ್ಲೂಕು ಮಾಗೋಡು ಗೊಲ್ಲರ ಹಟ್ಟಿ ಈತನ ಹುಟ್ಟೂರು. ಮಾಗೋಡು ರಂಗನಾಥನ ಜಾತ್ರೆಯ ಸಂದರ್ಭದಲ್ಲಿ ತೇರು ಎಳೆಯುವಾಗ, ವಾಹನಗಳ ಉತ್ಸವ ನಡೆಯುವಾಗ, ದೇವರನ್ನು ಒಂದು ಹಳ್ಳಿಯಿಂದ ಮತ್ತೊಂದು ಹಳ್ಳಿಗೆ ಉತ್ಸವದಲ್ಲಿ ಕರೆದುಕೊಂಡು ಹೋದಾಗ, ಗದ್ದಿಗೆ ಮಾಡಿದಾಗ, ಜೋಗೋರ ದಾಸಣ್ಣ ಪದ ಹಾಡುವುದು ವಿಶೇಷ. ಚಿಕ್ಕ ವಯಸ್ಸಿನಲ್ಲೇ ಕುರಿಕಾಯಲು ಹೋಗುವಾಗ ತನ್ನ ತಾತನ ಮೂಲಕ ತಾನು ಕಲಿತುಕೊಂಡೆ ಎನ್ನುತ್ತಾನೆ. ಭಕ್ತರು ತಮ್ಮ ಮನೆಗಳಿಗೆ ಕರೆಸಿ ಹಾಡಿಸುವುದೂ ಉಂಟು. ಮಾಗೋಡು ರಂಗನ ಪವಾಡಗಳು, ತನ್ನ ಭಕ್ತರನ್ನು ಹೆಚ್ಚಿಸಿಕೊಂಡ ಬಗೆಯನ್ನು ಕಾವ್ಯದಲ್ಲಿ ಸಮಗ್ರವಾಗಿ ಹಾಡುತ್ತಾನೆ. ಡಾ. ಚಿಕ್ಕಣ್ಣ ಯಣ್ಣೆಕಟ್ಟೆಯವರು ಈತನು ಹಾಡುವ ಕಾವ್ಯವನ್ನು ಸಂಪಾದಿಸಿ 'ಮಾಗೋಡು ರಂಗನಾಥನ ಕಥೆ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ.

**ದೇವರ ಹಟ್ಟಿ ನಂಜಪ್ಪಜ್ಜ :** ಸಿರಾ ತಾಲ್ಲೂಕು ಬೇವಿನಹಳ್ಳಿ ಗೊಲ್ಲರ ಹಟ್ಟಿಯ ನಂಜಪ್ಪಜ್ಜ ಮತ್ತೊಬ್ಬ ಜನಪದ ಕಲಾವಿದ. ಕಾಡುಗೊಲ್ಲರ ಕಟ್ಟೆಮನೆ ಎನಿಸಿದ ಬೇವಿನಹಳ್ಳಿಯಲ್ಲಿ ದೇವರ ಪೂಜಾರಿಕೆ, ನ್ಯಾಯ ತೀರ್ಮಾನ ಮೊದಲಾದ ಕೆಲಸಗಳಲ್ಲಿ ತೊಡಗಿರುವ ನಂಜಪ್ಪಜ್ಜ ಜುಂಜಪ್ಪನ ಕಾವ್ಯವನ್ನು ಸೊಗಸಾಗಿ ಹಾಡುತ್ತಾನೆ. ಗಣೆಯನ್ನು ನುಡಿಸುತ್ತಾನೆ. ಡಾ. ಕಾಳೇಗೌಡ ನಾಗವಾರ

ರವರ ಬುಡಕಟ್ಟು ಸಂಶೋಧನೆ, ಕಾಡುಗೊಲ್ಲರ ಹಟ್ಟಿ ಅಧ್ಯಯನಕ್ಕೆ ನಂಜಪ್ಪಜ್ಜ ಪ್ರಮುಖ ಸಂಪನ್ಮೂಲ ವ್ಯಕ್ತಿಯಾಗಿದ್ದಾನೆ.

**ಭರಮಣ್ಣ ನಿಡಗಟ್ಟೆ :** ಮೈಲಾರಲಿಂಗನ ಕಾವ್ಯವನ್ನು ಹಾಡುವ ತಾಲ್ಲೂಕಿನ ಏಕೈಕ ಕಲಾವಿದ ಭರಮಣ್ಣ. ನಿಡಗಟ್ಟೆಯ ಮೈಲಾರಲಿಂಗನ ಪೂಜಾರಿ. ತೊಂಬತ್ತು ವರ್ಷ ವಯಸ್ಸು, ಮೈಲಾರಲಿಂಗನ ಕಾವ್ಯ, ಕುರುಬರ ಪುರಾಣ ಪುರುಷರಾದ ಉಂಡಾಳು ಪದ್ಮಣ್ಣ, ಹಾಲುಮತ ಮೂಲದ ಬಗ್ಗೆ ಅನೇಕ ಮಾಹಿತಿಗಳನ್ನು ನೀಡಬಲ್ಲ. ಕತೆ ಕಾವ್ಯಗಳನ್ನು ಹಾಡಬಲ್ಲ ಕಲಾವಿದರಾಗಿದ್ದಾರೆ.

**ದೊಡ್ಡಬಾಣಗೆರೆ ಮಾರಕ್ಕ-ಮುತ್ತಕ್ಕ :** ಸಿರಾ ತಾಲ್ಲೂಕು ದೊಡ್ಡಬಾಣಗೆರೆ ಗೊಲ್ಲರ ಹಟ್ಟಿಯ ಸಹೋದರಿಯರಾದ ಮಾರಕ್ಕ-ಮುತ್ತಕ್ಕರು ಜುಂಜಪ್ಪ, ಕಾಟಂಲಿಂಗನ ಪದಗಳು, ಸೋಬಾನೆ ಪದಗಳನ್ನು ಇಂಪಾಗಿ ಹಾಡುತ್ತಾರೆ. ಗೊಲ್ಲ ಜನಾಂಗದವರ ಶುಭ ಕಾರ್ಯಗಳಲ್ಲಿ, ದೇವರ ಉತ್ಸವಗಳಲ್ಲಿ ದೇವರ ಪದಗಳು, ಗಣೆ ಪದ, ಕೋಲು ಪದ, ಭಜನೆ ಪದಗಳನ್ನು ಹಾಡುತ್ತಾರೆ. ಬೆರಳೆಣಿಕೆಯಷ್ಟಿರುವ ಮಹಿಳಾ ಕಲಾವಿದಲ್ಲಿ ಪ್ರಮುಖರಾಗಿರುವ ಇವರು ತಮ್ಮ ಕಲೆಯನ್ನು ಮಕ್ಕಳಿಗಾಗಲಿ ಮೊಮ್ಮಕ್ಕಳಿಗಾಗಲಿ ಕಲಿಸಿಲ್ಲ. ಆ ಕೊರಗು ಅವರಿಗೂ ಇದೆ. ಈಗಿನ ಸಿನಿಮಾ ಹಾಡುಗಳ ಪ್ರಭಾವದಿಂದ ಯಾರಿಗೂ ಕಲಿಯುವ ಉತ್ಸಾಹವಿಲ್ಲ ಎನ್ನುತ್ತಾರೆ.

**ಮಾಡಗಾನಹಟ್ಟಿ ದಾಸಣ್ಣ :** ಜನಪದ ಮೌಖಿಕ ಪರಂಪರೆಯ ಅತಿ ದೊಡ್ಡ ಕಲಾವಿದ ದಾಸಣ್ಣ. ನಲವತ್ತೇಳು ವರ್ಷಪ್ರಾಯದ ಈತ ಶಾಲೆ ಕಲಿತವನಲ್ಲ. ಸಾಮಾನ್ಯ ರೈತ ಕುಟುಂಬದಿಂದ ಬಂದ ಈತನ ತಂದೆ ಚಿಕ್ಕಣ್ಣ, ತಾಯಿ ಚಿಕ್ಕನಾಗಮ್ಮ. ಆರೇಳು ರಾತ್ರಿ ನಿರಂತರವಾಗಿ ಜುಂಜಪ್ಪನ ಕಾವ್ಯ ಹಾಡಬಲ್ಲ. ಹಾಗೂ ಹಾಡಿದ ಈ ಕಾವ್ಯವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ವಿಭಾಗದ ಪ್ರಾಧ್ಯಾಪಕರಾದ ಡಾ. ಚಲುವರಾಜುರವರು ಸಂಪಾದಿಸಿ ಪ್ರಕಟಿಸಿದ್ದಾರೆ. ಚಿಕ್ಕ ವಯಸ್ಸಿನಲ್ಲೇ ಜನಾಂಗದ ಅನೇಕ ವಿಚಾರಗಳನ್ನು ತಿಳಿದುಕೊಂಡು ಜುಂಜಪ್ಪನ ಕಾವ್ಯದ ಪ್ರತಿಯೊಂದು ಭಾಗವನ್ನು ತನ್ನದೇ ಆದ ರೀತಿಯಲ್ಲಿ ಕಟ್ಟಿಕೊಡಬಲ್ಲವರು. ಗಣೆಯೊಡನೆ ಹಾಗೂ ಗಣೆ ಇಲ್ಲದೆಯೂ ಹಾಡಬಲ್ಲವರು. ಕರಿಯ ಕಂಬಳಿ ಹಾಸಿ ಕುಳಿತು ಹೆಗಲ ಮೇಲೆ ಮತ್ತೊಂದು ಕಂಬಳಿ ಹಾಕಿಕೊಂಡು, ಕೆನ್ನೆಯ ಮೇಲೆ ಕೈಯಿಟ್ಟು ಹಾಡಲು ಪ್ರಾರಂಭಿಸಿದನೆಂದರೆ ಕೇಳುಗರು ಮಂತ್ರ ಮುಗ್ಧರಾಗಬೇಕು. ದಾಸಣ್ಣನನ್ನು ಕರ್ನಾಟಕ ಜನಪದ ಹಾಗೂ ಯಕ್ಷಗಾನ ಅಕಾಡೆಮಿ ೧೯೯೯ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ. ಆರ್ಥಿಕ ಬಡತನವಿದ್ದರೂ ಕಲೆಯ ಶ್ರೀಮಂತನಾದ ಅದ್ಭುತ ಕಲಾವಿದರಾಗಿದ್ದಾರೆ.

ಯಕ್ಷಗಾನ ಬಯಲಾಟ, ನಂದಿಕುಣಿತ, ಸೋಮನ ಕುಣಿತ, ಚೌಡಿಕೆ ಮೇಳ, ಲಂಬಾಣಿ ಕುಣಿತ, ಹರೆ, ನಗಾರಿ, ಕೋಲಾಟ, ತೊಗಲು ಗೊಂಬೆಯಾಟ, ಸೂತ್ರದ ಗೊಂಬೆಯಾಟ, ಮೊದಲಾದ ಕಲೆಗಳು ಜೀವಂತವಾಗಿವೆ.

ಸಿರಾದ ಬಿತ್ತಿ ಚಿತ್ರಗಳು ಪ್ರಮುಖ ಆಕರ್ಷಣೀಯವಾದವುಗಳು. ಸೀಬಿ ಗ್ರಾಮದ ನರಸಿಂಹಸ್ವಾಮಿ ದೇವಾಲಯದ ರಾಮಾಯಣ, ಮಹಾಭಾರತದ ಪ್ರಸಂಗಗಳು ಹಾಗೂ ಸಿರಾ ನಗರದ ಕಾಳಿದಾಸ ನಗರದಲ್ಲಿರುವ ರೇವಣ ಸಿದ್ದೇಶ್ವರ ದೇವಾಲಯದ ಗೋಡೆಯ ಮೇಲಿನ ಬರಹಗಳು ಪ್ರಸಿದ್ಧವಾಗಿವೆ. ಕುರುಬ ಜನಾಂಗಕ್ಕೆ ಸೇರಿದ ಈ ದೇವಾಲಯ ತನ್ನ ಒಡಲಲ್ಲಿ ಅತ್ಯಮೂಲ್ಯವಾದ ಸಂಪ್ರದಾಯಿಕ ಬಿತ್ತಿ ಚಿತ್ರಗಳನ್ನು ಅಡಗಿಸಿಟ್ಟುಕೊಂಡಿದೆ.

ಹಿಂದೊಮ್ಮೆ ಇಡೀ ದೇವಾಲಯದ ಮೇಲ್ಛಾವಣಿ, ಗೋಡೆಗಳು ಕಂಬದ ಮೇಲೆಲ್ಲಾ ಚಿತ್ರಗಳಿದ್ದವು. ಆದರೆ ಇಂದು ಬಹುತೇಕ ಸುಣ್ಣ ಹೊಡೆದು ನಾಶಮಾಡಲಾಗಿದೆ. ಗರ್ಭಗೃಹ, ದ್ವಾರದ ಎಡಭಾಗದ ಗೋಡೆಯಲ್ಲಿ ಗೋಪಿಯರ ವಸ್ತ್ರಾಪಹರಣ, ಬಾಗಿಲುವಾಡದ ನಿಲುವು ಗಂಬಗಳ ಕೆಳಭಾಗದಲ್ಲಿ ದ್ವಾರಪಾಲಕರು, ಅವರ ಮೇಲೆ ಹೂ-ಬಳ್ಳಿಗಳ ರಚನೆ, ಗರ್ಭಗೃಹದ ಬಲಭಾಗದ ಗೋಡೆಯ ಬಿತ್ತಿ ಚಿತ್ರಗಳಲ್ಲಿ ರಾಮ-ಸೀತೆಯರು, ಗರುಡ, ಚತುರ್ಭುಜ ವೇಣುಗೋಪಾಲ, ಹಿರಣ್ಯಕಶಿಪುರವನ್ನು ಸಂಹರಿಸುತ್ತಿರುವ ನರಸಿಂಹ, ಭಕ್ತ ಪ್ರಹಲ್ಲಾದ, ಲಕ್ಷ್ಮಿ, ಅರಮನೆಯ ದರ್ಬಾರ್ ಹಾಲ್‌ನಲ್ಲಿ ರಾಜನೊಬ್ಬ ಸಿಂಹಾಸನದ ಮೇಲೆ ಕುಳಿತುಕೊಂಡಿರುವುದು, ಕುರುಬರ ಮೂಲವನ್ನು ಸೂಚಿಸುವ ಕಥೆಯ ದೃಶ್ಯ ಮೊದಲಾದವುಗಳು ಚಿತ್ರಿತವಾಗಿವೆ.[೨೧]

ಚಲನಚಿತ್ರ ರಂಗದಲ್ಲಿ ಪ್ರಸಿದ್ಧ ಬಂಡಾಯ ಸಾಹಿತಿ, ನಿರ್ದೇಶಕ ಬರಗೂರು ರಾಮಚಂದ್ರಪ್ಪ, 'ಬಂಗಾರದ ಮನುಷ್ಯ' ಚಲನಚಿತ್ರ ನಿರ್ದೇಶನದ ತರೂರು ಸಿದ್ದಲಿಂಗಯ್ಯ, ಕಿರುತೆರೆಯ ಕಲಾವಿದ ಗಿಡುಗನಹಳ್ಳಿ ಸುಮನ್ ರಂಗನಾಥ, ಸಿರಾರಂಗ, 'ಮುನ್ನುಡಿ' ಚಲನಚಿತ್ರದ ಶ್ರೇಷ್ಠ ನಿರ್ದೇಶನಕ್ಕೆ ರಾಷ್ಟ್ರೀಯ ಶ್ರೇಷ್ಠ ಸಾಮಾಜಿಕ ಕಳಕಳಿಯ ನಿರ್ದೇಶನದ ಚಿತ್ರ ಪುರಸ್ಕಾರದ ಎಸ್.ಎಚ್.ಎ. ಖಾನ್ ಮೊದಲಾವರು ಕರ್ನಾಟಕ ಚಲನಚಿತ್ರ ಕ್ಷೇತ್ರಕ್ಕೆ ಪ್ರಮುಖ ಕೊಡುಗೆ ನೀಡಿದ್ದಾರೆ.

ಶಿಕ್ಷಣ ಕ್ಷೇತ್ರದಲ್ಲಿ ಸಿರಾ ಸೀಮೆ ಪ್ರಗತಿ ಪಥದಲ್ಲಿದ್ದು ಎರಡು ಪ್ರಥಮ ದರ್ಜೆ ಕಾಲೇಜುಗಳು, ಹನ್ನೊಂದು ಪದವಿ ಪೂರ್ವ ಕಾಲೇಜುಗಳು ಇವೆ. ಚಿಕ್ಕನ ಹಳ್ಳಿಯಲ್ಲಿ ಸರ್ಕಾರಿ ಶಿಕ್ಷಕರ ತರಬೇತಿ ಕಾಲೇಜು ಹೆಸರುವಾಸಿಯಾಗಿದೆ. ವಿವಿಧ ಖಾಸಗಿ ವಿದ್ಯಾ ಸಂಸ್ಥೆಗಳೂ, ಸರ್ಕಾರಿ ಶಾಲೆಗಳೂ ಜ್ಞಾನ ದಾಸೋಹದ ಮುಂಚೂಣಿಯಲ್ಲಿವೆ.

ಅನೇಕ ಸಂಘ ಸಂಸ್ಥೆಗಳು ಮುಂಚೂಣಿಯಲ್ಲಿದ್ದು ಕನ್ನಡ ಸಾಹಿತ್ಯ ಪರಿಷತ್, ರೋಟರಿ ಕ್ಲಬ್, ಗಡಿನಾಡ ಜಾನಪದ ಸಂಪರ್ಕ ಕೇಂದ್ರ, ಸ್ಪಂದನ ಸಾಂಸ್ಕೃತಿಕ ವೇದಿಕೆ, ಕಾಳೀದಾಸ ಸಾಂಸ್ಕೃತಿಕ ಸಂಘ, ಕೋಟೆ ಸಾಂಸ್ಕೃತಿಕ ಯುವ ವೇದಿಕೆ, ಬಸ್ನಿ ಸಾಂಸ್ಕೃತಿಕ ವೇದಿಕೆ, ಕನ್ನಡ ಸಂಘ, ಕುಂಚಿಟಿಗರ ಸಂಘ ಮೊದಲಾದವುಗಳು ಪ್ರಮುಖವಾಗಿದ್ದು ಸಿರಾ ನಗರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಸಾಂಸ್ಕೃತಿಕ ಚಟುವಟಿಕೆ, ಕ್ರೀಡೆ ಮೊದಲಾದ ಕಾರ್ಯಕ್ರಮಗಳನ್ನು

ಏರ್ಪಡಿಸುತ್ತವೆ. ಇವುಗಳ ಜೊತೆಗೆ ಗ್ರಾಮಂತರ ಪ್ರದೇಶಗಳಲ್ಲೂ ವಿವಿಧ ಜಾತಿವಾರು ಸಂಘಟನೆಗಳು ಸ್ತ್ರೀ ಸಂಘಗಳು ನೌಕರರ ಸಂಘಗಳು, ದಲಿತ, ಕಾರ್ಮಿಕರ ಸಂಘಟನೆಗಳು ಕ್ರಿಯಾಶೀಲವಾಗಿವೆ.[೨೨]

**ಪ್ರೇಕ್ಷಣೀಯ ಸ್ಥಳಗಳು :**

**ಕೋಟೆ :** ಇದು ಸುತ್ತಲೂ ಕಂದಕದಿಂದ ಕೂಡಿದ ನೆಲಗೋಟೆ. ನಗರಕ್ಕೆ ನೀರು ಸರಬರಾಜು ಮಾಡುತ್ತಿದ್ದ ಕೊಳಾಯಿ, ಸುಣ್ಣ, ಮರಳು ಮಿಶ್ರಿತ ಗಾರೆಯಿಂದ ಮಾಡಲಾಗಿದೆ.

**ಬೀರಲಿಂಗೇಶ್ವರ ದೇವಾಲಯ :** ಸಿರಾ ನಗರದ ಕಾಳಿದಾಸ ನಗರದಲ್ಲಿರುವ ರೇವಣ ಸಿದ್ದೇಶ್ವರ ದೇವಾಲಯ ಹಾಗೂ ಸೀಬಿ ಗ್ರಾಮದ ಲಕ್ಷ್ಮಿ ನರಸಿಂಹ ದೇವಾಲಯಗಳಲ್ಲಿರುವ ರಾಮಾಯಣ, ಮಹಾಭಾರತದ ಪುರಾಣ ಕಥೆಗಳ ತೈಲಚಿತ್ರಗಳು.

**ಕೊಳದಪ್ಪಲೇಶ್ವರ ದೇವಾಲಯ :** ಸಿರಾ ನಗರದ ಸಂತೆ ಪೇಟೆಯಲ್ಲಿ ನೊಳಂಬರ ಕಾಲದ ಶಿವಲಿಂಗವಿದೆ. ಕೊಳಗದ ಆಕಾರದಲ್ಲಿರುವುದರಿಂದ ಪ್ರಸಿದ್ಧ ಕೊಳದಪ್ಪಲೇಶ್ವರ ದೇವಾಲಯ ಎಂದು ಹೆಸರಾಗಿದೆ.

**ಮಲ್ಲಿಕ್ ರೆಹಾನ್ ದರ್ಗ :** ಇದು ಹಿಂದೂ-ಮುಸ್ಲಿಂ ಶಿಲ್ಪಕಲೆಯನ್ನು ಹೊಂದಿದೆ. ಗುಮ್ಮಟಗಳು ಹಾಗೂ ಲೋಲಕಗಳಿಂದ ಕೂಡಿದ ಸುಂದರ ವಾಸ್ತುಶಿಲ್ಪ.

**ಜುಮ್ಮ ಮಸೀದಿ :** ಇದು ದೆಹಲಿಯ ಜುಮ್ಮಾ ಮಸೀದಿಯ ಪಡಿಯಚ್ಚಿನಂತಿದೆ.

**ಚಿನ್ನದ ಗೋರಿ :** ಈ ಗುಮ್ಮಟದ ಕಳಸವನ್ನು 'ಹಿಂದೂ' ಒಬ್ಬ ಪ್ರತಿಷ್ಠಾಪಿಸಿರುವುದರಿಂದ ಈ ಸ್ಮಾರಕ ಹಿಂದೂ-ಮುಸ್ಲಿಂ ಸಾಮರಸ್ಯದ ಪ್ರತೀಕವಾಗಿದೆ.

**ಪಟ್ಟನಾಯಕನಹಳ್ಳಿ ಶ್ರೀ ಗುರುಗುಂಡ ಬ್ರಹ್ಮೇಶ್ವರ ಸ್ವಾಮಿ :** ಅವಧೂತ ಪರಂಪರೆಯ ಈ ಮಠವು ಶೈವ-ವೈಷ್ಣವ ಪಂಥಗಳ ಸಮ್ಮಿಲನದ ಸಂಕೇತ. ಬೃಹತ್ ಕಾಶಿಲಿಂಗ ಸಾಲಿಗ್ರಾಮ ಸಹಿತ ನವಗ್ರಹಗಳು, ವಿನಾಯಕ, ಸೂರ್ಯ ನಾರಾಯಣ, ಲಕ್ಷ್ಮಿನಾರಾಯಣ, ಭಕ್ತಾಂಜನೇಯ ಹಾಗೂ ಶ್ರೀ ದತ್ತಾತ್ರೇಯರ ಅಮೃತ ಶಿಲಾ ಪ್ರತಿಮೆ ಮನಮೋಹಕ ಶಿಲ್ಪ ಕಲಾ ಚಾತುರ್ಯವನ್ನು ಹೊಂದಿದೆ. ದೇವಾಲಯದ ಕಲಾ ವಿನ್ಯಾಸ ದ್ರಾವಿಡ ಶೈಲಿಯಲ್ಲಿದೆ.

**ಬುಕ್ಕಾಪಟ್ಟಣ :** ಇಲ್ಲಿನ ಪ್ರಸಿದ್ಧ ಕಾಲುವೆ ರಂಗನಾಥಸ್ವಾಮಿ ದೇವಾಲಯ. ಇಲ್ಲಿ ರಮಾನುಜಾಚಾರ್ಯರ ಒಂದು ವಿಗ್ರಹವಿದೆ.

ತಾವರೆಕೆರೆ : ಶ್ರೀಬಂಡಿ ರಂಗನಾಥ ಸ್ವಾಮಿ ದೇವಾಲಯ ಹಾಗೂ ನಿಸರ್ಗ ವಿಶೇಷ ನೂರೊಂದು ಸುಳಿಯ ಈಚಲ ಮರ ಆಕರ್ಷಕವಾಗಿದೆ. ಗಂಡಿಹಳ್ಳಿ ಮಠ ಹಿಂದೂ ಮುಸ್ಲಿಂ ಕೂಡು ಸಂಸ್ಕೃತಿಯ ಪ್ರಸಿದ್ಧ ಸ್ಥಳ.

ಕಗ್ಗಲಡು : ಇತ್ತೀಚೆಗೆ ದೇಶ-ವಿದೇಶಗಳಿಂದ ವಿವಿಧ ಪಕ್ಷಿಗಳು ಬಂದು ನೆಲಸಿ ಪ್ರಸಿದ್ಧ ಪಕ್ಷಿಧಾಮವಾಗಿದೆ.

**ಅಡಿಟಿಪ್ಪಣಿ**

೧. ಎಫಿಗ್ರಾಫಿಯಾ ಕರ್ನಾಟಕ ಸಂ XI ಚಳ್ಳಕೆರೆ ೨೧

೨. ಅದೇ. ಸಂ XI ಸಿರಾ-೭ ಮತ್ತು ಸಿರಾ ೫೪

೩. ಹರತಿಸಿರಿ ; ಸಂ.ಲಕ್ಷ್ಮಣ ತೆಲಗಾವಿ. ಪುಟ ೩೦೬

೪. ಮೆಕಂಜಿ ; ಮೆಮೋರಿಸ್ ಆಪ್ ದಿ ವಾರ್‍ರ್ತಾನ್ ಪರಗಾಣಾಸ್ ಆಪ್ ಮೈಸೂರು ೧೮೦೦

೫. ಕರ್ನಾಟಕ ಪರಂಪರೆ ಭಾಗ-೨ ಪುಟ ೩೦೭

೬. ಗೋವಿಂದ ವೈದ್ಯ ಕಂಠೀರವ ನರಸರಾಜ ವಿಜಯಂ. ಸಂ.೧೧ ಪದ್ಯ-೧೦

೭. ರೈಸ್ ಬಿ.ಎಲ್. ಮೈಸೂರು ಗೆಜೆಟಿಯರ್ ಸಂ.೨ ಭಾಗ ೩ ಪುಟ ೨೨೦೮

೮. ಹಯವದನ್‌ರಾವ್ ಹಿಸ್ಟರಿ ಆಪ್ ಮೈಸೂರ್ ಸಂ.೧ ಪುಟ ೨೭

೯. ರೈಸ್ ಬಿ.ಎಲ್. ಮೈಸೂರು ಗೆಜೆಟಿಯರ್ ಸಂ.೨ ಭಾಗ ೩ ಪುಟ ೨೭

೧೦. ಜಯಕರ್ನಾಟಕ. ಸಂಚಿಕೆ ೮ ಪುಟ ೨೯೩.

೧೧. ರೈಸ್ ಬಿ.ಎಲ್. ಮೈಸೂರು ಗೆಜೆಟಿಯರ್ ಸಂ.೨ ಭಾಗ ೩ ಪುಟ ೧೬೬

೧೨. ಪುಟ್ಟಣ್ಣ ಎಂ.ಎಸ್. ಚಿತ್ರದುರ್ಗದ ಪಾಳೇಗಾರರು ಪುಟ ೫೩ ಕಾವ್ಯಲಯ ಪ್ರಕಾಶನ ಮೈಸೂರು-೧೯೯೭

೧೩. ಕರ್ನಾಟಕ ವಿಷಯ ವಿಶ್ವಕೋಶ. ಪುಟ ೧೪೧೧

೧೪. ರೈಸ್ ಬಿ.ಎಲ್. ಮೈಸೂರು ಗೆಜೆಟಿಯರ್ ಸಂ.೨ ಭಾಗ ೩ ಪುಟ ೧೯೯

೧೫. ಮೆಕಂಜಿ : ಮೆಮೋರಿಸ್ ಆಪ್ ದಿ ವಾರ್‍ರ್ತಾನ್ ಪರಗಾಣಾಸ್ ಆಪ್ ಮೈಸೂರ್

೧೬. ಅದೇ....

೧೭. ಡಾ. ಡಿ.ಎನ್. ಯೋಗೀಶ್ವರಪ್ಪ. ಇತಿಹಾಸ ದರ್ಶನ. ಸಂ ೧೩ ಕರ್ನಾಟಕ ಇತಿಹಾಸ ಅಕಾಡೆಮಿ. ೧೯೯೮

೧೮. ಎಫಿಗ್ರಾಫಿಯಾ ಕರ್ನಾಟಕ XI

೧೯. ಅದೇ ಸಿರಾ ೩೮

೨೦. ಜಯಮಂಗಲಿ. ಲೇಖನ ; ಸಿರಾ ಡಾ. ಚಿಕ್ಕಣ್ಣ ಯಣ್ಣೆಕಟ್ಟೆ. ಪುಟ ೨೧೨

೨೧. ಕಲ್ಪಸಿರಿ. ಲೇಖನ ; 'ತುಮಕೂರು ಜಿಲ್ಲೆಯ ಬಿತ್ತಿ ಚಿತ್ರಗಳು. ಒಂದು ಪಕ್ಷಿನೋಟ' ಎಸ್. ವೆಂಕಟೇಶ್.

೨೨. ಜಯಮಂಗಲಿ. ಲೇಖನ ; ಸಿರಾ ಡಾ. ಚಿಕ್ಕಣ್ಣ ಯಣ್ಣೆಕಟ್ಟೆ ಪುಟ ೨೧೨

ಅಧ್ಯಾಯ ೩

# ವೀರ-ನಾಯಕ ಪರಿಕಲ್ಪನೆಯ ಹುಟ್ಟು ಮತ್ತು ಬೆಳವಣಿಗೆ, ದೈವತ್ವಾರೋಪಣೆ

ವೀರ-ನಾಯಕ ಪರಿಕಲ್ಪನೆಯ ಹುಟ್ಟು ಮತ್ತು ಬೆಳವಣಿಗೆ

ದೈವತ್ವಾರೋಪಣೆ

ಸಾಂಸ್ಕೃತಿಕ ವೀರರು

ಸಾಂಸ್ಕೃತಿಕ ವೀರರ ವರ್ಗೀಕರಣ

ಅಧ್ಯಾಯ ೩

## ವೀರ-ನಾಯಕ ಪರಿಕಲ್ಪನೆಯ ಹುಟ್ಟು ಮತ್ತು ಬೆಳೆವಣಿಗೆ, ದೈವತ್ವಾರೋಪಣೆ

ಅರ್ಥ : ನನ್ನ ಪಿಎಚ್.ಡಿ ಅಧ್ಯಯನದ ಹಿನ್ನೆಲೆಯನ್ನಿಟ್ಟುಕೊಂಡು ಮೊದಲಿಗೆ ವೀರ ಎನ್ನುವ ಪದದ ಅರ್ಥ ಮತ್ತು ವಿವರಣೆಯನ್ನು ಕೊಡಬಯಸುವೆ.

'ವೀರ-ಬೀರ' ಎಂದು ತದ್ಭವವಾಗಿಯೂ ಉಚ್ಚರಿಸಲ್ಪಡುವ ಈ ಪದಕ್ಕೆ ಶಬ್ದಕೋಶದಲ್ಲಿ ಕಲಿ, ಶೂರ, ಪರಾಕ್ರಮಿ, ಬೆಂಕಿ, ಅಗ್ನಿ, ಶೌರ್ಯ, ಪರಾಕ್ರಮ ಎಂತಲೂ ಕಾವ್ಯ ನಾಟಕಗಳಲ್ಲಿ ಬಳಕೆಯಾಗುವ ನವರಸಗಳಲ್ಲಿ ಒಂದು. ಶೌರ್ಯದಿಂದ ಕೂಡಿದ ಶೂರನಾದ, ಪರಾಕ್ರಮಿಯಾದ, ಶಕ್ತಿಯುತವಾದ, ಬಲಿಷ್ಠವಾದ, ಶ್ರೇಷ್ಠವಾದ, ಅತ್ಯುತ್ತಮವಾದ, ಭಯಂಕರವಾದ ಈ ಮೊದಲಾದ ಅರ್ಥಗಳಿವೆ.[೧]

ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟಿನಲ್ಲಿ Bravery Prowess, Valour daving, a hero, a brave man, a valiant man, a warriav, a champion, heroic ಎಂದು ಅರ್ಥೈಸಿದ್ದಾರೆ.[೨]

ಈ ವೀರ ಎಂಬ ಪದಕ್ಕೆ ಸಮಾನಾರ್ಥವಾಗಿ ಇಂಗ್ಲೀಷ್ ಭಾಷೆಯಲ್ಲಿ 'HERO' ಎಂಬ ಪದ ಬಳಸಲಾಗುತ್ತದೆ.

ಆರ್ ಶೇಷಾಶಾಸ್ತ್ರಿಯವರು ಗುರುತಿಸುವಂತೆ "ಮೂಲತಃ ಸಂಸ್ಕೃತ ಪದವಾದ ಈ ವೀರ ಎಂಬುದು ಅನೇಕ ಇಂಡೋ ಆರ್ಯನ್ ಭಾಷೆಗಳಲ್ಲಿ ಬಳಕೆಯಲ್ಲಿರುವುದು ತಿಳಿದುಬರುತ್ತದೆ. ಈ ಪದವು ವ್ಯಕ್ತಿಯ ಪರಾಕ್ರಮ, ಶಕ್ತಿ ಮುಂತಾದ ಅವನ ದೈಹಿಕ ಗುಣಗಳನ್ನು ಸೂಚಿಸುವ ಗುಣವಾಚಕವಾಗಿ ಬಳಕೆಯಲ್ಲಿದೆ. ಎಲ್ಲೋ ಕೆಲವು ಭಾಷೆಗಳಲ್ಲಿ ಮಾತ್ರ ಟಗರು, ಗಂಡು ಒಂಟೆ, ಸೋದರ ಮುಂತಾದ ಅರ್ಥಗಳಲ್ಲಿ ಬಳಕೆಯಾಗಿದೆ. ಇದೇ ಪದ ಸಂಸ್ಕೃತದಿಂದ ನೇರವಾಗಿ ದ್ರಾವಿಡ ಭಾಷೆಗಳಿಗೆ ತನ್ನ ಮೂಲಾರ್ಥವನ್ನು ಬಳಸಿಕೊಂಡು ಬಂದಿದೆ. ಕೆಲವು ಕಡೆ ಇದೇ ಪದ ಬೀರ ಎಂಬುದಾಗಿ ತದ್ಭವ ರೂಪವನ್ನು ಪಡೆದು ಬಳಕೆಯಲ್ಲಿರುವುದೂ ಉಂಟು. ಆದರೆ ದ್ರಾವಿಡ ಭಾಷೆಯಲ್ಲಿ ಈ ಪದ ಸೇರಿಹೋಗಿದ್ದರೂ ಅದು ತನ್ನ ಮೂಲಾರ್ಥವನ್ನು ಕಳೆದುಕೊಂಡಿಲ್ಲ ಎಂಬುದು ಮುಖ್ಯ.[೩] "ವೀರ ಎಂದರೆ ಒಬ್ಬ ವ್ಯಕ್ತಿಯ ದೈಹಿಕ ಶೌರ್ಯ, ಬಲ ಪ್ರದರ್ಶನ, ರಣ ಪರಾಕ್ರಮ ಎಂಬ ಭಾವನೆ ಸಾರ್ವತ್ರಿಕವಾಗಿದೆ. ಈ ದೈಹಿಕ ಪರಾಕ್ರಮವನ್ನು ಯುದ್ಧ ಪ್ರಸಂಗಗಳು ಯಾವುದಾದರೂ ಪ್ರತಿಭಟನೆ, ಸಾಮಾಜಿಕ ಹಾಗೂ ವೈಯಕ್ತಿಕ ಉದ್ದೇಶದಿಂದ ನಡೆಸುವ ಹೋರಾಟದಲ್ಲಿ ಕೆಚ್ಚೆದೆಯಿಂದ ತೋರಿಸುವ ದೈಹಿಕ ಪರಾಕ್ರಮವೆಂದೇ ಬಾವಿಸಲಾಗುತ್ತದೆ.

ಆದರೆ ವೀರ ಎಂಬುದರ ಪರಿಭಾಷೆ ಇಷ್ಟಕ್ಕೆ ಸೀಮಿತವಲ್ಲ ದೈಹಿಕ ಪರಾಕ್ರಮವಲ್ಲದೆ ಬೌದ್ಧಿಕ ಮತ್ತು ಮಾನಸಿಕ ಉತ್ತುಂಗ ಬಿಂದುಗಳನ್ನು ಎಂದೆಂದಿಗೂ ವೀರ ಎಂದು ಪರಿಗಣಿಸಲೇಬೇಕು."[೬]

ವೀರರು ಎಂಬ ಪದ ಸಾಮಾನ್ಯ ಅರ್ಥದಲ್ಲಿ ಯಾವುದಾದರೂ ಹೋರಾಟದಲ್ಲಿ ಹೋರಾಡಿ ಮಡಿದವರು ಎಂದು ಭಾವಿಸಲಾಗುತ್ತದೆ. ಈ ಅರ್ಥವನ್ನು ಮೀರಿ ಒಂದು ಸಮುದಾಯ ಅಥವಾ ಜನಾಂಗ ಸಂಕಷ್ಟಗಳಿಗೆ ಸಿಲುಕಿದಾಗ ಅವುಗಳ ಪರವಾಗಿ ಅಥವಾ ಅದರಲ್ಲಿ ಒಬ್ಬವನಾಗಿ ಹೋರಾಡಿದವರನ್ನು ವೀರರು ಎಂದು ಗುರುತಿಸುತ್ತೇವೆ. ಕತ್ತಿ ಹಿಡಿದು ಹೋರಾಡದಿದ್ದರೂ ಸಮಸ್ಯೆಗಳ ವಿರುದ್ಧ, ಸ್ವತ್ತುಗಳ ರಕ್ಷಣೆಗಾಗಿ ನಡೆಸಿದ ಕತ್ತಿ ರಹಿತ ಹೋರಾಟ ಮಾಡಿದವರನ್ನು ವೀರರ ಸಾಲಿನಲ್ಲಿ ಗುರ್ತಿಸಬಹುದು.

ಎದುರಾದ ಸಮಸ್ಯೆಗಳಿಗೆ ಎದೆಗುಂದದೆ ಧೈರ್ಯವಾಗಿ ಎದುರಿಸುವ ಉದಾತ್ತಗುಣ ಸಮೂಹದವರು ವೀರರೆನಿಸುತ್ತಾರೆ. ಈ ವೀರತ್ವವನ್ನು ಭಕ್ತಿ, ದಾನ, ದಯೆ, ಕರುಣೆ, ತ್ಯಾಗ, ಪ್ರೇಮ ಈ ಮೊದಲಾದ ಗುಣ ಸ್ವಭಾವಗಳಲ್ಲೂ ಗುರುತಿಸಬಹುದು. ತ್ಯಾಗ, ದಾನಗಳಲ್ಲಿ ಕರ್ಣ, ಸತ್ಯದಲ್ಲಿ ಹರಿಶ್ಚಂದ್ರ ಹಾಗೂ ಧರ್ಮರಾಯ, ಭಕ್ತಿಯಲ್ಲಿ ಬೇಡರ ಕಣ್ಣಪ್ಪ, ಸಾಹಸದಲ್ಲಿ ಭೀಮ, ಯುದ್ಧದಲ್ಲಿ ಅರ್ಜುನ ಹೀಗೆ ಹಲವು ಬಗೆಗಳಲ್ಲಿ ವೀರರನ್ನು ಗುರ್ತಿಸಬಹುದು.

ವೈ.ಎಫ್. ಸೈದಾಪುರರು ಹೇಳುವಂತೆ "ವೀರತ್ವವೆಂದರೆ ಕೇವಲ ದೈಹಿಕ ಬಲ ಪ್ರದರ್ಶನದಿಂದ ಮೌಲಿಕ ಉದ್ದೇಶಗಳನ್ನು ಸಾಧಿಸುವ ಪ್ರಕ್ರಿಯೆ ಮಾತ್ರವಲ್ಲ, ದೈಹಿಕ ಬಲ ಪ್ರದರ್ಶನಕ್ಕಿಂತ ಭಿನ್ನವಾಗಿ ಮನೋಬಲದ ಮೂಲಕ ಸಂಕಲ್ಪ ಪೂರಕವಾಗಿ ಯಾವುದಾದರೊಂದು ಧ್ಯೇಯೋದ್ದೇಶಕ್ಕಾಗಿ ಸಾಮಾನ್ಯ ಮಾನವನ ಮನಸ್ಥಿತಿಯನ್ನು ಮೀರಿಸುವಂತಹ ಕಾರ್ಯಕ್ರಮಗಳನ್ನು ಮಾಡಿದರೆ ಅದನ್ನು ವೀರತನವೆಂದು ಪರಿಭಾವಿಸಬೇಕಾಗುತ್ತದೆ. ಹಾಗೆಂದೆ ಭೀಮ, ಹನುಮಂತ, ರಾಮ, ಹರಿಶ್ಚಂದ್ರ, ಕರ್ಣ ಇವರೆಲ್ಲ ಒಂದೊಂದು ಬಗೆಯ ವೀರರೇ ಆಗಿದ್ದಾರೆ. ಈ ರೀತಿ ಜಾನಪದ ಬದುಕಿನಲ್ಲಿ ರಣ ಪರಾಕ್ರಮದೊಂದಿಗೆ ಭಕ್ತಿ, ದಾನ, ತ್ಯಾಗ, ಮಿತ್ರತ್ವ ನಿರ್ವಹಣೆ, ಸತಿತ್ವ ನಿರ್ವಹಣೆ, ಗ್ರಾಮಹಿತ, ಕೌಟುಂಬಿಕ ಹಿತ ಮುಂತಾದ ಹತ್ತಾರು ವೈವಿದ್ಯಮಯ ನಾನಾ ವಿಧವಾದ ಜೀವನದ ಮುಖಗಳಲ್ಲಿ ಮನೋಬಲವನ್ನು ಆಧರಿಸಿದ ವೀರತ್ವವು ಕಂಡುಬರುತ್ತದೆ."[೭] ಇಲ್ಲಿ ವೀರತ್ವ ಎಂಬುದು ಒಂದು ರೀತಿಯಲ್ಲಿರುವುದಿಲ್ಲ, ಒಬ್ಬೊಬ್ಬರಲ್ಲಿಯೂ ಬೇರೆ ಬೇರೆ ಸ್ವರೂಪದಲ್ಲಿರುತ್ತದೆ ಎಂಬುದನ್ನು ಗುರುತಿಸಬಹುದು.

ಡಾ.ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡುವಂತೆ "ಪ್ರಾಚೀನ ಕರ್ನಾಟಕದ ಸಾಮಾಜಿಕ ಮೌಲ್ಯಗಳಲ್ಲಿ ಚಾಗ(ತ್ಯಾಗ)ದಷ್ಟೇ ಮುಖ್ಯವಾದುದು ಬೀರ(ವೀರ). ಸಂಪಾದಿಸಿದ ಹಣವನ್ನು ಉದಾರವಾಗಿ ದಾನ ಮಾಡಬೇಕು. ಯುದ್ಧದಲ್ಲಿ ಧೈರ್ಯದಿಂದ ಹೋರಾಡಬೇಕು.

ಇವೆರಡೂ ಆ ಕಾಲದ ಆದರ್ಶಗಳು. ಲೋಭಿ ಎನಿಸಿಕೊಳ್ಳುವುದು ಪಂದೆ (ಹಂದೆ, ಹೇಡಿ) ಎನಿಸಿಕೊಳ್ಳುವುದು ಸಾವಿಗಿಂತ ಕಡೆ ಎಂಬ ಭಾವನೆ ಆ ಕಾಲದಲ್ಲಿತ್ತು.[೧] ವೀರತ್ವ ಎಂಬುದು ಇಲ್ಲಿ ಒಂದು ಮೌಲ್ಯವಾಗಿ ಗುರುತಿಸಲ್ಪಟ್ಟಿದೆ.

ಡಾ. ವಿರುಪಾಕ್ಷಿ ಪೂಜಾರಹಳ್ಳಿರವರು ಉಲ್ಲೇಖಿಸಿರುವಂತೆ ವೀರರು ಹೆಚ್ಚಾಗಿ ರಾಜ್ಯಾಡಳಿತ, ಕ್ರೀಡೆ, ಬೇಟೆ, ಪಶುಪಾಲನೆ ಮತ್ತು ಕೃಷಿ ವ್ಯವಸ್ಥೆಯ ಕ್ಷೇತ್ರಗಳಲ್ಲಿ ಕಂಡುಬರುತ್ತಾರೆ. ವೀರನ ಲಕ್ಷಣ, ಸಾಧನೆಗಳಿಗೆ ಆರ್ಥಿಕಾಭಿವೃದ್ಧಿಯೂ ಮಾನದಂಡವಾಗಿತ್ತು. ವೀರನೊಬ್ಬ ಅಜ್ಞಾತ ಸಮುದಾಯಕ್ಕೆ ವೀರನಾಗಿದ್ದರೂ ನಾಗರೀಕ ಜಗತ್ತಿನಲ್ಲಿ ಅನಾಮಧೇಯನಾಗಿರುತ್ತಾನೆ. ರಾಜಪ್ರಭುತ್ವಗಳು ಸಾಹಸ, ಪರಾಕ್ರಮ, ಶಕ್ತಿ ಪ್ರದರ್ಶನಕ್ಕೆ ಪ್ರೋತ್ಸಾಹಿಸುತ್ತಿದ್ದವು. ಆದ್ದರಿಂದ ಸೈನಿಕರು, ಮಾಂಡಲಿಕರು, ಸಾಮಾಂತರು, ಪ್ರಜೆಗಳು ದೃಢಕಾಯತೆಯನ್ನು ಕಾಪಾಡಿಕೊಳ್ಳುತ್ತಿದ್ದರು. ವೀರರು ಯುದ್ಧ, ಬೇಟೆ, ಅಂಗರಕ್ಷಣೆ, ರಾಜನ ಪ್ರಾಣರಕ್ಷಣೆ ಮಾಡುತ್ತಿದ್ದರು.[೨] ಇಲ್ಲಿ ವೀರತ್ವ ರಾಜ ಮಹಾರಾಜರುಗಳಿಂದ ಜನ ಸಾಮಾನ್ಯರಲ್ಲಿ ಪ್ರಚೋದಿಸಲ್ಪಡುತ್ತಿದ್ದುದ್ದನ್ನು ಗುರುತಿಸಬಹುದು.

ಹತ್ತನೇ ಶತಮಾನವು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವೀರತ್ವವನ್ನು ರಾಜರಿಗೆ ಹೋಲಿಸಿ ಕೊಂಡಾಡಿದ್ದು ಗುರ್ತಿಸಲ್ಪಡುತ್ತದೆ. ಅಂದಿನ ಪಂಪ, ರನ್ನ ಮೊದಲಾದ ಕವಿಗಳು ತಮ್ಮ ಕೃತಿಗಳ ಶೀರ್ಷಿಕೆಯಲ್ಲೇ ಇದನ್ನು ಸೂಚಿಸಿದ್ದಾರೆ. ಪಂಪ 'ವಿಕ್ರಮಾರ್ಜುನ ವಿಜಯ'ದಲ್ಲೂ, ರನ್ನ 'ಸಾಹಸ ಭೀಮವಿಜಯ'ದಲ್ಲೂ ವೀರ ಮೌಲ್ಯವನ್ನು ಎತ್ತಿಹಿಡಿದಿದ್ದಾರೆ. ಹೋರಾಟಗಳಲ್ಲಿ ಮಡಿದ ವೀರರ ನೆನಪಿಗಾಗಿ ವೀರಗಲ್ಲುಗಳನ್ನು ನೆಡುತ್ತಿದ್ದರು. ವೀರಗಲ್ಲು ಶಾಸನಗಳಲ್ಲಿ ಉಕ್ತವಾಗಿರುವಂತೆ ಯುದ್ಧವನ್ನು ಜಯಿಸಿದ್ದಾದರೆ ಲಕ್ಷ್ಮಿ ಲಭಿಸುತ್ತಾಳೆ. ಮೃತನಾದರೆ ಅವನ ವೀರತ್ವವನ್ನು ಮೆಚ್ಚಿ ಅಪ್ಸರ ಸ್ತ್ರೀಯರು ಒಲಿಯುತ್ತಾರೆ ಎಂದು ನಂಬಲಾಗಿತ್ತು. ಯುದ್ಧ, ಬೇಟೆ, ಗೋಗ್ರಹಣ, ಮಹಿಳೆಯರ ಪ್ರಾಣ, ಮಾನ ರಕ್ಷಣೆಗಾಗಿ ಹೋರಾಡಿ ಮಡಿದವರ ನೆನಪಿಗಾಗಿ ವೀರಗಲ್ಲುಗಳನ್ನು ಕೆತ್ತಿಸಲಾಗುತ್ತಿತ್ತು. ಹೋರಾಟಗಳಲ್ಲಿ ಸತ್ತ ಪತಿಯ ಜೊತೆಗೆ ಚಿತೆ ಏರಿದ ಮಹಿಳೆಯ ನೆನಪಿಗಾಗಿ ಸತಿಕಲ್ಲುಗಳನ್ನು ನೆಡಲಾಗುತ್ತಿತ್ತು. ವೀರರಿಗೆ ವೀರಕಾಣಿಕೆ ಕೊಡುವ ಪದ್ಧತಿ ಇತ್ತು. ವೀರರ ಧರ್ಮಕ್ಕೆ ವೀರಧರ್ಮವೆಂತಲೂ, ವೀರನ ತಾಯಿಗೆ ವೀರಮಾತೆ, ವೀರ ಜನನಿ ಎಂದೂ ವೀರರ ಪತ್ನಿಗೆ ವೀರಪತ್ನಿ ಎಂದು ಕರೆಯಲಾಗುತ್ತಿತ್ತು. ರಾಜ್ಯದ ರಕ್ಷಣೆಗಾಗಿ ಹೋರಾಡಿದ ರಾಣಿಯರನ್ನು ವೀರರಾಣಿ ಎಂದು ಕರೆಯುತ್ತಿದ್ದರು. ಉದಾಹರಣೆಗೆ ವೀರರಾಣಿ ಕಿತ್ತೂರು ಚನ್ನಮ್ಮ, ವೀರವನಿತೆ ಒನಕೆ ಓಬವ್ವ ಮುಂತಾದವರಿದ್ದಾರೆ.

ಬಸವಣ್ಣನವರು ತಮ್ಮ ವಚನವೊಂದರಲ್ಲಿ 'ವೀರನಾದರೆ ವೈರಿಗಳು ಮೆಚ್ಚಬೇಕು' ಎಂಬಲ್ಲಿ ವೀರನ ದಿಟ್ಟತನ, ಸಾಹಸ, ಧೈರ್ಯ, ಹೋರಾಟ ಗುಣಗಳು ಶತೃಗಳಲ್ಲೂ ಆಶ್ಚರ್ಯ ಹುಟ್ಟಿಸುವಂತಿವೆ.

ಇತಿಹಾಸ ಕಾಲದ ವೀರರನ್ನು, ಅರಸರನ್ನು ಗಮನಿಸಿದ ಹಾಗೇ ಈ ವೀರತನ ಎಂಬುದು ಯಾವುದೇ ಒಂದು ಜಾತಿಯವರಲ್ಲಿ ಪ್ರಕಟವಾಗದೆ ವ್ಯಕ್ತಿಯ ಸ್ವಾಭಿಮಾನ, ಮಹತ್ವಾಕಾಂಕ್ಷೆ, ಶೌರ್ಯ, ಪರಾಕ್ರಮವನ್ನು ಅವಲಂಬಿಸಿ ತನ್ನದೇ ಆದ ರೀತಿಯಲ್ಲಿ ಎಲ್ಲಾ ಜಾತಿಯ ವ್ಯಕ್ತಿಗಳಲ್ಲಿಯೂ ಪ್ರಕಟವಾಗಿದೆ. ಇಂತಹ ಜಾತಿಯವರೇ ವೀರರು ಎಂದು ಕರೆಯುವುದಕ್ಕಿಂತ ವೀರರೆಲ್ಲರೂ ವೀರ ಕುಲದವರೇ ಎಂಬ ಧ್ವನಿ ಪಂಪನಲ್ಲಿ ಕೇಳಿಬರುತ್ತದೆ. ಕೆಳಜಾತಿಯವರೆಂದು ಭಾವಿಸಿದ್ದ ಜನಾಂಗಗಳಿಂದಲೇ ನಾಯಕರು, ಅರಸರು, ಸಾಮಂತರು ಮತ್ತು ಪಾಳೆಯಗಾರರು ಬಂದವರು. ಇಂತಹವರು ತಮ್ಮ ಪರಾಕ್ರಮದಿಂದ ಪ್ರತಿಷ್ಠಿತರಾದ ಮೇಲೆ ತಮ್ಮ ವೀರತ್ವದ ಪ್ರತಿಷ್ಠೆಯ ಜೊತೆಗೆ ಜಾತಿಯ ಪ್ರತಿಷ್ಠೆಯನ್ನು ಸೇರಿಸಿಕೊಳ್ಳುವ ಸಲುವಾಗಿ ತಮ್ಮ ವಂಶಾವಳಿಗಳನ್ನು ಹೇಳಿಕೊಳ್ಳಲಿಲ್ಲ. ಪುರಾಣ ಕಾಲದ ಸೂರ್ಯ, ಚಂದ್ರ ವಂಶದವರಿಂದ ತಮ್ಮ ವಂಶ ಉತ್ಪನ್ನವಾಯಿತೆಂದು ಹೇಳಿಕೊಳ್ಳುತ್ತಾರೆ.[೯]

ಭಾರತೀಯ ಪರಂಪರೆಯಲ್ಲಿ ಪ್ರಾಚೀನ ಕಾಲದಿಂದಲೂ ಜನಪದರಲ್ಲೇ ಆಗಲಿ, ಶಿಷ್ಟ ಪರಂಪರೆಯಲ್ಲೇ ಆಗಲಿ ವೀರರಾಗಿದ್ದ ಸ್ಥಾನಮಾನ ಗೌರವಗಳು ದೊಡ್ಡವು. ನಮ್ಮ ಪ್ರಮುಖ ಕಾವ್ಯಗಳಲ್ಲಿ ಅರ್ಧಕ್ಕರ್ಧ ಯುದ್ಧ ವಿವರಗಳಿಂದಲೇ ತುಂಬಿಹೋಗಿವೆ. ರಾಮಾಯಣ, ಮಹಾಭಾರತ ಕಾವ್ಯಗಳ ಪ್ರಮುಖ ಪಾತ್ರಗಳಾದ ರಾಮ, ಕೃಷ್ಣರೂ ವೀರರೇ. ವಾಸ್ತವವಾಗಿ ರಾಮಾಯಣ, ಮಹಾಭಾರತದ ನಂತರ ವೀರರ ಸ್ಥಾನಮಾನಗಳು ಇನ್ನೂ ಹೆಚ್ಚಿವೆ. ಅವರವರ ಹೆಸರಿನಲ್ಲಿ ಕಥೆ, ಕಾವ್ಯ, ಸ್ಮಾರಕಗಳು ನಿರ್ಮಾಣವಾಗಿ ಪೂಜಿಸಿ ಗೌರವಿಸಲ್ಪಟ್ಟರು. ಒಟ್ಟಿನಲ್ಲಿ ವೀರತ್ವ ಎಂದರೆ ಅದು ಸಾಮಾನ್ಯನಿಂದ, ಶೂದ್ರನಿಂದ ಹಿಡಿದು ದಂಡನಾಯಕನವರೆಗಿರಲಿ, ಪ್ರಾಣಿಯಲ್ಲಿರಲಿ ಮಾನವ ಜನಾಂಗ ಗೌರವಿಸುತ್ತಿತ್ತು. ವೀರರನ್ನು ವೀರವನಿತೆಯರನ್ನು ಸಮಾಜ ಹೇಗೆ ಗೌರವಿಸಿದೆಯೋ ಹಾಗೆಯೇ ವೀರರಲ್ಲದವರನ್ನು ಜನಪದರು ಅಷ್ಟೇ ಹೀನಾಯವಾಗಿ ಕಂಡಿದ್ದಾರೆ. ಹೋರಾಟಕ್ಕೆ ಹೆದರಿ ಹಿಂತಿರುಗಿ ಬಂದ ಹೇಡಿಗೆ ಬ್ರಹ್ಮಪಾತಕ ಒದಗುತ್ತದೆ ಎಂದು ಹೆದರಿಕೆಯನ್ನು ಹುಟ್ಟಿಸಿದ್ದರು.[೧೦]

**ವೀರ-ನಾಯಕ ಪರಿಕಲ್ಪನೆಯ ಹುಟ್ಟು ಮತ್ತು ಬೆಳವಣಿಗೆ :**

ಮಾನವನ ಜೀವಿತಕಾಲದ ವ್ಯಕ್ತಿತ್ವವನ್ನು ಆಧರಿಸಿ ಮಾನವನನ್ನು ಶ್ರೇಷ್ಠನನ್ನಾಗಿ ಗುರುತಿಸಬಹುದು. ಸಮಾಜವು ಒಪ್ಪಿತವಾದ ತನ್ನ ಕರ್ತವ್ಯಗಳನ್ನು ಪಾಲಿಸಿ ತಮ್ಮ ಮನುಷ್ಯತ್ವವನ್ನು ಮೆರೆಸುವುದು ತಮ್ಮ ಜೀವನವನ್ನು ತ್ಯಾಗಮಾಡಿ ಯಾವುದೇ ರೀತಿಯ ಹಂಗಿಗೂ ಒಳಗಾಗದೆ ಸಮಾಜದ ಮೌಲ್ಯಗಳನ್ನು ಎತ್ತಿಹಿಡಿಯುವಲ್ಲಿ ಯಾವುದೇ ರೀತಿಯ ಸ್ವಾರ್ಥ ತೋರದೆ ಪರಾಕ್ರಮಿಯಾಗಿ ಸಮಾಜ ವಿರೋಧಿ ಚಟುವಟಿಕೆಗಳ ವಿರುದ್ಧದ ಹೋರಾಟಗಾರರಾಗಿ ಅಸಂಖ್ಯಾತ

ಮಂದಿ ಮರಣವನ್ನಪ್ಪಿ ದೈವತ್ವಕ್ಕೇರಿದ್ದಾರೆ. ಅವರನ್ನು ಅಮರ ವೀರರು ಎಂದು ಕರೆಯಬಹುದು. ಇಂತಹ ವೀರರು ಎಷ್ಟು ದಿನಗಳ ಕಾಲ ಜೀವಿಸಿದ್ದರು ಎಂಬುದಕ್ಕಿಂತಲೂ ಅವರು ಸತ್ತಮೇಲೆ ಎಷ್ಟು ಕಾಲದವರೆವಿಗೂ ಜೀವಿಸುತ್ತಿದ್ದಾರೆ ಎಂಬುದೇ ಮುಖ್ಯ. ಸತ್ತವರನ್ನೂ ಕೂಡ ಸಮಾಜ ತನ್ನ ನೆನಪಿನ ಪುಟಗಳಲ್ಲಿ ಬದುಕಿಸುತ್ತದೆ. ವ್ಯಕ್ತಿ ಸತ್ತರೂ ವ್ಯಕ್ತಿತ್ವ ಜೀವಿಸಿರುತ್ತದೆ. ಇಂತಹ ವೀರರ ಮೌಲ್ಯಾದರ್ಶಗಳನ್ನು ತಮ್ಮ ಮುಂದಿನ ಪೀಳಿಗೆಯು ತಿಳಿಯಬೇಕೆಂಬುದೇ ಸಮಾಜದ ಉದ್ದೇಶ. ಒಂದಲ್ಲಾ ಒಂದು ಕಾರಣಕ್ಕೆ ಹೋರಾಡುವವನೇ ವೀರ. ಅದು ಸದುದ್ದೇಶದ ಹೋರಾಟವಾಗಿರುತ್ತದೆ. ಬಹುಮಂದಿ ಮಾಡಲಾಗದ ಕಾರ್ಯವನ್ನು ಒಬ್ಬನೇ ಮಾಡಿ ತೋರಿಸುವನೋ ಅವನೇ ವೀರ ಎಂಬುದು ಆ ಶಬ್ಧದ ಸಾಮಾನ್ಯಾರ್ಥ. ಆ ಕಾರ್ಯ ಸಮಾಜ ಪರವಾಗಿರಲಿ, ಸ್ವಾಮಿನಿಷ್ಠೆಯದ್ದಾಗಿರಲಿ ಸ್ವಾಭಿಮಾನದಿಂದ, ನಿಷ್ಠೆಯಿಂದ ಹೋರಾಡಿದವನು ವೀರನಾಗಿ ಜನರ ನೆನಪಿನಂಗಳದಲ್ಲಿ ಉಳಿದುಹೋಗುವನು.

ಇಡೀ ಪ್ರಪಂಚದಲ್ಲಿಯೇ ಇಂತಹ ವೀರರು ಅಗಣಿತವಾಗಿದ್ದಾರೆ. ಅಂದಿನ ಸಮಾಜದ ದೃಷ್ಟಿಯಲ್ಲಿ ಅವರು ಮಾಡಿರುವ ಸಾಹಸಗಳಿಗೆ ಬೆಲೆಯಿದ್ದು ಅವರನ್ನು ವೀರರೆಂದು ಕರೆದು ಅವರು ಸತ್ತಮೇಲೂ ಅವರ ಸಮಾದಿಗಳನ್ನು ಪೂಜಿಸುವ ಪದ್ಧತಿ ನಮ್ಮಲ್ಲಿ ಮೊದಲಿನಿಂದಲೂ ಬೆಳೆದುಬಂದಿದೆ. ಇಂಥವರು ವೀರಸ್ವರ್ಗವನ್ನು ಸೇರುತ್ತಾರೆಂದು, ದೇವರಾಗುತ್ತಾರೆಂದು ನಮ್ಮ ಸಾಮಾನ್ಯ ಜನರು ನಂಬಿಕೊಳ್ಳುತ್ತಾರೆ. ಇವರನ್ನು ಆರಾಧಿಸುವುದರಿಂದ ತಮ್ಮ ಇಷ್ಟಾರ್ಥಗಳು ಈಡೇರುತ್ತವೆಂದು ಅವರು ಬಾವಿಸುತ್ತಾರೆ. ಸಂಗೊಳ್ಳಿ ರಾಯಣ್ಣನಂತಹವರು ದೇವರಾಗಿರುವುದು ಹೀಗೆಯೇ.

ಇದೇ ಕಾಳಜಿಯಲ್ಲಿ ಸಮಾಜಕ್ಕಾಗಿ ಅಥವಾ ತಮ್ಮ ಸಂಸ್ಕೃತಿಗಾಗಿಯಾಗಲಿ, ಕುಲಕ್ಕಾಗಲಿ ಹೋರಾಡಿ ಮಡಿದವರೇ ಇಂದಿಗೂ ಕೂಡ ಪೂಜಾರ್ಹರಾಗಿ ಗುಡಿ, ಗುಬ್ಬ, ಮಂಟಪಗಳಲ್ಲಿ ಸ್ಮಾರಕ ಶಿಲೆಗಳಾಗಿ ನಿಂತಿರುವುದು ಅಂದು ಒಬ್ಬ ವೀರ ಯಾವ ತೆರನಾದ ಹೋರಾಟವನ್ನುಮಾಡಿ ಮಡಿದ ಎಂಬುದನ್ನು ಇಂದು ಅವನ ಬಗೆಗಿನ ಹಲವು ಬಗೆಯ ದಾಖಲೆಗಳಿಂದ, ಅವನ ಕುರಿತಾದ ನಂಬಿಕೆ-ಆಚರಣೆಗಳಿಂದ ತಿಳಿಯಬಹುದು. ಹೀಗೆ ವೀರಸ್ವರ್ಗವನ್ನು ಪಡೆದ ವೀರನನ್ನು ತುಂಬಾ ವರ್ಷಗಳವರೆವಿಗೂ ಜನ ನೆನಪಿನಲ್ಲಿಡುವುದುಂಟು. ಅವನು ಸತ್ತರೂ ಅವನ ವ್ಯಕ್ತಿತ್ವ ಸಾಯುವುದಿಲ್ಲ. ವಿರೋಧಿಯ ವಿರುದ್ಧ ಹೋರಾಡಿ ಗೆಲ್ಲಲಾರದೆ ಬೆನ್ನು ತಿರುಗಿಸಿದವನನ್ನು ಸಮಾಜ ಹೇಡಿ ಎಂದು ಕರೆದು ಛೀ ಎನ್ನುತ್ತದೆ. ಅದೇ ಒಬ್ಬ ವೀರ ಮರಣವನ್ನಪ್ಪಿದರೆ ಕಾಲಾಂತರಗಳವರೆಗೂ ಅವನ ಆದರ್ಶಗಳನ್ನು ಪೂಜಿಸಿಕೊಂಡು ಬರುತ್ತದೆ. ಈ ರೀತಿ ಪೂಜೆಗೊಳಗಾಗುತ್ತಿರುವ ವೀರರ ಸ್ಮಾರಕಗಳನ್ನು ಭಾರತದ ಮೂಲೆ ಮೂಲೆಯಲ್ಲಿಯೂ ಕಾಣಬಹುದಾಗಿದೆ. ಈ ರೀತಿಯ ವೀರರು ಮುಂದಿನ ಪೀಳಿಗೆಯ ವೀರನಾಯಕರಂತೆ ನಿಲ್ಲುವರು.

ಜನಾಂಗದ ಮುಖ್ಯಸ್ಥರು, ನಾಯಕರು, ವೀರರು ಮುಂತಾದ ವ್ಯಕ್ತಿಗಳು ಹೇಗೆ ತಮ್ಮ ಲೌಕಿಕ ಜೀವನದಲ್ಲಿ ಸಮರ್ಥರಾಗಿರುತ್ತಾರೋ ಹಾಗೆಯೇ ಸತ್ತ ಮೇಲೂ ತುಂಬಾ ಪ್ರಭಾವಶಾಲಿಗಳಾಗುತ್ತಾರೆ ಎಂಬ ಭಾವನೆ ನಮ್ಮ ಜಾನಪದರಲ್ಲಿದೆ. ಆದುದರಿಂದಲೇ ಸತ್ತ ಆತ್ಮದ ಬಗ್ಗೆ ಪ್ರೀತಿ ಗೌರವವೂ, ಶವದ ಬಗ್ಗೆ ಭೀತಿಯೂ ಇರುತ್ತದೆ. ಆದುದರಿಂದ ವೀರರ ಸರ್ವಶ್ರೇಷ್ಠವಾದ ಸಾವನ್ನು ಒಪ್ಪಿಕೊಂಡು ಅವರಿಗೆ ಗೌರವ ತೋರಿಸುವ ದೃಷ್ಟಿಯಿಂದ ಅವನು ಸತ್ತ ಭಾಗದಲ್ಲಿ ಗುಡಿಯೊಂದನ್ನು ಕಟ್ಟಿ ಅವನನ್ನು ದೇವರೆಂದು ಪೂಜಿಸತೊಡಗಿದರು. ಹೀಗೆ ಇಂದಿಗೂ ಕೂಡ ಹಿಂದೆ ಹೋರಾಡಿ ಮಡಿದ ಅನೇಕ ವೀರರನ್ನು ತಮ್ಮ ನಾಯಕರೆಂದು ಕರೆದು ಜನ ಪೂಜಿಸುತ್ತಿದ್ದಾರೆ.

**ದೈವತ್ವಾರೋಪಣೆ :**

ಬಹು ಸಂಸ್ಕೃತಿಗಳ ಬೀಡಾದ ಭಾರತದ ಪ್ರತಿಯೊಂದು ಹಳ್ಳಿಗಳಲ್ಲಿಯೂ, ಬೀದಿ ಬೀದಿಗಳಲ್ಲಿಯೂ ಒಂದಲ್ಲಾ ಒಂದು ಕಲ್ಲು, ಮಣ್ಣು, ಗಿಡ ಪೂಜೆಗೊಳಗಾಗುತ್ತಿರುತ್ತವೆ. ನಮ್ಮ ಜನಪದದ ಬದುಕು ಹಾಸಿರುವುದು ಪ್ರಕೃತಿಯಲ್ಲಿಯೇ. ಪ್ರಕೃತಿಯ ಆರಾಧಕರಾಗಿರುವ ಜನಪದೀಯರು ತಮ್ಮ ಕುಲಕ್ಕಾಗಿಯೋ ತಮ್ಮ ಒಳಿತಿಗಾಗಿಯೋ ಅಥವಾ ತಮ್ಮ ಊರಿನ ಒಳಿತಿಗಾಗಿಯೋ ಹೋರಾಡಿ ಮಡಿದ ವೀರರನ್ನು ತಮ್ಮ ಕುಲದ ನಾಯಕ ಎಂಬುದಾಗಿ ಹೆಮ್ಮೆಯಿಂದ ಹೇಳಿಕೊಂಡು ಅವರು ಉಪಯೋಗಿಸಿ ಬಿಟ್ಟು ಹೋಗಿರುವ ಆಯಧ ಅಥವಾ ಮತ್ತಾವ ವಸ್ತುವನ್ನಾದರೂ ಆಗಿರಬಹುದು ಅವುಗಳನ್ನು ಇಟ್ಟುಕೊಂಡು ಗುಡಿಯನ್ನು ಕಟ್ಟಿ ಪೂಜಿಸತೊಡಗುವರು. ಅದು ಅವರ ಮುಗ್ಧತೆಯ ಪ್ರತೀಕವೆಂದು ತಿಳಿದರೂ ಅದರಲ್ಲಿ ಅವರಿಗೆ ಆಳವಾದ ಆಸಕ್ತಿ ಇರುತ್ತದೆ. ಜೀವನದ ಒಂದು ಅವಿಭಾಜ್ಯ ಅಂಗದಂತೆ ದೈವೀ ಆರಾಧನೆಯು ಕಂಡುಬರುತ್ತದೆ.

ಮ್ಯಾಕ್ಸ್ ಮುಲ್ಲರ್ ಎಂಬ ವಿದ್ವಾಂಸನು 'ಭೀತಿ ಸಿದ್ಧಾಂತ'ದಲ್ಲಿ ಮಂಡಿಸಿರುವಂತೆ ಆದಿಮಾನವನು ಪ್ರತಿಯೊಂದನ್ನು ಕಂಡು ಹೆದರುತ್ತಿದ್ದನು. ಭೂಕಂಪ, ಸಿಡಿಲು, ಭೋರ್ಗರೆಯುವ ಮಳೆ, ಬಿರುಗಾಳಿ ಇವೆಲ್ಲಾ ಆದಿವಾಸಿಗಳಲ್ಲಿ ಭಯ, ಆಶ್ಚರ್ಯಗಳನ್ನು ಉಂಟುಮಾಡಿದವು. ಪ್ರಕೃತಿ ವಿಕೋಪಗಳಿಗೆ ಮನುಷ್ಯ ಮೊದಲು ಹೆದರಿಕೊಂಡು ಆ ಭೀತಿಯ ನಿವಾರಣೆಗಾಗಿ ಆರಾಧನೆಯನ್ನು ಸೃಷ್ಟಿ ಮಾಡಿದ. ಆರಾಧನೆಯ ಪರಿಕಲ್ಪನೆಯು ದಿನದಿಂದ ದಿನಕ್ಕೆ ಬೆಳೆಯುತ್ತಾ ಹೋಯಿತು. ಅತಿಮಾನುಷ ಕಾರಣಗಳಿಗೆ ವಿವರಣೆ ಕೊಟ್ಟು "ನಮಗಿಂತ ಮಿಗಿಲಾದ ಅತಿಮಾನುಷ ಶಕ್ತಿಯೊಂದಿದೆ' ಎಂದು ನಂಬಿ ಆ ಶಕ್ತಿಯನ್ನು ಆರಾದಿಸಿದರೆ ವಿಕೋಪಗಳಿಂದ ಪಾರಾಗುತ್ತೇವೆ ಎಂಬುದನ್ನು ಮನಗಂಡರು. ಸದಾ ಅವರಲ್ಲಿ ಆ ಭಯ ಕಾಡುತ್ತಿತ್ತು. ಆದುದರಿಂದ ತಮ್ಮ

ಪೂರ್ವಿಕರ ಶಕ್ತಿಗಳನ್ನು ತಾವೂ ಒಲಿಸಿಕೊಳ್ಳಲು ಬಯಸುತ್ತಿದ್ದರು. ಇದರ ಹಿನ್ನೆಲೆಯಲ್ಲಿ ಧರ್ಮದ ಉಗಮವಾಯಿತು. ಭೀತಿಯ ವಾತಾವರಣದಲ್ಲೇ ಇಂದಿಗೂ ಕೂಡ ಹೊಸ ಆಚರಣೆಗಳು ನಡೆಯುತ್ತಲೇ ಇವೆ.

ವೀರ ನಾಯಕರು ಸತ್ತ ಮೇಲೂ ಕೂಡ ಅವರ ಲೌಕಿಕ ಜೀವನದಂತೆ ಪ್ರಭಾವಶಾಲಿಗಳಾಗಿರುತ್ತಾರೆ. ಅವರ ಭೌತಿಕ ದೇಹ ನಶಿಸಿ ಹೋಗಿದ್ದರೂ ಅವರ ಆತ್ಮ ತಮಗೆ ಒಳ್ಳೆಯದನ್ನು, ಕೆಟ್ಟದ್ದನ್ನು ಮಾಡುವ ಶಕ್ತಿಯನ್ನು ಪಡೆದಿದೆ ಎಂಬ ನಂಬಿಕೆ ಸತ್ತ ಹಿರಿಯರನ್ನು ಮುಂದಿನ ಪೀಳಿಗೆಯವರು ಸ್ಮರಿಸಬೇಕು ಎಂಬ ಭಯ ಮಿಶ್ರಿತ ಕೃತಜ್ಞತಾ ಭಾವವಿರುತ್ತದೆ. ಸತ್ತ ಹಿರಿಯರು ಮತ್ತೆ ತಮ್ಮ ಮನೆಯಲ್ಲಿಯೇ ಪುನರ್‌ಜನ್ಮವೆತ್ತಿ ಬರುತ್ತಾರೆ ಎಂಬಂಥ ಈ ನಂಬಿಕೆಗಳು ಮಾನವ ಸಂಸ್ಕೃತಿಯ ಮೂಲಭೂತ ಆಶಯಗಳಾಗಿ ಪರಿಸರ ಹಾಗೂ ಜನರ ಮನೋಧರ್ಮವನ್ನು ಅನುಸರಿಸಿ ಬೆಳೆದಿವೆ.

ಆರ್ ಶೇಷಾಶಾಸ್ತ್ರಿಗಳು ಅಭಿಪ್ರಾಯಪಡುವಂತೆ ಪೂರ್ವಜರ ಆರಾಧನಾ ಸಂಪ್ರದಾಯದ ವಿಶೇಷ ಗುಣವೆಂದರೆ ಸತ್ತ ವ್ಯಕ್ತಿಗಳನ್ನು ಮನುಷ್ಯ ಮಾತ್ರದವರೆಂದು ಭಾವಿಸದೆ ದೈವಾಂಶ ಸಂಭೂತರೆಂದೇ ಪರಿಗಣಿಸುವುದಾಗಿದೆ. ಈ ರೀತಿಯ ಆರಾಧನಾ ಸಂಪ್ರದಾಯ ಕರ್ನಾಟಕದಲ್ಲೂ ಇರುವುದನ್ನು ಕಾಣಬಹುದು ಒಂದು ಕಾಲದಲ್ಲಿ ವೀರನಾಗಿ ಮೆರೆದು ಅಸಹಾಯ ಶೂರನಾದ ಕುಮಾರರಾಮ ತನ್ನ ಚಿಕ್ಕಮ್ಮನ ಕಲಹಕ್ಕೆ ಬಲಿಯಾದರೂ ತನ್ನ ಆದರ್ಶವನ್ನು ಬಿಡದೆ ಮಡಿದ. ಆ ಕುಮಾರರಾಮನ ಪರನಾರೀ ಸೋದರತ್ವದ ಆದರ್ಶವನ್ನು ಕಂಡು ಆಕರ್ಷಿತರಾಗಿ ಅವನಿಗೊದಗಿದ ದುರ್ಮರಣಕ್ಕೆ ಮರುಗಿದ ಬೇಡರ ಕುಲ ಅವನನ್ನು ತಮ್ಮ ಕುಲದೇವತೆಯನ್ನಾಗಿಯೇ ಸ್ವೀಕರಿಸಿತು. ಕುರುಬ ಜನಾಂಗದಲ್ಲಿ ಇಂದಿಗೂ ಪ್ರಚಲಿತದಲ್ಲಿರುವ ಬೇರೆ ದೇವರ ಆರಾಧನೆಯೂ ಸಹ ಇದೇ ರೀತಿಯ ವೀರನ ಆರಾಧನೆಯಲ್ಲಿಯೇ ಮೂಲವನ್ನು ಪಡೆದಿರಬೇಕು. ಕಳೆದ ಶತಮಾನದಲ್ಲಿ ಬ್ರಿಟೀಷರೊಂದಿಗೆ ಹೋರಾಡಿ ತನ್ನ ಒಡನಾಡಿಗಳ ಕುಹಕ ತಂತ್ರದಿಂದ ಮರಣವನ್ನಪ್ಪಿದ ಸಂಗೊಳ್ಳಿ ರಾಯಣ್ಣ ಸತ್ತ ಕೆಲವೇ ದಿನಗಳಲ್ಲಿ ಮಕ್ಕಳಿಲ್ಲದವರಿಗೆ ಮಕ್ಕಳನ್ನು ದಯಪಾಲಿಸುವ ಸಂತಾನ ದೇವರಾದ ಎಂಬ ಅಂಶವನ್ನು ಗಮನಿಸಿದಾಗ ಈ ರೀತಿಯ ಆರಾಧನೆಯ ಗಾಢ ಪ್ರಭಾವದ ಅರಿವಾಗುತ್ತದೆ.[೧೦]

ಇದೇ ರೀತಿ ಸಿರಾ ತಾಲ್ಲೂಕಿನ ಬರಗೂರು ವೀರಮ್ಮ ತನ್ನ ಗಂಡನೊಂದಿಗೆ ಚಿತೆಯೇರಿ ಆತ್ಮಾರ್ಪಣೆ ಮಾಡಿಕೊಂಡದ್ದು, ಗಂಡ ಸತ್ತನಂತರ ಆ ಹೆಣ್ಣುಗಳ ನೋವು, ಸಂಕಟ, ಬಂಧು ಬಾಂಧವರಿಂದ, ಸಮಾಜದಿಂದ ಎದುರಿಸಿದ ಸಮಸ್ಯೆಗಳು, ಕೊನೆಗೆ ಅಸಹಾಯಕಳಾಗಿ ಸತಿ ಹೋದದ್ದು ಜನಪದರ ಮನವನ್ನು ಗೆದ್ದಿತು. ಅವಳ ಸಹಗಮನದ ಧೈರ್ಯ, ಅವಳ ಬದುಕು ಆದರ್ಶವಾಯಿತು. ಅವಳ ವಂಶಜರಿಗೆ ವೀರಮ್ಮ ಕುಲದೇವತೆಯಾದಳು. ಕ್ರಮೇಣ ಜಾತಿ

ಬೇಧವನ್ನು ಮೀರಿ ದೈವತ್ವಕ್ಕೇರಿದಳು. ಇಂದಿಗೂ ಹೆಣ್ಣುಮಕ್ಕಳು ತಮ್ಮ ಕಷ್ಟಗಳನ್ನು ವೀರಮ್ಮಳ ಬದುಕಿನೊಂದಿಗೆ ಹೋಲಿಸಿಕೊಂಡು ಸಮಾಧಾನ ಹೊಂದಿ ಮಾನಸಿಕ ಧೈರ್ಯವನ್ನು ಕೊಡು ಎಂದು ವೀರಮ್ಮಳನ್ನು ಬೇಡಿಕೊಳ್ಳುವುದು ಕಾಣಬಹುದು. ಭಾರತದಲ್ಲಿ ಪೂಜೆಗೊಳಗಾಗುತ್ತಿರುವ ಪ್ರತಿಯೊಂದು ಕಲ್ಲೊಂದು ಇಂಥದ್ದನ್ನೇ ಪ್ರತಿನಿಧಿಸುತ್ತದೆ ಎಂದು ಹೇಳಲಾಗದಿದ್ದರೂ ಯಥಾ ಪ್ರಕಾರ ಕಲ್ಲನ್ನು ಆರಾಧಿಸುವ ಜನ ಅದಕ್ಕೆ ಯಾವ ಐತಿಹ್ಯವನ್ನು ಆರೋಪಿಸುತ್ತಾರೆಯೋ ಅದೇ ಆ ಕಲ್ಲಿನ ಐತಿಹ್ಯವಾಗಿರುತ್ತದೆ. ಆ ಐತಿಹ್ಯಕ್ಕೆ ಆ ಕಲ್ಲು ಸಂಕೇತ ಮಾತ್ರ.

ನಮ್ಮ ನಾಡಿನ ಪ್ರತಿಯೊಂದು ಗ್ರಾಮಗಳ ಬಳಿಯಲ್ಲಿಯೂ ಈ ತೆರನಾದ ಸ್ಮಾರಕ ಕಲ್ಲುಗಳು ದೊರೆಯುತ್ತವೆ. ಅವು ತಮ್ಮ ವಂಶದ ಅಥವಾ ಊರಿನ ಯಾವುದೋ ವ್ಯಕ್ತಿಯ ಗೌರವಾರ್ಥವಾಗಿ ನೆಟ್ಟ ಕಲ್ಲುಗಳಾಗಿರುತ್ತವೆ. ಈ ವ್ಯಕ್ತಿಗಳು ಊರಿನ ದನಗಳನ್ನು ರಕ್ಷಿಸಲು ಹೋಗಿ ಸತ್ತ, ಯುದ್ಧದಲ್ಲಿ ಸತ್ತ, ಆಕಸ್ಮಿಕವಾಗಿ ಸತ್ತವರ ಸ್ಮಾರಕ ಶಿಲೆಗಳಾಗಿರುತ್ತವೆ. ಆ ಕಲ್ಲಿನ ಮೇಲೆ ಸತ್ತ ವ್ಯಕ್ತಿಯ ಹೆಸರು ಮತ್ತು ಮಡಿದ ಕಾರಣಗಳನ್ನು ಬರೆಯಲಾಗಿರುತ್ತದೆ ಹಾಗೂ ಸತ್ತವರ ಚಿತ್ರಗಳನ್ನು ಬಿಡಿಸಲಾಗಿರುತ್ತದೆ.

ವೀರರ ಹೆಸರಿನಲ್ಲಿ ದೇವಾಲಯ ಸ್ಮಾರಕ ನಿರ್ಮಾಣ ಅಂದಿನ ಜನರಿಗಿದ್ದ ಮನೋಭಾವ ಎಂಥದ್ದು ಎಂಬುದು ತಿಳಿಯುತ್ತದೆ. ಈ ಮೂಲಕ ವೀರನ ಆತ್ಮಕ್ಕೊಂದು ಸ್ಥಳಾವಕಾಶ ಮಾಡಿಕೊಡುತ್ತೇವೆ. ಈ ಶಿಲೆಯಲ್ಲಿ ವೀರನ ಆತ್ಮ ನೆಲೆಸಿರುತ್ತದೆ. ಅದರಲ್ಲಿ ಪ್ರತಿಷ್ಠಾಪಿತವಾಗಿರುವ ವೀರ ತಮಗೆ ಕಷ್ಟದಲ್ಲಿ ನೆರವಾಗುತ್ತಾನೆ ಎಂಬ ಮನೋಧರ್ಮ ಅತಿ ಪ್ರಾಚೀನವಾದುದು. ವೀರನಾದವನು ಬದುಕಿದ್ದಾಗ ತನ್ನ ನೆರವನ್ನ ಕೇಳಿ ಬಂದವರಿಗೆ, ಶರಣಾಗತರಾದವರಿಗೆ ಆಶ್ರಯ, ರಕ್ಷಣೆ ನೀಡುತ್ತಿದ್ದನೋ ಅದೇ ರೀತಿಯಲ್ಲಿ ಅವನು ಸತ್ತ ಮೇಲೆಯೂ ವೀರಗಲ್ಲಿನಲ್ಲಿ ಅಥವಾ ಸ್ಮಾರಕ, ವಿಗ್ರಹಗಳಲ್ಲಿ ನೆಲೆಸಿದ್ದು ತನ್ನನ್ನು ಆಶ್ರಯಿಸಿ ಬಂದವರಿಗೆ ನೆರವನ್ನು ನೀಡುತ್ತಾನೆ ಎಂದು ಜನ ಭಾವಿಸುತ್ತಾರೆ.

ವೀರರ ಆರಾಧನಾ ಸಂಪ್ರದಾಯದ ಹಿಂದೆ ಅವನ ಆದರ್ಶಗಳನ್ನು ತಮ್ಮ ಪರಂಪರೆಯಲ್ಲಿ ಉಳಿಸಿಕೊಂಡು ಬರಬೇಕು ಎಂಬ ಒಂದು ವಿಶೇಷ ಕಾಳಜಿ ಇರಬೇಕು, ಬಹುಶ ಈ ಕಾರಣದಿಂದಲೇ ವೀರರ ಆರಾಧನೆಗೆ ಒಂದು ವಿಶೇಷ ಸ್ಥಾನ ದೊರತಿದೆ. ಆರ್.ಶೇಷಾಶಾಸ್ತ್ರಿಗಳು ಉಲ್ಲೇಖಿಸಿರುವಂತೆ "ಶವ ಸಂಸ್ಕಾರದ ಆರಂಭದ ದಿಶೆಯಲ್ಲಿ ಸತ್ತವನ ಆಯುಧಗಳನ್ನು ಅವನ ಗೌರವಾರ್ಥವಾಗಿ ಪೂಜಿಸುವುದುಂಟು ಅವನು ಬಿಟ್ಟುಹೋದ ಭರ್ಜಿಯೋ, ಕತ್ತಿಯನ್ನೋ ಅವನಿಗೆ ನೀಡುವಷ್ಟೇ ಗೌರವದಿಂದ ಪೂಜಿಸಲಾಗುವುದು. ಹಾಗೆಯೇ ತಮಿಳುನಾಡಿನ ಹಳ್ಳಿಗಳಲ್ಲಿ ಕೆಲವುಕಡೆ ಎರಡು ಮೂರು ಭರ್ಜಿಯ ಮೂಲಕ ಆರಾಧಿಸುತ್ತಾರೆ. ವೀರರ ಆಯುಧಗಳನ್ನು ಪೂಜಿಸುವ ಒಂದು

ಸಂಪ್ರದಾಯ ಸಿರಾ, ಚಿತ್ರದುರ್ಗ ಜಿಲ್ಲೆಯ ಹಲವಾರು ಕಡೆಗಳಲ್ಲಿ ಪ್ರಚಲಿತವಿದೆ. ಸಿರಾದ ದಿಬ್ಬದ ವೀರಬೊಮ್ಮನಹಳ್ಳಿ ವೀರ ಬೊಮ್ಮಣ್ಣನ ಮೆರವಣಿಗೆ ಗುಡಿಯಲ್ಲಿ ಕತ್ತಿಗಳನ್ನು ಪೂಜಿಸಲಾಗುತ್ತಿದೆ. ಚಳ್ಳಕೆರೆ ತಾಲ್ಲೂಕಿನ ಬೆಳಗೆರೆ ಗ್ರಾಮದಲ್ಲಿ ವೀರಚಿಕ್ಕಣ್ಣನ ಅಲಗನ್ನು ಅವನ ಕುದುರೆಯನ್ನು ಪೂಜಿಸುತ್ತಾರೆ. ಈ ಪೂಜೆಯ ಪ್ರಸ್ತಾಪ ಇದೇ ವೀರನ ಬಗ್ಗೆ ಇರುವ ಜಾನಪದ ವೀರಗೀತೆಯಲ್ಲಿಯೂ ಸಹ ಬರುತ್ತದೆ. ಹಾಗೂ ಇದರ ಸುತ್ತಮುತ್ತ ವೀರ ಸಿರಿಯಣ್ಣ, ಬಂಜಗೆರೆ ವೀರಣ್ಣ ಎಂಬುವವರ ಆಯುಧಗಳನ್ನು ಜನ ಇಂದಿಗೂ ಪೂಜಿಸುತ್ತಾರೆ.”[೧೦೦]

ವಿವಿಧ ದೇಶಗಳಲ್ಲಿ ಪ್ರಚಲಿತವಿರುವ ವೀರರ ಆರಾಧನೆಯನ್ನು ಗಮನಿಸಿದಾಗ ಅಲ್ಲಿನ ಜನ ಯಾವ ಆದರ್ಶ ಮೌಲ್ಯಗಳನ್ನು ವೀರ ಎಂಬುವವನಿಗೆ ಆರೋಪಿಸುತ್ತಾರೆಯೋ ಅಂತಹ ಮೌಲ್ಯಗಳನ್ನು ತನ್ನ ಜೀವನದಲ್ಲಿ ಅನುಸರಿಸಿದ ವ್ಯಕ್ತಿಯನ್ನು ಮಾತ್ರ ಅವರು ಆರಾಧಿಸುತ್ತಾರೆ. ಇಂತಹ ವೀರರೂ ಅರಸರಾಗಿರಬಹುದು. ಸಾಮಾನ್ಯವರ್ಗದ ಜನರಾಗಿರಬಹುದು, ಕೆಲವೊಮ್ಮೆ ಕಾಲ್ಪನಿಕ ವೀರರೂ ಆಗಿರಬಹುದು. ಚಾರಿತ್ರಿಕ ವ್ಯಕ್ತಿಗಳೂ ಆಗಿರಬಹುದು. ವೀರರನ್ನು ಆರಾಧಿಸುವ ಮತ್ತೊಂದು ಜನಾಂಗವೆಂದರೆ ಬೇಡರು ಇವರನ್ನು ನಾಯಕರೆಂದು ಕರೆಯುತ್ತಾರೆ. ಇವರು ಮೊದಲಿನಿಂದಲೂ ದಂಡಿನ ಊಳಿಗಕ್ಕಾಗಿ ಮೀಸಲಾಗಿದ್ದ ಕ್ಷಾತ್ರವೃತ್ತಿಯ ವೀರಜನಾಂಗ.

ವೀರರನ್ನು ಆರಾಧಿಸುವ ಇನ್ನೊಂದು ಜನಾಂಗವೆಂದರೆ ಗೊಲ್ಲರು. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಹಲವಾರು ಗ್ರಾಮಗಳಲ್ಲಿ ತುರುಗಳನ್ನು ರಕ್ಷಿಸಲು ಹೋಗಿ ಮಡಿದ ವೀರರ ಗುಡಿಗಳಿವೆ. ಈ ವೀರರ ಬಗ್ಗೆ ಹಾಡುಗಳು ಉಂಟು. ಈ ವೀರರ ಗುಡಿಗಳಲ್ಲಿ ಜಾತ್ರೆ ಪೂಜೆ ಮುಂತಾದ ಆರಾಧನಾ ಸಂಪ್ರದಾಯಗಳು ನಡೆಯುವುದುಂಟು.” ಇದೇ ರೀತಿ ವೀರರನ್ನು ಆರಾಧಿಸುವ ಗೊಲ್ಲರು, ಬೇಡರು, ಕುಂಚಿಟಿಗರು ಸಿರಾ ಸೀಮೆಯಲ್ಲೂ ಕಂಡುಬರುತ್ತಾರೆ. ಬೊಪ್ಪರಾಯ, ರಂಗಪ್ಪನಾಯಕ, ವೀರಮ್ಮ, ವೀರಬಡಣ್ಣ, ವೀರ ಬೊಮ್ಮಣ್ಣ ಮೊದಲಾದ ವೀರರು ಆರಾಧಿಸಲ್ಪಡುತ್ತಾರೆ.

ಹೀಗೆ ಪುರಾತನ ಕಾಲದಿಂದಲೂ ವೀರತ್ವದ ಕಲ್ಪನೆ ಸಮಾಜದಲ್ಲಿದ್ದು ಇದು ವ್ಯಕ್ತಿ ಪೂಜೆಗೆ ಎಡೆಮಾಡಿತು. ಉದಾಹರಣೆ ರಾಮ, ಕೃಷ್ಣ, ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್, ಏಸುಕ್ರಿಸ್ತ, ಮಹಮದ್ ಪೈಗಂಬರ ಇವರೆಲ್ಲ ಮನುಷ್ಯರಾಗಿದ್ದವರೇ ಆದರೆ ಜನಸಾಮಾನ್ಯರಿಗಿಂತಲೂ ಭಿನ್ನವಾದ ಗುಣಗಳಿಂದ, ಸಾಹಸಿ ಪ್ರವೃತ್ತಿಗಳಿಂದಾಗಿ ದೈವತ್ವಕ್ಕೇರಿದವರು. ಜನಸಾಮಾನ್ಯರ ಆಸೆ ಆಕಾಂಕ್ಷೆಗಳಿಗಿಂತ ಭಿನ್ನವಾದವುಗಳು ಈ ವೀರರ ಆಸೆ ಆಕಾಂಕ್ಷೆಗಳು.

ಈ ವೀರರ ಜನಪ್ರಿಯತೆಯಲ್ಲಿಯೂ ವ್ಯತ್ಯಾಸವಿದೆ. ಪ್ರಬಲ ಧರ್ಮ, ಜಾತಿ, ಮೇಲ್ವರ್ಗ, ಆರ್ಥಿಕವಾಗಿ ಸುಸ್ಥಿತಿಯಲ್ಲಿ ಇರುವ ಜನಾಂಗದಲ್ಲಿ ಕಂಡುಬರುವ ವೀರರು ಹೆಚ್ಚು ಮೆರುಗನ್ನು

ಪಡೆಯುತ್ತಾರೆ. ಯಾವುದೋ ಒಂದು ಬುಡಕಟ್ಟು ಸಮುದಾಯ, ಆರ್ಥಿಕವಾಗಿ ಹಿಂದುಳಿದ ಜನಾಂಗಕ್ಕೆ ಸೇರಿದವರಾದರೆ ಅವರು ಆಯಾ ಸಮುದಾಯ, ಬಡಕಟ್ಟುಗಳಿಗೆ ಮಾತ್ರ ಸೀಮಿತವಾಗುವ ಸಂಭವವೇ ಹೆಚ್ಚು. ಉದಾಹರಣೆಗೆ ಶ್ರೀರಾಮ, ನಳದಮಯಂತಿ, ಹರಿಶ್ಚಂದ್ರ, ಧರ್ಮರಾಯ, ಮೊದಲಾದವರು ಪಟ್ಟ ಪಾಡನ್ನು ಗುರ್ತಿಸುವ ಸಮಾಜ ಒಂದು ಸಾಮಾನ್ಯ ಜಾತಿ, ಪಂಗಡ, ಗುಂಪು, ಜನಾಂಗದವರ ಬವಣೆಯನ್ನು ಗುರುತಿಸಲಾರದು. ಪ್ರಬಲ ವರ್ಗಕ್ಕೆ ಸೇರಿದ, ಜನ ಸಾಮಾನ್ಯರಿಗಿಂತಲೂ ಬೇರಾದ ವ್ಯಕ್ತಿಗಳ ಕಥೆ, ಪ್ರಬಲ ವರ್ಗದ, ಆರ್ಥಿಕ ಶಕ್ತಿ ಪಡೆದವರ ಕಥೆಯಾದ್ದರಿಂದ ಮೆರುಗು ಪಡೆದರು. ಇವರ ಕಡು ಕಷ್ಟಗಳನ್ನು ಮೀರಿಸುವಷ್ಟು ದಯನೀಯ ಬದುಕನ್ನು ಸಾಗಿಸಿದ, ಸಾಗಿಸುತ್ತಿರುವ ವ್ಯಕ್ತಿಗಳು ಅದೆಷ್ಟು ಜನವಿಲ್ಲ? ಆದರೆ ಇವರೆಲ್ಲರೂ ತೆರೆಯ ಮರೆಗೆ ಸರಿಯುತ್ತಾರೆ. ಇದು ಸಮಾಜ ಶ್ರೇಷ್ಠತೆಗೆ ಕೊಡುವ ಒಂದು ತಾರತಮ್ಯವೆನ್ನಬೇಕಾಗಿದೆ.

"ಕುರುಬರು ಮತ್ತು ಬೇಡ ಜನಾಂಗದವರು ತಮ್ಮ ವಂಶದ ಪೂರ್ವಜರನ್ನು ಆರಾಧಿಸುವ ಸಂಪ್ರದಾಯವನ್ನು ಇಂದಿಗೂ ಉಳಿಸಿಕೊಂಡಿದ್ದಾರೆ. ತಮ್ಮ ಹಿರಿಯರ ಆತ್ಮಗಳ ವಾಸಸ್ಥಾನಕ್ಕಾಗಿ ಇವರುಗಳು ಕಲ್ಲು ಚಪ್ಪಡಿಗಳಿಂದ ಗುಡಿಗಳನ್ನು ನಿರ್ಮಿಸಿ ಈ ಗುಡಿಯ ಒಳಗಿನ ಕಲ್ಲೊಂದರಲ್ಲಿ ಸತ್ತ ವ್ಯಕ್ತಿಗಳನ್ನು ಸಂಕೇತಿಸಲು ಕೆಲವೊಮ್ಮೆ ಕೆಲವಾರು ಕಲ್ಲುಗಳನ್ನಿಟ್ಟು ಅವುಗಳಿಗೆ ಎಣ್ಣೆಯನ್ನು ಬಳಿದು ಆರಾಧಿಸುತ್ತಾರೆ. ಇಂತಹ ಗುಡಿಗಳನ್ನು ಸಾಮಾನ್ಯವಾಗಿ ಪಾಂಡವರ(ಗುಡಿ) ಮನೆಗಳೆಂದು ಕರೆಯುವರು. ಇಂತಹ ಗುಡಿಗಳು ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಇಂತಹ ಗುಡಿಗಳನ್ನು ಬಡಿಗರು ನಿರ್ಮಿಸುತ್ತಾರೆ. ಎಂದು ಎಡ್ವರ್ಡ ಥರ್ಸ್ಟನ್ ತಿಳಿಸುತ್ತಾರೆ. ಗ್ರಾಮದ ಪಕ್ಕದಲ್ಲಿ ಸಾಲು ಸಾಲಾಗಿ ಪ್ರಾಗೈತಿಹಾಸಿಕ ಗುಡಿಗಳನ್ನು ನಿರ್ಮಿಸುತ್ತಾರೆ. ಇವುಗಳಲ್ಲಿನ ಒಂದು ಕಲ್ಲಿನ ಮೇಲೆ ಸೂರ್ಯ, ಚಂದ್ರ, ಮನುಷ್ಯರ ಮತ್ತು ಪ್ರಾಣಿಗಳ ಚಿತ್ರ ಬರೆದು ಕೆಲವೊಮ್ಮೆ ಗೊಂಬೆಗಳನ್ನು ಇಟ್ಟಿರುತ್ತಾರೆ. ಈ ಗುಡಿಗಳೊಳಗೆ ಶಂಖ, ಗಂಟೆ, ಲಿಂಗ, ಹೂವುಗಳಿರುತ್ತವೆ. ಅದೇ ರೀತಿ ವೇಲೂರು, ಶೋಲೂರು, ನೀಲಗಿರಿಯಲ್ಲಿಯೂ ಕಾಣಬಹುದಾಗಿದೆ."[೧೨]

ಕುಂಚಿಟಿಗ ಹಾಗೂ ಕಾಡುಗೊಲ್ಲ ಜನಾಂಗದಲ್ಲಿಯೂ ವೀರರನ್ನು ಆರಾಧಿಸುವ ಪದ್ಧತಿ ಇದೆ. ಈ ವೀರರ ಗುಡಿಗಳನ್ನು 'ಈರಗಾರರ ಗುಡಿ' ಎಂದು ಕರೆಯುತ್ತಾರೆ. ಹುಲ್ಲು ನೀರಿಗಾಗಿ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋದಾಗ ಯಾವುದಾದರೂ ಕಾಡು ಪ್ರಾಣಿಯ ವಿರುದ್ಧವೂ, ಅಥವಾ ತಮ್ಮ ಗೋವು, ಕುರಿ, ಮೇಕೆಗಳ ರಕ್ಷಣೆಗಾಗಿಯೋ ಹೋರಾಡಿ ಅಕಾಲ ಮರಣ ಹೊಂದಿದವರನ್ನು ಈ ಜನಾಂಗದವರು ದೈವತ್ವಕ್ಕೇರಿಸಿ ಈರಗಾರರೆಂದು ಕರೆದು ಪೂಜಿಸುವುದುಂಟು. ಉದಾಹರಣೆಗೆ ಸಿರಾ ತಾಲ್ಲೂಕಿನ ಗುಮ್ಮನಹಳ್ಳಿ ಗೊಲ್ಲರಹಟ್ಟಿಯಲ್ಲಿ ಈರಮರಿಯಣ್ಣ ಎಂಬ 'ಈರಗಾರನ' ಬಗ್ಗೆ ಈ ರೀತಿಯ ಕಥೆಯಿದೆ. ಈರಣ್ಣ ಏಳು ವರ್ಷದ ಹುಡುಗ ಅವನು ಕುರಿ ಮೇಯಿಸಲು

ಎಮ್ಮೇರಹಳ್ಳಿ ಹತ್ತಿರದ ಗಾರಿದೂಳಿ ಹಟ್ಟಿಯಿಂದ ಬೋರಸಂದ್ರದವರೆಗೆ ಹೋಗುತ್ತಿದ್ದ. ಒಮ್ಮೆ ಬೋರಸಂದ್ರದ ಬಳಿ ಹಳ್ಳದಲ್ಲಿ ಚಿಲುಮೆ ತೋಡಿ ನೀರು ಕುಡಿಯಲು ಹೋದಾಗ ಜರಿಕಚ್ಚಿ ಸತ್ತನು. ಅವನನ್ನು ಕಲ್ಲುಗಳಿಂದ ಮುಚ್ಚಿ ಅಲ್ಲಿಯೇ ಸಮಾದಿ ಮಾಡಿದರು ಕಾಲಕ್ರಮೇಣ ಅವನೇ ಈರಮರಿಯಣ್ಣನೆಂಬ ದೈವವಾದ.

ವರ್ಷಕ್ಕೊಮ್ಮೆ ಆ ಸಮಾದಿಯ ಹತ್ತಿರ ಹಾಲು ಮೀಸಲು ತೆಗೆದುಕೊಂಡು ಹೋಗುತ್ತಾರೆ. ಚಿಕ್ಕ ವಯಸ್ಸಿನಲ್ಲಿ ಕುರಿ ಕಾಯಲು ಹೋಗಿ ಅಕಾಲ ಮರಣ ಹೊಂದಿ ಈರಗಾರನೆನಿಸಿದ.

ಸಿರಾ ತಾಲ್ಲೂಕಿನ ಬಂಗಾರಿಹಟ್ಟಿಯಲ್ಲಿ 'ಈರದೊಡ್ಡಣ್ಣ' ಎಂಬ ಈರಗಾರನ ಬಗ್ಗೆ ಹೇಳುವ ಕಥೆ ಈ ರೀತಿ ಇದೆ.

ಈರಗಾರ ದೊಡ್ಡಣ್ಣ ಮೂಲತಃ ಕುಂಟ ಮಾದೇನಹಳ್ಳಿ ಊರಿನವನು. ಅವನು ಬಂಗಾರಿ ಗೌಡನ ಕಾಲದಲ್ಲಿ ಈ ಬಂಗಾರಿಹಟ್ಟಿಗೆ ಬಂದು ಸೇರಿದ್ದ. ಅಜ್ಜೀರ ಗೊಲ್ಲರ ಈ ಈರದೊಡ್ಡಣ್ಣ ಒಮ್ಮೆ ಕುರಿ ಮೇಯಿಸಲು ಹಿರಿಯೂರು ತಾಲ್ಲೂಕಿನ ಪಿಲಾಲಿ ಗ್ರಾಮದ ಹತ್ತಿರ ಹೋಗಿದ್ದಾಗ ಅಲ್ಲಿ ಮಾಸ್ತಮ್ಮ ಎಂಬುವವಳು ಕುರಿನೋರ ಗೊಲ್ಲರ ಹೆಣ್ಣುಮಗಳು ಈರದೊಡ್ಡಣ್ಣ ಕಿಬ್ಬಾಲದ ಕೆರೆಯ ಹತ್ತಿರ ಕುರಿ ಹೊಡೆದುಕೊಂಡು ಬಂದಾಗಲೆಲ್ಲ

'ಅತ್ತೆ ಮಗಳು ಕೆರೆಯಾಗಿದ್ದೀನಿ
ಅತ್ತಾಸಿ ಹೊಡೆಯೋ ಕುರಿಗಳ' ಎನ್ನುತ್ತಿದ್ದಳು.
ಮತ್ತೊಂದು ದಿನ
ಮಾವನ ಮಗಳು ಕೆರೆಯ್ಯಾಗಿದ್ದೀನಿ
ಅತ್ತಾಸಿ ಹೊಡೆಯೋ ಕುರಿಗಳ' ಎನ್ನುತ್ತಿದ್ದಳು.

ಒಂದು ದಿನ ಮಾಸ್ತಮ್ಮನಿಗೂ ಈರದೊಡ್ಡಣ್ಣನಿಗೂ ಪಂದ್ಯ ಬಿದ್ದು ಮಾಸ್ತಮ್ಮ ಒಂದು ಬಾಳೆಹಣ್ಣಿನ ಸಿಪ್ಪೆ ತೆಗೆದಕೊಂಡು ಕಿಬ್ಬಾಲದ ಕೆರೆಗೆ ಎಸೆದು ಅದನ್ನು ತರಲು ಹೇಳಿದಳು. ಈರದೊಡ್ಡಣ್ಣ ಈಜಿಕೊಂಡು ಹೋಗಿ ತಂದ.

ಮತ್ತೊಮ್ಮೆ ಮಾಸ್ತಮ್ಮ ಈ ಬಾರಿ ಪಂದ್ಯ ಕಟ್ಟಿ ಪಂದ್ಯದಲ್ಲಿ ಗೆದ್ದರೆ ಈರದೊಡ್ಡಣ್ಣನನ್ನು ಮದುವೆಯಾಗುವುದಾಗಿ, ಪಂದ್ಯದಲ್ಲಿ ಸೋತರೆ

ಹಿಂದಲ ಕೋಡಿಯಲ್ಲಿ ನೀನು
ಮುಂದಲ ಕೋಡಿಯಲ್ಲಿ ನಾನು

ಸಮಾಧಿಯಾಗೋಣ ಎಂದು ಪಂದ್ಯ ಕಟ್ಟಿದರು. ಒಂದು ನಿಂಬೆಹಣ್ಣನ್ನು ಎಂಬತ್ತು ಕುಣಿಕೆ ಹಾಕಿ ಕಿಚ್ಚಾಲದ ಕೆರೆಗೆ ಎಸೆದು ಅದನ್ನು ತರಲು ಹೇಳಿದಳು. ಈರದೊಡ್ಡಣ್ಣ ಕೆರೆಯಲ್ಲಿ ಈಜಿಕೊಂಡು ತರಲು ಹೋದ. ಅವನ ತಲೆಗೂದಲು ಏಳುಮಾರುದ್ದ ಇದ್ದವು. ಆ ಕೂದಲಿಗೆ ಒಂದು ಗಿಡದ ಮೋಟು ತೊಡರಿಕೊಂಡು ಬಿಡಿಸಿಕೊಳ್ಳಲಾರದೆ ಅಲ್ಲಿಯೇ ಸಾವನ್ನಪ್ಪಿದ. ಆಗ ಮಾಸ್ತಮ್ಮ ಅವನಿಗೆ ಮಾತು ಕೊಟ್ಟಂತೆ ಪಿಲಾಲಿ ಹತ್ತಿರದ ಕಿಚ್ಚಾಲದ ಕೆರೆಯ ಮುಂದಲ ಕೋಡಿಯಲ್ಲಿ ಸತಿಯಾದಳು. ಹಿಂದಲ ಕೋಡಿಬಳಿ ಈರದೊಡ್ಡಣ್ಣ ಸಾವನ್ನಪ್ಪಿದ. ಈ ರೀತಿ ವೀರ ಮರಣವನ್ನಪ್ಪಿದ ಈರದೊಡ್ಡಣ್ಣ ಮುಂದೆ ಅಜ್ಜೇರ ಗೊಲ್ಲರಿಗೆ ಈರಗಾರ ದೈವನೆನಿಸಿ ಮನೆದೇವರಾದ.

ಸಿರಾ ತಾಲ್ಲೂಕಿನ ಹುಯಿಲ್‌ದೊರೆ ಗ್ರಾಮದ 'ಈರಕೆಂಚಮ್ಮ' ನ ಕಥೆಯೂ ಇದೆ ರೀತಿ ಬರುತ್ತದೆ. ಒಮ್ಮೆ ಗಂಡ ದಂಡಿಗೆ ಹೋಗಿ ಮಡಿದಾಗ ಕೆಂಚಮ್ಮ ಸತಿಯಾಗುತ್ತಾಳೆ. ನಂತರ ಈರ ಕೆಂಚಮ್ಮ ಎಂಬ ದೇವತೆಯಾಗಿ, ಹೊಯಿಲ್‌ದೊರೆ ಗ್ರಾಮದ 'ಕಟಾರ ಹಾಗೂ ಕಾವಲು' ವಂಶಸ್ತರಿಗೆ ಮನೆದೇವತೆಯಾದಳು. ಗ್ರಾಮದಲ್ಲಿ ಇಂದಿಗೂ ಈರ ಕೆಂಚಮ್ಮಳ ಮಾಸ್ತಿಗಲ್ಲನ್ನು ಪೂಜಿಸುತ್ತಿರುವುದನ್ನು ಕಾಣಬಹುದು.

ವೀರರ ಪರಾಕ್ರಮ, ಸತ್ ಚಾರಿತ್ರ್ಯ, ಸಮ್ಯಶೀಲತೆ, ಅವರಿಗೆ ಒದಗಿದ ಕಷ್ಟಗಳ ಪರಂಪರೆ, ಅವರ ಜೀವನ ದುರಂತ, ಇವುಗಳಿಂದ ಆಕರ್ಷಿತರಾದ ಜನ, ಸಮಾಜ ಅವರನ್ನು ಆರಾಧಿಸಲು ಮೊದಲಾಗುತ್ತದೆ. ಮೇಲೆ ಹೇಳಿದ ಅಂಶಗಳೇ ಪ್ರಮುಖವಾಗಿ ಕೆಲವಾರು ದೌರ್ಬಲ್ಯಗಳನ್ನು ಮರೆತು ಅವನನ್ನು ತಮ್ಮ ನಾಯಕನನ್ನಾಗಿಯೋ, ಕುಲ ದೇವತೆಯನ್ನಾಗಿಯೋ ಪರಿಗಣಿಸುತ್ತಾರೆ. ಒಬ್ಬ ವ್ಯಕ್ತಿ ತನ್ನ ಹೋರಾಟದಲ್ಲಿ ಸೋತು ಸತ್ತ ಎಂಬ ಕಾರಣಕ್ಕಾಗಲಿ, ಅವನು ಹೇಗೋ ಗೆದ್ದು ಮಡಿದ ಎಂಬ ಕಾರಣಕ್ಕಾಗಿಲೀ ಅವನಿಗೆ ಆರಾಧನೆಯ ಗೌರವ ದೊರೆಯುವುದಿಲ್ಲ. ಅವನ ವೈಯಕ್ತಿಕ ಜೀವನದಲ್ಲಿ ಸಾಮಾನ್ಯವಾಗಿ ಜನ ಅಪೇಕ್ಷೆ ಪಡುವ ಕೆಲವಾರು ನಡವಳಿಕೆಗಳು ವೀರನಾದವನು ತೋರುವ ಆದರ್ಶ ಗುಣಗಳು ಇರುತ್ತವೆ. ಮತ್ತು ಅವನಿಗೊದಗಿದ ದುರಂತದ ಬಗ್ಗೆ ಜನರಿಗಿರುವ ಅನುಕಂಪ ಇವುಗಳು ವೀರನ ಆರಾಧನೆಗೆ ಮೂಲ ಪ್ರೇರಣೆಯಾದವು. ಈ ಒಂದು ಹಿನ್ನೆಲೆಯಲ್ಲಿ ಜನ ಅವನಿಗೆ ವೀರ ಸ್ವರ್ಗವನ್ನು ಕೊಟ್ಟು ಅವನನ್ನು ತಮ್ಮ ಆದರ್ಶ ಪುರುಷನನ್ನಾಗಿ ಮಾಡಿಕೊಂಡು ಕುಲದೇವತೆಯನ್ನಾಗಿ ಮಾಡಿಕೊಳ್ಳುವುದು.[೧೫]

ಹೀಗೆ ಒಂದು ಜನ ಸಮುದಾಯದೊಡನೆ ಏಕಸರವಾಗಿ ಬಾಳುತ್ತಿದ್ದ ಕೆಲವು ಉದಾತ್ತ ಮೌಲ್ಯಗಳನ್ನು ನಂಬಿ ಅಳವಡಿಸಿಕೊಂಡು ಅವನ್ನು ಪಾಲಿಸುವ ಪಥದಲ್ಲಿ ಜೀವನಷ್ಟವೂ ಸೇರಿದಂತೆ ಹಲವು ಬಗೆಯ ತ್ಯಾಗವನ್ನು ಮಾಡಿದ ವ್ಯಕ್ತಿಗಳು ಅನಂತರದಲ್ಲಿ ಜನಪದರಿಂದ

ವೀರರೆಂದು, ವೀರಸ್ವರ್ಗ ಪಡೆದವರೆಂದು ಮಾನ್ಯರಾಗಿ ಆದರ್ಶ ನಾಯಕರೆಂದು ಪರಿಗಣಿಸಲ್ಪಡುತ್ತಾರೆ. ಇದರ ಮುಂದಿನ ಹಂತದಲ್ಲಿ ಅವರ ಆತ್ಮಗಳಿಗೆ ತಮ್ಮನ್ನು ಕಾಪಾಡುವ, ತಮ್ಮ ಕೋರಿಕೆಗಳನ್ನು ಈಡೇರಿಸುವ ಶಕ್ತಿ ಇದೆ ಎಂದು ನಂಬಲಾಗುತ್ತದೆ. ಅವರಿಗೆ ಹರಕೆ ಕಟ್ಟಿಕೊಳ್ಳಲಾಗುತ್ತದೆ. ಗುಡಿಗಳು ಏಳುತ್ತವೆ. ಜಾತ್ರೆ-ಉತ್ಸವಗಳು ಆರಂಭವಾಗುತ್ತವೆ.

ಮನುಷ್ಯನೊಬ್ಬ ದೈವತ್ವಕ್ಕೇರುವುದು ಹೀಗೆ ಇದು ಪ್ರಪಂಚದಲ್ಲೆಲ್ಲಾ ನಡೆಯುವ ಪ್ರಕ್ರಿಯೆ. ಸಿರಾ ತಾಲ್ಲೂಕಿನಲ್ಲಿಯೂ ಈ ಸಾರ್ವತ್ರಿಕ (ಪ್ರಕ್ರಿಯೆ) ಮನೋಭಾವ ನಡೆದುಕೊಂಡು ಬರುತ್ತಿದೆ.

**ಸಾಂಸ್ಕೃತಿಕ ವೀರರು :**

ಕನ್ನಡ ವಿಶ್ವವಿದ್ಯಾಲಯ ಧರ್ಮ ವಿಶ್ವಕೋಶದಲ್ಲಿ ಗುರ್ತಿಸಿರುವಂತೆ ಸಾಂಸ್ಕೃತಿಕ ನಾಯಕರು ಸಾಮಾನ್ಯವಾಗಿ ಬುಡಕಟ್ಟು ಸಮೂಹದಲ್ಲಿ ಶಿಷ್ಟ ದೇವತೆಗಳಿಗಿಂತ ಹೆಚ್ಚು ಆರಾಧನೆಗೊಳ್ಳುವವರು. ಇವರು ಜನರ ನಡುವೆ ಆಗಿಹೋದ ವೀರರುಗಳೇ. ಕರ್ನಾಟಕದಲ್ಲಿ ಕೇವಲ ೧೦೦ ವರ್ಷಗಳ ಹಿಂದೆ ಮಡಿದ ವೀರರಿಂದ ಹಿಡಿದು ೧೩ನೇ ಶತಮಾನದಲ್ಲಿ ಆಗಿಹೋದ ಕುಮಾರ ರಾಮನವರೆಗೆ ಈ ಬುಡಕಟ್ಟು ಐತಿಹಾಸಿಕ ಮತ್ತು ಸಾಂಸ್ಕೃತಿಕ ನಾಯಕರ ವಿವರಗಳನ್ನು ಗಮನಿಸಬಹುದಾಗಿದೆ. ಇದೇ ಬಗೆಯ ಸಂಗತಿಗಳು ದಕ್ಷಿಣ ಮತ್ತು ಉತ್ತರ ಭಾರತದಾದ್ಯಂತ ಪ್ರಚಲಿತದಲ್ಲಿವೆ. ಆಯಾ ಸಮೂಹದಲ್ಲಿ ಒಬ್ಬೊಬ್ಬ ವೀರ ಜನಪ್ರೀಯತೆಯನ್ನು ಗಳಿಸಿರುತ್ತಾನೆ. ಕೆಲವು ಸಾಂಸ್ಕೃತಿಕ ನಾಯಕರು ತಂತಮ್ಮ ಬುಡಕಟ್ಟು ಸಮೂಹವನ್ನು ಮೀರಿ ವಿಶಾಲ ಭಾಗದಲ್ಲೆಲ್ಲ ಆರಾಧನೆಗೆ ಒಳಗಾಗಿರುತ್ತಾರೆ.

ಕರ್ನಾಟಕದಲ್ಲಿ ತೀರಾ ಇತ್ತೀಚಿನ ಒಂದು ಉದಾಹರಣೆಯನ್ನು ಗಮನಿಸುವುದಾದರೆ ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನ ಮನುತನ ಹಟ್ಟಿಯಲ್ಲಿ ಒಂದು ಬುಡಕಟ್ಟು ಸಮೂಹ ವಾಸವಾಗಿದೆ. ಇಲ್ಲಿದ್ದ ಪೆದ್ದಯ್ಯ ನಾಯಕನೆಂಬುವನು ೧೯೦೦ರ ಸುಮಾರಿನಲ್ಲಿ ಚಿರತೆಯ ಜೊತೆ ಹೋರಾಡಿ ಮಡಿದನು. ಅವನ ಹೆಸರಿನಲ್ಲಿ ಅದೇ ಹಟ್ಟಿಯ ಉತ್ತರ ದಿಕ್ಕಿಗೆ ಒಂದು ವೀರಗಲ್ಲನ್ನು ಇರಿಸಲಾಗಿದೆ. ಪ್ರತಿವರ್ಷವೂ ಮಾರ್ಚ್ ತಿಂಗಳ ಹುಣ್ಣಿಮೆಯಲ್ಲಿ ಪೆದ್ದಯ್ಯ ನಾಯಕ ಎಂಬ ಹೆಸರಿನಲ್ಲಿ 'ಪರ' ನಡೆಯುವುದಿದೆ. ಆದರೆ ಈತ ಆ ಸುತ್ತಿನಲ್ಲೆಲ್ಲ ಪ್ರಸಿದ್ಧವಿರುವ ವೀರನೇನಲ್ಲ. ಹೀಗೆಯೇ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಬೆಳಗೆರೆ ಗ್ರಾಮದ ಬಳಿ ಒಂದು ಕಾಡುಗೊಲ್ಲರ ಬುಡಕಟ್ಟು ಸಮೂಹವೆಲ್ಲ ಸಿರಿಯಣ್ಣ, ಸಿರಿಯಪ್ಪ, ಸಿರಿಯಮ್ಮ, ಸಿರಿಯಜ್ಜಿ ಎಂದು ಹೆಸರು ಕರೆದುಕೊಳ್ಳುವುದುಂಟು. ಇದಕ್ಕೆ ಕಾರಣ ಆ ಹಟ್ಟಿಯ ಸಮೂಹದಲ್ಲಿ ಇದ್ದಿರಬಹುದಾದ ಒಬ್ಬ ವೀರ. ೩-೪ ಶತಮಾನಗಳ ಹಿಂದೆ ಹಂದಿಯೊಡನೆ ಹೋರಾಡಿ ಸತ್ತ ವಿವರವನ್ನು ಹೇಳಿ ಆತನ ಹೆಸರಿನಲ್ಲಿ ಹಟ್ಟಿ ಮದ್ಯೆ ಗುಡಿ ಇರುವುದನ್ನು ತೋರಿಸುತ್ತಾರೆ. ಈ

ಸಿರಿಯಣ್ಣ ಆ ಕಾಡುಗೊಲ್ಲರ ಹಟ್ಟಿಯಲ್ಲಿ ಮಾತ್ರ ದೇವತೆಯೆನಿಸಿದ್ದು ಆತನ ಮೇಲೆ ಒಂದು ದೀರ್ಘ ಕಥನ ಗೀತೆಯು ಸಹ ಬುಡಕಟ್ಟು ಮಹಿಳೆಯರ ಬಾಯಲ್ಲಿ ಪ್ರಚಾರದಲ್ಲಿದೆ. ಮುಂದುವರೆದು ಹೇಳುತ್ತಾ ಸಾಮಾನ್ಯವಾಗಿ ಬುಡಕಟ್ಟು ಅಥವಾ ಜಾನಪದ ಸಾಂಸ್ಕೃತಿಕ ನಾಯಕರ ಕಥನ ಕ್ರಮ ಈ ಬಗೆಯಲ್ಲಿಯೇ ಇರುತ್ತದೆ. ಜನಪದ ವೀರರು ನಾನಾ ಕಾರಣಗಳಿಗಾಗಿ ತಮ್ಮ ಸೀಮೆಯ ಅರಸನನ್ನು ವಿರೋಧಿಸುತ್ತಾರೆ. ಇದು ಜನಪದ ಕಥೆಗಳಲ್ಲಿಯೂ ಕಂಡುಬರುವ ಒಂದು ಪ್ರಮುಖ ಆಶಯವಾಗಿದೆ. ಜನಪದ ಕಥೆಗಳ ಆರಂಭದಲ್ಲಿ ರಾಜ-ರಾಣಿಯರು ಸಂತಾನ ಪ್ರಾಪ್ತಿಗಾಗಿಯೋ, ಅರಮನೆಯಲ್ಲಿ ಹುಟ್ಟಿಕೊಂಡ ಇನ್ನಿತರ ಸಮಸ್ಯೆಗಳ ಪರಿಹಾರಕ್ಕಾಗಿಯೋ ಕಾಡು ಸೇರುತ್ತಾರೆ. ಕಾಡಿನಲ್ಲಿ ರಾಜ-ರಾಣಿಯರು ತಮ್ಮೆಲ್ಲ ಅಧಿಕಾರ ಅಂತಸ್ತನ್ನು ಕಳೆದುಕೊಂಡು ದಾರಿಗೆಟ್ಟು ಅಲೆಯುವುದನ್ನು ಎಲ್ಲ ಜನಪದ ಕಥೆಗಳೂ ಹೇಳುತ್ತವೆ. ಹೀಗಾಗಿ ಜನಪದ ಅಥವಾ ಬುಡಕಟ್ಟು ಸಾಂಸ್ಕೃತಿಕ ನಾಯಕರೂ ಅಧಿಕಾರ ಶಾಹಿಯನ್ನು ವಿರೋಧಿಸುವವರೇ. ಇದಕ್ಕೆ ತುಳು ಪಾಡ್ದನದಲ್ಲಿ ಕೊಡಬಹುದಾದ ಶ್ರೇಷ್ಠ ಉದಾಹರಣೆಯೆಂದರೆ ಕೋಟೆ ಚೆನ್ನಯ್ಯರ ಕಥೆ. ಈ ಕೋಟೆ ಚನ್ನಯ್ಯರು ಸುಳ್ಯ ತಾಲ್ಲೂಕಿನ ಪೆರ್ಮತಿ ಪಂಜ ಪ್ರದೇಶದ ಬಿಲ್ಲವ ಜನಾಂಗಕ್ಕೆ ಸೇರಿದವರು. ತಮಗೆ ಆದ ಅನ್ಯಾಯವನ್ನು ಪ್ರತಿಭಟಿಸಿ ಸ್ಥಳೀಯ ಅರಸನ ವಿರುದ್ಧ ಸಿಡಿದೆದ್ದು ಬಲಿಯಾದವರು. ಹೀಗೆ ದುರಂತ ಮರಣಕ್ಕೆ ಒಳಗಾದ ಕೋಟೆ ಚನ್ನಯ್ಯರಿಗೆ ತುಳು ನಾಡಿನಾದ್ಯಂತ ೯೪ ಗುಡಿಗಳಿವೆ. ಇವರನ್ನು ಕುರಿತ ಅತ್ಯಂತ ದೀರ್ಘ ಕಥಾಕವನ ತುಳು ನಾಡಿನಲ್ಲಿ ಪ್ರಚಾರದಲ್ಲಿದೆ."

ಹಿಂದೆ ಸಾಂಸ್ಕೃತಿಕ ವೀರ ಎಂದು ಕರೆಯುವ ಪದ್ಧತಿ ಇರಲಿಲ್ಲ. ಆಧುನಿಕ ಪರಿಕಲ್ಪನೆಗಳು ಬಂದಾಗ ವಿದ್ವಾಂಸರು ಇಂಥಾ ಚೌಕಟ್ಟನ್ನು ರೂಪಿಸಿದರು. ವೀರ ಎಂದರೇನು ಎಂಬುದನ್ನು ತಿಳಿದುಕೊಂಡು ಸಾಂಸ್ಕೃತಿಕತೆಯನ್ನು ಅವಲೋಕಿಸುವುದು ಅಗತ್ಯವಾಗಿದೆ. ಜನರ ಜೀವನ ಮೌಲ್ಯಗಳಿಗೆ ಮಹತ್ತರವಾದ ಪರಿವರ್ತನೆಯನ್ನು ತಂದುಕೊಟ್ಟ ಹರಿಕಾರ ವೀರನಾಗಿರಬಹುದಾಗಿದೆ. ಒಂದು ಸಮುದಾಯದ ಪುರಾಣ ಜಾನಪದ, ಐತಿಹ್ಯ ಪ್ರತೀತಿಗಳಲ್ಲಿ ತನ್ನ ಜನರಿಗೆ ಸಂಸ್ಕೃತಿಯನ್ನು ರೂಪಿಸಿದ ಅಥವಾ ತಂದುಕೊಟ್ಟ ವ್ಯಕ್ತಿಗೆ ಸಾಂಸ್ಕೃತಿಕ ವೀರ ಎನ್ನಲಾಗುತ್ತದೆ. ಮನುಷ್ಯನ ಪಾತ್ರವಲ್ಲದೆ ಪ್ರಾಣಿ ಸ್ವರೂಪದ ಚರಿತ್ರೆ ಸುತ್ತ ಮುತ್ತಲಿನ ವ್ಯಕ್ತಿಯನ್ನು ಮೇಲಿನಂತೆ ಸಂಕೇತಿಸಲಾಗುವುದು. ವೀರನು ಉತ್ತಮವಾದ ವಸ್ತುಗಳನ್ನು ಕೊಟ್ಟರೆ, ಉತ್ಪಾದಿಸಿದರೆ, ಆತನೇ ಸೃಷ್ಟಿಸಿದರೆ ಅಂತಹವುಗಳು ಸಂಸ್ಕೃತಿ ನಿರ್ಮಾಣದ ಲಕ್ಷಣಗಳು. ಆಹಾರ, ಕಲೆ, ಸಾಧನ ಮತ್ತು ಜನರ ನಡಾವಳಿಗಳು ಆ ವೀರನಿಂದ ಬಳುವಳಿಯಾಗಿ ಬಂದಿರುತ್ತವೆ ಎಂದು ಹೇಳುತ್ತಾ ಸಾಂಸ್ಕೃತಿಕ ವೀರನ ಸಾಧನೆಗಳು ವರ್ತಮಾನದ ಘಟನೆಗಳಿಗೆ ಕಾರ್ಯಕಾರಣ ಸಂಬಂಧವನ್ನು ಸೂಚಿಸುತ್ತವೆ. ಪುರಾಣ ಪುರುಷರಂತೆ ಸಾಂಸ್ಕೃತಿಕ ವೀರರು ಆರಂಭದಲ್ಲಿ ಸಾಧನೆ ತೋರಿ ಮರೆಯಾದ ನಂತರ

ಅವರನ್ನು ದೇವರಾಗಿ ಮಾಡಿಕೊಂಡಿರುತ್ತಾರೆ. ಮೊದಲಿದ್ದ ಸಾಂಸ್ಕೃತಿಕ ವೀರ ಎಂಬುದು ಕಳಚಿಕೊಂಡು ಆ ವ್ಯಕ್ತಿಗೆ ದೇವರ ರೂಪ ಸಿಗುತ್ತದೆ.

ವೇದಗಳ ಕಾಲಕ್ಕೆ ಇಲ್ಲದ ದೈವತ್ವದ ಕಲ್ಪನೆ, ಧಾರ್ಮಿಕ ಸಾಂಸ್ಕೃತಿಕ ನಾಯಕರ ಅಸ್ತಿತ್ವ ಕ್ರಿ.ಶ.೧ಸೇ ಶತಮಾನದ ನಂತರ ಭಾರತದಲ್ಲಿ ಪ್ರಚಲಿತಕ್ಕೆ ಬಂತೆಂದು ಡಾ.ಕೃಷ್ಣಮೂರ್ತಿ ಹನೂರರು ಹೇಳುತ್ತಾರೆ. ಅವರು ಹೇಳುವಂತೆ "ಬದುಕಿನ ಧರ್ಮವನ್ನೇ ಹೇಳುವ ತತ್ವಗಳು ಯಾವಾಗ ಹಿಂದೆ ಸರಿದವೋ, ಯಾವಾಗ ಅನ್ಯಧರ್ಮಗಳ ಆಗಮನವಾಯಿತೊ. ಅಲ್ಲಿಂದೀಚೆಗೆ ಆಯಾ ಧರ್ಮಗಳೊಳಗೆ ಸಾಂಸ್ಕೃತಿಕ ನಾಯಕರೂ ಉದಿಸಿ ಬಂದರು ಎನ್ನಬಹುದು. ಸಾವಿನವಿಸ್ತಾರದಿಂದ ಹಿಡಿದು ಒಂದೊಂದು ಧರ್ಮವನ್ನೇ ಪ್ರತಿನಿಧಿಸುವ ಗಣ್ಯಾತಿಗಣ್ಯ ಸಾಂಸ್ಕೃತಿಕ ನಾಯಕರ ಆಗಮನ ಭಾರತದಲ್ಲಾಯಿತು. ಎಲ್ಲ ಧರ್ಮಗಳೂ ಸಾಂಸ್ಕೃತಿಕ ನಾಯಕರುಗಳ ಆದರ್ಶಗಳು ಕಾಲ ಕಾಲಕ್ಕೆ ಶಿಥಿಲಗೊಂಡು ಅದೇ ಧರ್ಮದ ಬೇರೆ ಬೇರೆ ಶಾಖೆ ಉಪ ಶಾಖೆಗಳಾಗಿ ಅವತಾರ ತಾಳಿದ್ದೇ ಭಾರತ ದೇಶದ ಧಾರ್ಮಿಕ ಚರಿತ್ರೆಯಾಗಿದೆ. ಇದರೊಂದಿಗೆ ಇಲ್ಲಿನ ರಾಜಕೀಯ ಚರಿತ್ರೆಯೂ ಸೇರಿಕೊಂಡಿದೆ. ಹಾಗೆ ನೋಡಿದರೆ ಭಾರತದಲ್ಲಿ ಧರ್ಮ ಮತ್ತು ರಾಜಕಾರಣ ಪರಸ್ಪರ ಕೈಹಿಡಿದುಕೊಂಡೇ ಬಂದಿವೆ. ಕೆಲವು ಕಾರಣಗಳಿಗಾಗಿ ರಾಜಕಾರಣವು ತಾನು ನಂಬಿದ ಧರ್ಮವನ್ನು ಬಿಟ್ಟು ಉಳಿದ ಧರ್ಮಗಳನ್ನು ಶಿಥಿಲಗೊಳಿಸುವ ಪ್ರಯತ್ನವನ್ನು ಮಾಡಿಕೊಂಡು ಬಂದಿದೆ. ಜೊತೆಗೆ ಈ ಧರ್ಮಗಳ ನಾಯಕರಲ್ಲಿ ವಾಗ್ವಾದ ಚರ್ಚೆಗಳೂ ಜರುಗಿವೆ. ಗೆದ್ದ ಧಾರ್ಮಿಕ ನಾಯಕರಲ್ಲದಿದ್ದರೂ ಆ ಧರ್ಮದ ಇನ್ನಿತರ ಅನುಯಾಯಿಗಳೂ ಅನ್ಯಧರ್ಮವನ್ನು ದುರ್ಬಲಗೊಳಿಸಿದ್ದಾರೆ. ಅಥವಾ ಈ ಧರ್ಮಾನುಯಾಯಿಗಳನ್ನು ತಮ್ಮ ಧರ್ಮಕ್ಕೆ ಸೇರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ.'"[illegible]

ಆರ್. ಶೇಷಾಶಾಸ್ತ್ರಿಯವರು ರಾಜಾಸ್ಥಾನದಲ್ಲಿ ಜಾಟ ಪಂಗಡಕ್ಕೆ ಸೇರಿದ ವೀರ 'ತೇಜಾಜಿ' ಎಂಬುವವನು ದೈವತ್ವಕ್ಕೇರಿ ಸಾಂಸ್ಕೃತಿಕ ನಾಯಕನಾಗಿ ರೂಪುಗೊಂಡ ಎಂಬ ಜನಪದ ಕಥೆಯನ್ನು ಕಟ್ಟಿಕೊಡುತ್ತಾರೆ "ವೃತ್ತಿಯಿಂದ ತೇಜಾಜಿ ದನ ಕಾಯುವವನು. ದನಗಳನ್ನು ಕಾಯುವಾಗ ಒಮ್ಮೆ ತನ್ನ ಊರಿನ ಬ್ರಾಹ್ಮಣನಿಗೆ ಸೇರಿದ ಹಸುವೊಂದು ಪ್ರತಿದಿನ ಕಾಡಿಗೆ ಹೋಗಿ ಒಂದು ಹುತ್ತದಲ್ಲಿನ ಹಾವಿಗೆ ಹಾಲುಕೊಡುತ್ತಿದ್ದುದನ್ನು ಕಂಡ ಇದರಿಂದ ಆ ಬ್ರಾಹ್ಮಣನಿಗೆ ಆಗುತ್ತಿದ್ದ ನಷ್ಟವನ್ನು ತಪ್ಪಿಸುವ ಸಲುವಾಗಿ ತೇಜಾಜಿ ಆ ಹಾವಿಗೆ ತಾನು ಪ್ರತಿದಿನ ಹಾಲನ್ನು ತಂದು ಕೊಡುವುದಾಗಿ ಪ್ರಮಾಣ ಕೊಟ್ಟು ಈ ರೀತಿ ಹಸುವಿಗೆ ತೊಂದರೆ ಕೊಡಬಾರದೆಂದು ಕೇಳಿಕೊಂಡ. ಅದಕ್ಕೆ ಆ ಹಸುವು ಸಮ್ಮತಿಸಿತು. ಅದರಂತೆಯೆ ಪ್ರತಿದಿನ ಹಾವಿಗೆ ಹಾಲನ್ನು ತಂದುಕೊಡುತ್ತಿದ್ದ. ಪ್ರತಿದಿನವೂ ಹಾಲನ್ನು ತಂದುಕೊಡುತ್ತೇನೆಂಬ ತನ್ನ ಪ್ರಮಾಣವನ್ನು ಅನಿವಾರ್ಯ ಕಾರಣದಿಂದಾಗಿ ಮುರಿಯಬೇಕಾಯಿತು. ಅವನು ಮತ್ತೆ ಹಿಂತಿರುಗಿ ಬಂದಾಗ ಆ ಹಾವು ಈ ಕಾರಣಕ್ಕಾಗಿಯೇ

ತೇಜಾಜಿಯನ್ನು ಕಡಿಯುತ್ತೇನೆಂದು ತಿಳಿಸಿತು. ತಕ್ಷಣವೇ ತನ್ನ ತಪ್ಪನ್ನು ಅರಿತ ತೇಜಾಜಿ ತನ್ನನ್ನು ಕಡಿಯಲು ಹಾವಿಗೆ ಇರುವ ಅಧಿಕಾರವನ್ನು ಒಪ್ಪಿಕೊಂಡು ಅದರಂತೆ ಆಗಲಿ ಎಂದು ಉತ್ತರಿಸಿದ. ಆದರೆ ಅದಕ್ಕೆ ಮುನ್ನ ತನ್ನದೊಂದು ಪ್ರಾರ್ಥನೆ ಇದೆಯೆಂದು ಕೇಳಿಕೊಂಡ. ತನ್ನ ಮನೆಗೆ ಹೋಗಿ ಹೆಂಡತಿಯನ್ನು ಕೊನೆಯಬಾರಿ ನೋಡಿಕೊಂಡು ಬರಬೇಕು ಎಂಬುದು ಅವನ ಅಪೇಕ್ಷೆಯಾಗಿತ್ತು. ಇದಕ್ಕೆ ಹಾವು ಅವಕಾಶವನ್ನು ನೀಡಿತು. ಅವನ ಹೆಂಡತಿಯನ್ನು ಮಾತನಾಡಿಸಿಕೊಂಡು ಹಾವಿನ ಬಳಿಗೆ ಬರುತ್ತಿರುವಾಗ ದಾರಿಯಲ್ಲಿ ಪಕ್ಕದ ಹಳ್ಳಿಯೊಂದರ ದನಗಳನ್ನು ಕಳ್ಳರು ಅಪಹರಿಸಿಕೊಂಡು ಹೋಗುತ್ತಿದ್ದುದನ್ನು ಕಂಡ. ತಕ್ಷಣವೇ ಈ ಕಳ್ಳರ ಮೇಲೆ ಬಿದ್ದು ಅವರಿಂದ ದನಗಳನ್ನು ಕಸಿದುಕೊಂಡು ಹಳ್ಳಿಗೆ ತಲುಪಿಸಿ ತನ್ನ ಅವಧಿ ಮುಗಿಯುವುದರೊಳಗೆ ಹಾವಿನ ಬಳಿಗೆ ಬಂದ. ಕಳ್ಳರೊಡನೆ ಹೊಡೆದಾಡುವಾಗ ಅವನ ಮೈಯೆಲ್ಲಾ ಗಾಯಗಳಾಗಿದ್ದವು. ಹಾವಿಗೆ ಕಡಿಯಲು ಸ್ಥಳವೇ ಇರಲಿಲ್ಲ ಆಗ ತೇಜಾಜಿ ತನ್ನ ನಾಲಿಗೆಯನ್ನು ಚಾಚಿ ಅಲ್ಲಿ ಕಡಿಯುವಂತೆ ತೋರಿಸಿದಾಗ ಹಾವು ಅವನನ್ನು ಕಚ್ಚಿತು. ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಸಾಧ್ಯವಾಗದೆ ಹೋದಾಗ ಶಿಕ್ಷೆ ಅನುಭವಿಸಲು ಹಿಂಜರಿಯದ ತೇಜಾಜಿಯ ಗುಣ ಒಂದು ವೀರ ಮೌಲ್ಯವೆನಿಸಿತು.

ಸಿರಾ ಸೀಮೆಯ ಜನಪದ ವೀರರಾದ ಜುಂಜಪ್ಪ ಎತ್ತಪ್ಪರು ಸಹ ತಮ್ಮ ಸ್ವತ್ತುಗಳಾದ ಗೋವುಗಳ ರಕ್ಷಣೆಗಾಗಿ ಹೋರಾಡಿ ದೈವತ್ವಕ್ಕೇರಿದವರೇ. ಜುಂಜಪ್ಪ ತನ್ನ ಮಾವಂದಿರ ಕುತಂತ್ರಕ್ಕೆ ಒಳಗಾಗಿ ವಿಷಪ್ರಾಶನದಿಂದ ಮಡಿಯುತ್ತಾನೆ. ಬರಗಾಲದ ಬವಣೆಯಿಂದ ತತ್ತರಿಸಿದ ಗೋವುಗಳ ರಕ್ಷಣೆಗಾಗಿ ಎತ್ತಪ್ಪ ತನಗೆ ಶಾಪವಿರುವ ಪ್ರದೇಶದ ಆಪತ್ತನ್ನು ಲೆಕ್ಕಿಸದೆ ಹೋಗಿ ಅಲ್ಲಿ ಗುಡ್ಡದ ಬೋರಿಯ ಚಿತಾವಣೆಗೆ ಬಲಿಯಾಗಿ ಸಾಯುತ್ತಾನೆ. ಪಶುಗಳೇ ತಮ್ಮ ಬದುಕಿನ ಸ್ವತ್ತಾಗಿದ್ದ ಸಂದರ್ಭದಲ್ಲಿ ಹುಟ್ಟಿಕೊಂಡ ಇಂತಹ ಪುರಾಣೀಕೃತ ಕಾವ್ಯಗಳು ಎತ್ತಪ್ಪ ಜುಂಜಪ್ಪರು ತಮ್ಮ ಶತೃಗಳ ಮೇಲೆ ಸೇಡು ತೀರಿಸಿಕೊಳ್ಳಲು ಮತ್ತೆ ಹುಟ್ಟಿಬರುತ್ತಾರೆ. ಮತ್ತೆ ಮತ್ತೆ ಪ್ರತೀಕಾರ ತೀರಿಸಿಕೊಳ್ಳುವುದನ್ನು ಕಾವ್ಯಗಳು ಚಿತ್ರಿಸುತ್ತವೆ.

**ಸಾಂಸ್ಕೃತಿಕ ವೀರರ ವರ್ಗೀಕರಣ :**

ಸಾಂಸ್ಕೃತಿಕ ವೀರರು ಕಾಲಕ್ರಮೇಣ ದೈವತ್ವಕ್ಕೇರಿ ಮನೆ ದೇವರುಗಳಾಗಿ, ಗ್ರಾಮದೇವತೆಗಳಾಗಿ ಆರಾಧಿಸಲ್ಪಡುತ್ತಿರುವುದು ಸರಿಯಷ್ಟೆ. ಈ ಸಾಂಸ್ಕೃತಿಕ ವೀರರ ವರ್ಗೀಕರಣ ಕಷ್ಟಕರವಾದುದು. ಯಾವ ರೀತಿ ವರ್ಗೀಕರಿಸಿದರೂ ಕೆಲವೊಂದು ವೀರರು ಸೇರ್ಪಡೆಯಾಗದೆ ಹೋಗುತ್ತಾರೆ. ಇಂತಹ ಸಂದರ್ಭದಲ್ಲಿ ನಾವು ಏಕರೀತಿಯ ವರ್ಗೀಕರಣ ಮಾಡುವುದು ಅಸಮರ್ಪಕ ಎನಿಸಿಕೊಳ್ಳುವುದು. ಆದ್ದರಿಂದ ಹಲವಾರು ದೃಷ್ಟಿಕೋನಗಳಲ್ಲಿ ಸಿರಾ ಸೀಮೆಯ ಸಾಂಸ್ಕೃತಿಕ ನಾಯಕರನ್ನು ವರ್ಗೀಕರಿಸಬಹುದಾಗಿದೆ. ಇದೇ ವರ್ಗೀಕರಣ ನಿಚಿತವಾದದ್ದು ಎಂದು ಹೇಳುವುದಕ್ಕೆ ಬರುವುದಿಲ್ಲ.

ಈ ಸಾಂಸ್ಕೃತಿಕ ನಾಯಕರ ಪ್ರಸಿದ್ಧಿ, ಲಿಂಗ, ಗುಣ ಸ್ವಭಾವವನ್ನು ಆಧರಿಸಿ ಈ ರೀತಿಯಲ್ಲಿ ವರ್ಗೀಕರಿಸಲು ಸಾಧ್ಯವಿದೆ.

**ವರ್ಗೀಕರಣದ ಹಲವು ಬಗೆ :**

ಪ್ರತಿಯೊಂದು ವರ್ಗೀಕರಣವನ್ನು ಯಾವುದಾದರೊಂದು ಪ್ರಮುಖ ಅಂಶವನ್ನು ಆಧಾರವಾಗಿಟ್ಟುಕೊಂಡು ವರ್ಗೀಕರಿಸಲಾಗಿದೆ.

೧. ಪ್ರಸಿದ್ಧಿ ಆಧಾರಿತ ವರ್ಗೀಕರಣ.

೨. ಲಿಂಗ ಆಧಾರಿತ ವರ್ಗೀಕರಣ.

೩. ಆಹಾರ ಪದ್ಧತಿ ಆಧಾರಿತ ವರ್ಗೀಕರಣ.

೪. ಗುಣ ಸ್ವಭಾವ ಆಧಾರಿತ ವರ್ಗೀಕರಣ.

೫. ರೂಪ ಆಧಾರಿತ ವರ್ಗೀಕರಣ.

**೧. ಪ್ರಸಿದ್ಧಿ ಆಧಾರಿತ ವರ್ಗೀಕರಣ :**

ಈ ವರ್ಗೀಕರಣವು ಸಾಂಸ್ಕೃತಿಕ ವೀರರು ಎಷ್ಟು ಜನರಿಂದ, ಎಷ್ಟು ಪ್ರದೇಶ ವ್ಯಾಪ್ತಿಯಲ್ಲಿ, ಹೇಗೆ ಆರಾಧಿಸಲ್ಪಡುತ್ತಿದ್ದಾರೆ ಎಂಬುದನ್ನು ಆಧರಿಸಿದ್ದಾಗಿದೆ. ಇದರಲ್ಲಿ ಮತ್ತೆ

ಅ. ಸ್ಥಳೀಯ ಸಾಂಸ್ಕೃತಿಕ ವೀರರು (ಪ್ರಾಂತೀಯ).

ಆ. ರಾಷ್ಟ್ರೀಯ ಸಾಂಸ್ಕೃತಿಕ ವೀರರು.

ಇ. ಅಂತರರಾಷ್ಟ್ರೀಯ ಸಾಂಸ್ಕೃತಿಕ ವೀರರು.

**ಅ. ಸ್ಥಳೀಯ ಸಾಂಸ್ಕೃತಿಕ ವೀರರು :**

ಇವರು ಒಂದು ಗ್ರಾಮದ ಮಟ್ಟದಲ್ಲಿ ಒಂದು ಮನೆತನದ ಹಂತದಿಂದ ಹಿಡಿದು ಆ ಗ್ರಾಮದ ಎಲ್ಲಾ ವರ್ಗದ ಜನರಿಂದ ಗ್ರಾಮ ದೇವತೆಯಾಗಿ, ಕೆಲವರಿಗೆ ಮನೆದೇವರಾಗಿ ಆರಾಧಿಸಲ್ಪಡುವವರಾಗಿದ್ದಾರೆ.

ಉದಾಹರಣೆಗೆ : ಬರಗೂರು ವೀರಮ್ಮ, ಮಾಗೋಡು ರಂಗನಾಥ, ಗುರುಗುಂಡ ಬ್ರಹ್ಮೇಶ್ವರ, ಪುರಲೇಹಳ್ಳಿ ಬೂತಪ್ಪ.

**ಆ. ಪ್ರಾಂತೀಯ ಸಾಂಸ್ಕೃತಿಕ ವೀರರು :**

ಇವರು ಒಂದು ಹೋಬಳಿ, ತಾಲ್ಲೂಕು ಕೇಂದ್ರದಿಂದ ಹಿಡಿದು ಜಿಲ್ಲೆ ಹಾಗೂ ರಾಜ್ಯ-ರಾಜ್ಯಗಳ ವ್ಯಾಪ್ತಿಯಲ್ಲಿ ಆರಾಧಿಸಲ್ಪಡುವವರಾಗಿದ್ದಾರೆ.

ಉದಾಹರಣೆಗೆ : ಜುಂಜಪ್ಪ, ಎತ್ತಪ್ಪ, ಬೊಪ್ಪರಾಯ, ಚಿತ್ರದೇವರು ಮೊದಲಾದವರು.

**೨. ಲಿಂಗ ಆಧಾರಿತ ವರ್ಗೀಕರಣ :**

ಇದು ಸಾಮಾನ್ಯ ರೀತಿಯ ವರ್ಗೀಕರಣವಾಗಿದ್ದು, ಇಲ್ಲಿ ಗಂಡು, ಹೆಣ್ಣು ಎಂದಷ್ಟೇ ವರ್ಗೀಕರಿಸಬಹುದಾಗಿದೆ. ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರಗೂರು ವೀರಮ್ಮ ಬೇವಿನಹಳ್ಳಿ ಕರಿಯಮ್ಮಳನ್ನು ಬಿಟ್ಟರೆ ಉಳಿದೆಲ್ಲಾ ಸಾಂಸ್ಕೃತಿಕ ನಾಯಕರು ಪುರುಷರೇ ಆಗಿದ್ದಾರೆ.

**೩. ಆಹಾರ ಪದ್ಧತಿ ಆಧಾರಿತ ವರ್ಗೀಕರಣ :**

ಈ ವರ್ಗೀಕರಣವು ಸಾಂಸ್ಕೃತಿಕ ನಾಯಕರ ಆಹಾರ ಪದ್ಧತಿಯನ್ನು ಆಧರಿಸಿ ಎಂದರೆ, ಸಸ್ಯಹಾರ ಮತ್ತು ಮಾಂಸಹಾರವನ್ನು ಆಧರಸಿ ವರ್ಗೀಕರಿಸಿದೆ. ಈಗಾಗಲೇ ಗತಿಸಿಹೋದ ಸಾಂಸ್ಕೃತಿಕ ವೀರರು ಸಸ್ಯಹಾರಿಗಳೇ, ಮಾಂಸಹಾರಿಗಳೇ ಎಂದು ತಿಳಿಯುವುದು ಅಸಾಧ್ಯವಾದರೂ ಅವರನ್ನು ಆರಾಧಿಸುವ ಭಕ್ತರು ಅವರನ್ನು ಆರಾಧಿಸುವ ಸಂದರ್ಭದಲ್ಲಿ ಮಾಡುವ ಆಹಾರ ಪದ್ಧತಿಯನ್ನು ಆಧರಿಸಿ ವರ್ಗೀಕರಿಸಲಾಗಿದೆ. ಈ ಅಧ್ಯಯನ ವ್ಯಾಪ್ತಿಯಲ್ಲಿ ಪುರ್ಲಹಳ್ಳಿ ಬೂತಪ್ಪ ಮಾಂಸಾಹಾರಿ ವೀರನೆನಿಸಿದ್ದಾನೆ. ಪ್ರತೀದಿನವೂ ರಕ್ತದೋಕುಳಿ ನಡೆಯುತ್ತದೆ. ಮಂಗಳವಾರ, ಶುಕ್ರವಾರಗಳಂದು ರಕ್ತ ಕೋಡಿಯಂತೆ ಹರಿಯುತ್ತದೆ. ಯುಗಾದಿಯ ಮಾರನೇ ದಿನವಂತೂ ಸಹಸ್ರಾರು ಪ್ರಾಣಿಗಳ ಬಲಿ ನೆಡೆಯುತ್ತದೆ. ಉಳಿದಂತೆ ಎಲ್ಲಾ ಸಾಂಸ್ಕೃತಿಕ ನಾಯಕರು ಸಸ್ಯಹಾರಿಗಳಾಗಿದ್ದಾರೆ.

**೪. ಗುಣ ಸ್ವಭಾವ ಆಧಾರಿತ ವರ್ಗೀಕರಣ :**

ಈ ವರ್ಗೀಕರಣವು ಸಾಂಸ್ಕೃತಿಕ ನಾಯಕರ ಗುಣ ಸ್ವಭಾವವನ್ನು ಎಂದರೆ ಸೌಮ್ಯಸ್ವಭಾವ, ಉಗ್ರಸ್ವಭಾವದ ಆಧಾರದ ಮೇಲೆ ವರ್ಗೀಕರಿಸಿದೆ. ಇದರಲ್ಲಿ ಪುರಲೇಹಳ್ಳಿ ಬೂತಪ್ಪನನ್ನು ಬಿಟ್ಟರೆ ಉಳಿದೆಲ್ಲಾ ನಾಯಕರು ಸೌಮ್ಯ ಸ್ವಭಾವದವರಾಗಿದ್ದಾರೆ. ಪುರಲೇಹಳ್ಳಿ ಬೂತಪ್ಪ ಭಯಂಕರ, ಭೀಭತ್ಸ ರಸ್ಗಹುಟ್ಟಿಸುವ ಉಗ್ರ ಸ್ವಭಾವದ ವೀರನಾಗಿ ಕಂಡುಬರುತ್ತಾನೆ. ಸ್ವಯಂ ಜುಂಜಪ್ಪನೇ ಇವನಿಗೆ ರಕ್ತದ ಕೋಡಿ ಹರಿಯಲೆಂದು ಆಶೀರ್ವದಿಸಿದ್ದಾನೆಂದು ಜುಂಜಪ್ಪನ ಕಾವ್ಯದಲ್ಲಿ ಹೇಳಲಾಗಿದೆ.

**೫. ರೂಪ ಆಧಾರಿತ ವರ್ಗೀಕರಣ :**

ಸಿರಾ ಸೀಮೆಯ ಈ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಸಾಂಸ್ಕೃತಿಕ ವೀರರು ಮೂಲತಃ ಜೆನವ ಎಂದರೆ ಕಾಡುಗಲ್ಲು, ಗುಂಡುಕಲ್ಲಿನ ಆಕಾರದಲ್ಲಿ ಆರಾಧಿಸಲ್ಪಡುವವರೇ. ಆದರೆ ಮೂಲ ಸ್ಥಳಗಳಲ್ಲಿರುವ ಜೆನವಗಳನ್ನು ನೆಲೆದೇವರೆಂದು ಕರೆಯುತ್ತಾರೆ. ಇವು ಸಾಮಾನ್ಯವಾಗಿ ಊರ

ಹೊರಭಾಗದಲ್ಲಿ ಚಿಕ್ಕ ಚಿಕ್ಕ ಗುಡಿ, ಪೌಳಿಗಳಲ್ಲಿ ಇರುತ್ತವೆ. ಇತ್ತೀಚಿಗೆ ವೀರರ ಭಕ್ತರು ತಮಗೆ ಅನುಕೂಲವಾಗುವಂತೆ ಈ ವೀರರ ಮೆರವಣಿಗೆ ದೇವರುಗಳನ್ನು ಲೋಹ, ವಿಗ್ರಹಗಳಲ್ಲಿ ಪ್ರತಿಮೆಗಳನ್ನು ಮಾಡಿಸಿ ಊರ ಒಳಭಾಗಗಲ್ಲಿ ಗುಡಿಕಟ್ಟಿ ಆರಾಧಿಸುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ; ಬರಗೂರು ವೀರಮ್ಮ, ಜುಂಜಪ್ಪ, ವೀರಬಡಣ್ಣ.

ಪ್ರಸ್ತುತ ಅಧ್ಯಯನದ ದೃಷ್ಟಿಯಲ್ಲಿ ಈ ಸಾಂಸ್ಕೃತಿಕ ವೀರರನ್ನು ಈ ರೀತಿಯಲ್ಲಿ ವರ್ಗೀಕರಿಸಿಕೊಂಡಿದೆ.




**ಸಂಸಾರಿಕರು :**

ಇವರು ಮಾನವ ಸಹಜ ಹುಟ್ಟನ್ನು ಪಡೆದವರು. ಮನುಷ್ಯನೆಲೆಯಲ್ಲಿ ಕಷ್ಟಗಳನ್ನು ಎದುರಿಸಿ ಹೋರಾಡಿದವರು. ಕೇವಲ ಕೆಲವೇ ವರ್ಷಗಳ ಹಿಂದೆ ಬಾಳಿ ಬದುಕಿದವರು. ಇವರ ವಂಶಜರನ್ನು ಇಂದಿಗೂ ಕಾಣಬಹುದು. ಸಮಸ್ಯೆಗಳು ಶತೃಗಳ ವಿರುದ್ಧ ಹೋರಾಡುತ್ತಲೇ ಮಡಿದವರು. ತಮ್ಮ ಗುಣ ವಿಶೇಷಗಳಿಂದ ದೈವತ್ವಕ್ಕೇರಿದವರು. ಹುಟ್ಟು ಸ್ಥಳೀಯವಾದವರು. ಇವರಿಗೆ ಸಮಸ್ಯೆಗಳನ್ನು ಎದುರಿಸುವುದು ಕಷ್ಟಸಾದ್ಯವಾದದ್ದು. ಉದಾಹರಣೆಗೆ : ಹುಳಿಗೆರೆ ಕೋಡಿ ವೀರಪ್ಪ, ಈರಗಾಟಪ್ಪ, ಈರಗಿರಿಯಪ್ಪ, ಈರಕೆಂಚಮ್ಮ, ಈರಬೊಮ್ಮಣ್ಣ ಬರಗೂರು ವೀರಮ್ಮ, ಬೊಪ್ಪರಾಯ ಮೊದಲಾದವರು. ಇವರ ಬಗೆಗೆ ಆಯಾ ಜನಾಂಗಗಳಲ್ಲಿ ದಂತಕತೆ, ಪುರಾಣಗಳು, ಪದಗಳು ಹುಟ್ಟಿಕೊಂಡವು.

**ಸತ್ಪುರುಷರು :**

ಇವರು ದೈವಾಂಶ ಸಂಭೂತರಾಗಿದ್ದು, ದೇವರೇ ಇವರ ರೂಪದಲ್ಲಿಯೋ, ದೇವರ ಮಕ್ಕಳಾಗಿಯೋ, ವರಪುತ್ರರಾಗಿಯೋ ಜನಿಸಿದವರು. ಮಾನವ ಸಹಜ ಹುಟ್ಟಿಗೆ ಬದಲಾಗಿ ಹುತ್ತದಲ್ಲೋ, ಬೆನ್ನು ಮೂಳೆಯಲ್ಲೋ, ವಸ್ತು, ಕಲ್ಲುಗುಂಡಿನ ರೂಪದಲ್ಲೋ ಜನಿಸಿದವರು. ಯೋನಿ ಸಹಜ ಹುಟ್ಟು ಸೂತಕವೆಂದು ನಂಬಿದವರು. ಅಲೌಕಿಕ ನೆಲೆಯಲ್ಲಿ ಪವಾಡಗಳನ್ನು ಮಾಡುವ ಮೂಲಕ ಶತೃಗಳ ವಿರುದ್ಧ ಹೋರಾಡಿ ಶತೃಗಳ ಸದೆಬಡಿದವರು. ಶತೃಗಳಿಗೆ ಸಿಂಹ ಸ್ವಪ್ನವಾಗಿ ಕಾಡಿದವರು. ಲೌಕಿಕ ನೆಲೆಯಲ್ಲಿ ಎದುರಿಸಲಾರದೇ ಹೋದಾಗ ಅಲೌಕಿಕ ನೆಲೆಯಲ್ಲಿ ಪವಾಡಗಳ ಮೂಲಕ ಸಮಸ್ಯೆಗಳು ಶತೃಗಳನ್ನು ಗೆದ್ದವರು. ದೈವತ್ವಕ್ಕೇರಿದವರು. ಸತ್ತು ಮತ್ತೆ ಮತ್ತೆ ಶತೃಗಳೊಂದಿಗೆ ಸಂಘರ್ಷಕ್ಕಿಳಿಯಬಲ್ಲವರು. ಆ ಮೂಲಕ ಶತೃಗಳನ್ನು ನಿರ್ಮೂಲನ ಮಾಡಬಲ್ಲವರು. ಉದಾಹರಣೆಗೆ : ಜುಂಜಪ್ಪ, ಎತ್ತಪ್ಪ, ಚಿತ್ರದೇವರು, ರಂಗನಾಥ, ಬೇವಿನಹಳ್ಳಿ ಕರಿಯಮ್ಮ, ಪುರಲಹಳ್ಳಿ ಬೂತಪ್ಪ ಮೊದಲಾದವರು. ಇವರ ಬಗೆಗೆ ಕಾವ್ಯ ಮಹಾಕಾವ್ಯಗಳು ಕಥೆಗಳು ಹುಟ್ಟಿಕೊಂಡವು.

**ಅಡಿಟಿಪ್ಪಣಿ**

೧. ಸಂಕ್ಷಿಪ್ತ ಕನ್ನಡ ನಿಘಂಟು. ಕನ್ನಡ ಸಾಹಿತ್ಯ ಪರಿಷತ್

೨. ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು. ಜಿ.ವೆಂಕಟಸುಬ್ಬಯ್ಯ.

೩. ಆರ್, ಶೇಷಶಾಸ್ತ್ರಿ ಕರ್ನಾಟಕದ ವೀರಗಲ್ಲುಗಳು ಪುಟ ೧೩-೨೦

೪. ಆರ್.ಶೇಷಾಶಾಸ್ತ್ರಿ ಕರ್ನಾಟಕದ ವೀರಗಲ್ಲುಗಳು. ಪುಟ. ೩೩೨

೫. ಉತ್ತರ ಕರ್ನಾಟಕದ ವೀರಗೀತೆಗಳು, ಡಾ.ವೈ.ಎಸ್.ಸೈದಾಪುರ.

೬. ಕರ್ನಾಟಕದ ಶಾಸನಗಳು ಸಾಂಸ್ಕೃತಿಕ ಅಧ್ಯಯನ, ಚಿದಾನಂದ ಮೂರ್ತಿ ಪುಟ.೨೭೨.

೭. ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಡಾ.ವಿರೂಪಾಕ್ಷಿ ಪೂಜಾರಹಳ್ಳಿ,

೮. ಆರ್.ಶೇಷಾಶಾಸ್ತ್ರಿ ಕರ್ನಾಟಕದ ವೀರಗಲ್ಲುಗಳು.

೯. ಡಾ.ಜಿ.ಎಸ್.ಶಿವರುದ್ರಪ್ಪ, ಅನುಕರಣನ, ಪುಟ ೧೦೮.

೧೦. ಆರ್.ಶೇಷಾಶಾಸ್ತ್ರಿ-ಕರ್ನಾಟಕದ ವೀರಗಲ್ಲುಗಳು. ಪುಟ ೧೦

೧೧. ಆರ್.ಶೇಷಾಶಾಸ್ತ್ರಿ-ಕರ್ನಾಟಕದ ವೀರಗಲ್ಲುಗಳು. ಪುಟ ೧೮-೧೯

೧೨. ಶೇಷಾಶಾಸ್ತ್ರಿ ಆರ್-ಕರ್ನಾಟಕದ ವೀರಗಲ್ಲುಗಳು. ಪುಟ ೧೮-೧೯

೧೩. ಮಾಹಿತಿ ನೀಡಿದವರು ದ್ಯಾವಪ್ಪ ೫೫ ವರ್ಷ ಕಾಡುಗೊಲ್ಲರು. ಗುಮ್ಮನಹಳ್ಳಿ ಗೊಲ್ಲರಹಟ್ಟಿ.

೧೪. ಮಾಹಿತಿ ನೀಡಿದವರು ಪೂಜಾರ ಅಜ್ಜೀಗೌಡ. ವಯಸ್ಸು ೭೦ ಗೊಲ್ಲರು ಬಂಗಾರಿಹಟ್ಟಿ.

೧೫. ಆರ್.ಶೇಷಾಶಾಸ್ತ್ರಿ. ಕರ್ನಾಟಕದ ವೀರಗಲ್ಲುಗಳು.

೧೬. ಡಾ.ಕೃಷ್ಣಮೂರ್ತಿ ಹನೂರ: ಸಾಂಸ್ಕೃತಿಕ ನಾಯಕರು ಧರ್ಮ; ವಿಶ್ವಕೋಶ (ಸಂ) ಡಾ.ರಹಮತ್ ತರೀಕೆರೆ ಪುಟ ೪೧೯

ಅಧ್ಯಾಯ ೪

## ಸಾಂಸ್ಕೃತಿಕ ವೀರ-ನಾಯಕರ ಸಂಕ್ಷಿಪ್ತ ಪರಿಚಯ

೧. ರಂಗಪ್ಪ ನಾಯಕ

೨. ಬೆಜ್ಜಿಹಳ್ಳಿ ಬೊಪ್ಪರಾಯ

೩. ಬರಗೂರು ವೀರಮ್ಮ

೪. ದಿಬ್ಬದ ವೀರಬೊಮ್ಮಣ್ಣ

೫. ಗುರುಗುಂಡ ಬ್ರಹ್ಮೇಶ್ವರ

೬. ಕಳುವೋರಹಳ್ಳಿ ಜುಂಜಪ್ಪ

೭. ಎತ್ತಪ್ಪ

೮. ಚಿತ್ರದೇವರು

೯. ಪುರಲೇಹಳ್ಳಿ ಬೂತಪ್ಪ

೧೦. ಬೇವಿನಹಳ್ಳಿ ಕರಿಯಮ್ಮ

೧೧. ರಂಗನಾಥ

ಅಧ್ಯಾಯ ೪

## ಸಾಂಸ್ಕೃತಿಕ ವೀರ-ನಾಯಕರ ಸಂಕ್ಷಿಪ್ತ ಪರಿಚಯ

ತುಮಕೂರು ಜಿಲ್ಲೆಯ ಸಿರಾ ತಾಲ್ಲೂಕು ಒಂದು ಪ್ರಸಿದ್ಧ ಐತಿಹಾಸಿಕ ಕೇಂದ್ರ. ಇಲ್ಲಿ ನೂರಾರು ವೀರ ನಾಯಕರು ಒಂದಲ್ಲಾ ಒಂದು ಕಾರಣದಿಂದ ವೀರ ಮರಣವನ್ನಪ್ಪಿದ್ದಾರೆ. ಈ ಅಂಶ ಸಿರಾ ತಾಲ್ಲೂಕಿನಾದ್ಯಂತ ಲಭ್ಯವಿರುವ ಶಾಸನಗಳಿಂದ ವೇದ್ಯವಾಗುತ್ತದೆ. ಅವರು ಚಾರಿತ್ರಿಕ ವೀರರಾಗಿರಬಹುದು, ಜನಪದ ವೀರರಾಗಿರಬಹುದು. ಚಾರಿತ್ರಿಕ ವೀರರಾದ ರಂಗಪ್ಪ ನಾಯಕ ಮೊದಲಾದವರು ಇತಿಹಾಸದ ಪುಟಗಳಲ್ಲಿ ಲಭ್ಯವಾದರೆ ಸಾಂಸ್ಕೃತಿಕ ವೀರರಾದ ಬೊಪ್ಪರಾಯ, ಜುಂಜಪ್ಪ, ಎತ್ತಪ್ಪ, ರಂಗನಾಥ ಮೊದಲಾದವರು ಜನಮನದಲ್ಲಿ ಬೇರೂರಿದ್ದಾರೆ. ಈ ಪ್ರಕ್ರಿಯೆ ಸಾಮಾನ್ಯವಾಗಿ ನಾಡಿನ ಎಲ್ಲ ಕಡೆ ಕಂಡುಬರುವುದುಂಟು. ಸಿರಾ ಇದರಿಂದ ಹೊರತಲ್ಲ.

ಸಿರಾ ತಾಲ್ಲೂಕಿನಾದ್ಯಂತ ಸುಮಾರು ನೂರಕ್ಕೂ ಹೆಚ್ಚು ಶಾಸನಗಳು ಲಭ್ಯವಾಗಿವೆ. ಇವುಗಳನ್ನು ಬಿ.ಎಲ್.ರೈಸ್‌ರವರು ಎಫಿಗ್ರಾಫಿಯ ಕರ್ನಾಟಕ XIIರಲ್ಲಿ ಪ್ರಕಟಿಸಿದ್ದಾರೆ. ಇವುಗಳಲ್ಲಿ ಬಹುಪಾಲು ದಾನ ಶಾಸನಗಳಾಗಿವೆ. ಎರಡನೇ ಸ್ಥಾನವನ್ನು ವೀರಗಲ್ಲುಶಾಸನಗಳು ಪಡೆದುಕೊಂಡಿವೆ. ಈ ವೀರಗಲ್ಲು ಶಾಸನಗಳಲ್ಲಿ ಕೆಲವು ಸ್ಪಷ್ಟ ಮಾಹಿತಿಗಳನ್ನು ಒಳಗೊಂಡಿದ್ದರೆ ಮತ್ತೆ ಕೆಲವು ಅಸ್ಪಷ್ಟವಾಗಿದ್ದು ಜೀರ್ಣಗೊಂಡಿವೆ. ಈ ಶಾಸನಗಳನ್ನು ಓದಿಕೊಂಡು ಸಿರಾ ಪ್ರಾಂತ್ಯದ ಇತಿಹಾಸವನ್ನು ಪುನರ್ ಕಟ್ಟುವಷ್ಟು ಮಾಹಿತಿ ಸಮೃದ್ಧವಾಗಿದೆ. ಕೆಲವು ಗ್ರಾಮಗಳಲ್ಲಿ ಶಾಸನವಿಲ್ಲದೆ ವೀರಗಲ್ಲುಗಳು ಮಾತ್ರ ಕಂಡುಬರುತ್ತವೆ. ಅವು ಯಾವುವು ? ಯಾವ ಕಾಲದವು ? ಯಾರಿಗೆ ಸಂಬಂಧಿಸಿದವು ಅವರ ವೀರ ಮರಣಕ್ಕೆ ಕಾರಣವೇನು ಎಂಬ ಎಲ್ಲಾ ವಿಚಾರವೂ ಅಜ್ಞಾತವಾಗಿಯೇ ಉಳಿದಿವೆ.



ಕೆಲವೊಂದು ಗ್ರಾಮಗಳಲ್ಲಿ ಏಳೆಂಟು ವೀರಗಲ್ಲುಗಳು ಒಂದೇ ಕಡೆ ಕಂಡುಬರುತ್ತವೆ. ಉದಾಹರಣೆ ತಡಕಲೂರು, ನಾರಾಯಣಪುರ, ಮದಲೂರು, ಯರದಕಟ್ಟೆ, ವೀರಬೊಮ್ಮನಹಳ್ಳಿ ಮೊದಲಾದ ಹಳ್ಳಿಗಳು. ಇವು ಯಾವುದೋ ಒಂದು ಹೋರಾಟದ ಕಥೆಯನ್ನು ಹೇಳುತ್ತವೆ. ನೊಳಂಬ ಅರಸರು ಸಿರಾ ಪಕ್ಕದ ಆಂಧ್ರ ಪ್ರದೇಶದ ಹೇಮಾವತಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಈ ಸಿರಾ ಪ್ರಾಂತ್ಯದಲ್ಲಿ ತಮ್ಮ ಪ್ರಭಾವ ಬೀರಿರುವುದು ಶಾಸನಗಳಲ್ಲಿ ಪ್ರಸ್ತಾಪವಾಗಿದೆ. ಅವರ ಕಾಲದಲ್ಲಿ ನಿರ್ಮಾಣವಾದ ಶಿವ ದೇವಾಲಯಗಳು ಸಿರಾ, ಬರಗೂರು, ನಾದೂರು, ಮದಲೂರು ಮೊದಲಾದ ಭಾಗಗಳಲ್ಲಿ ಕಂಡುಬರುತ್ತವೆ. ವೀರರ ಹೆಸರಿನ ಅನೇಕ

ಗ್ರಾಮಗಳಾದ ವೀರಗಾನಹಳ್ಳಿ, ವೀರಬೊಮ್ಮನಹಳ್ಳಿ, ಕಟಾರಿ ವೀರನಹಳ್ಳಿಗಳು ಕಂಡುಬರುತ್ತವೆ. ಈ ವಿಷಯಗಳನ್ನು ಗಮನಿಸಿದರೆ ಸಿರಾ ಪ್ರಾಂತ್ಯದಲ್ಲಿ ವೀರರುಗಳಿಗೇನೂ ಬರವಿಲ್ಲ.

ಸಿರಾ ಪ್ರಾಂತ್ಯದ ಬಹುಪಾಲು ಸಾಂಸ್ಕೃತಿಕ ವೀರರು ಜನಪದರಲ್ಲಿ ಗುರ್ತಿಸಲ್ಪಡುವವರು. ಇವರ ಬಗೆಗೆ ಶಿಷ್ಟ ಇತಿಹಾಸದಲ್ಲಾಗಲೀ, ಶಾಸನಗಳಾಗಲಿ, ಲಿಖಿತ ಆಧಾರಗಳಾಗಲಿ ಲಭಿಸುವುದಿಲ್ಲ. ಈ ವೀರರ ಬಗೆಗೆ ಜನಪದರಲ್ಲಿ ಕಥೆ, ಐತಿಹ್ಯ, ಪುರಾಣ, ಲಾವಣಿ, ಹಾಡುಗಳು ಹುಟ್ಟಿಕೊಂಡಿವೆ. ಉದಾಹರಣೆಗೆ ಬರಗೂರು ವೀರಮ್ಮನ ಕತೆ, ಬೊಪ್ಪರಾಯನ ಐತಿಹ್ಯ ರಂಗಪ್ಪನಾಯಕನ ಲಾವಣಿ, ಜುಂಜಪ್ಪನ ಕಾವ್ಯ ಮೊದಲಾದವು. ಒಟ್ಟಾರೆ ಯಾವುದೋ ಒಂದು ಕಾರಣಕ್ಕಾಗಿ, ಮೌಲ್ಯಾದರ್ಶಗಳಿಗಾಗಿ, ಜನಾಂಗ ರಕ್ಷಣೆ, ಗೋರಕ್ಷಣೆ, ಸ್ತ್ರೀಯರ ಮಾನ, ಪ್ರಾಣ ರಕ್ಷಣೆಗಾಗಿ ಹೋರಾಟ ಮಾಡಿದ ಈ ವೀರ ನಾಯಕರನ್ನು ಜನಪದರು ಆರಾದಿಸಿಕೊಂಡು ಬಂದಿದ್ದಾರೆ. ಗೋ ರಕ್ಷಣೆಗಾಗಿ ಹೋರಾಡಿ ಮಡಿದ ವೀರನ ಕತೆಯನ್ನು ದಿಬ್ಬದ ವೀರಬೊಮ್ಮನಹಳ್ಳಿಯ ವೀರಗಲ್ಲುಗಳು ತಿಳಿಸಿದರೆ ಜನಾಂಗದ ಪಾವಿತ್ರ್ಯತೆಗಾಗಿ ಮಡಿದ ವೀರನ ಕತೆಯನ್ನು ಬೆಜ್ಜಿಹಳ್ಳಿಯ ಬೊಪ್ಪರಾಯನ ವೀರಗಲ್ಲು ಐತಿಹ್ಯ ಹೇಳುತ್ತದೆ. ಬರಗೂರು ವೀರಮ್ಮ ಜನಾಂಗದ ಮೌಲ್ಯದರ್ಶಗಳನ್ನು ಎತ್ತಿ ಹಿಡಿದ ವೀರತ್ವದ ಐತಿಹ್ಯವಿದೆ. ಇಂತಹ ವೀರ ನಾಯಕರು ಸಿರಾ ತಾಲ್ಲೂಕಿನ ಅನೇಕ ಹಳ್ಳಿಗಳಲ್ಲಿ ಕಂಡುಬರುತ್ತಾರೆ ಈ ವೀರ ನಾಯಕರುಗಳ ಸಂಕ್ಷಿಪ್ತ ಪರಿಚಯವನ್ನು ಇಲ್ಲಿ ಮಾಡಲಾಗಿದೆ.

**ರಂಗಪ್ಪ ನಾಯಕ :**

ನಮ್ಮ ನಾಡಿನಲ್ಲಿ ಗತಿಸಿದ ಹಿರಿಯರ ಬದುಕನ್ನು ಅರಿಯುವಲ್ಲಿ ಜನಪದ ಸಾಹಿತ್ಯ ನಮಗೆ ನೆರವಾಗುತ್ತದೆ. ಜಾನಪದದಲ್ಲಿ ವೀರರ ಐತಿಹಾಸಿಕ ಬದುಕಿನೊಂದಿಗೆ ಅವರ ಸಾಂಸ್ಕೃತಿಕ ಬದುಕೂ ಅನಾವರಣಗೊಳ್ಳುತ್ತದೆ. ನಾಡಿನ ಸಂಸ್ಕೃತಿಯನ್ನು ಎತ್ತಿಹಿಡಿದು ಜನಮನದಲ್ಲಿ ನೆಲೆಯೂರಿದ ಸಾಂಸ್ಕೃತಿಕ ವೀರರಾದ ಕುಮಾರರಾಮ, ಮದಕರಿನಾಯಕ, ಕಿತ್ತೂರು ಚನ್ನಮ್ಮ, ಒನಕೆ ಓಬವ್ವ, ಸಂಗೊಳ್ಳಿ ರಾಯಣ್ಣ, ಸರ್ಜಪ್ಪ ನಾಯಕ, ಮಾಗಡಿ ಕೆಂಪೇಗೌಡ, ಪಿರಿಯಾ ಪಟ್ಟಣದ ವೀರರಾಜ ಈ ಮೊದಲಾದವರ ಜೊತೆಗೆ ಇನ್ನೂ ಬೆಳಕಿಗೆ ಬರದ ಅನೇಕ ವೀರರ ವಿವರವನ್ನೊಳಗೊಂಡ ಕಾವ್ಯ, ಗೀತೆ, ಸಾಂಗತ್ಯ, ಕಥನಗೀತೆ, ಲಾವಣಿಗಳು ಜನಪದರ ಬಾಯಿಯಲ್ಲಿಯೇ ಹರಿದಾಡುತ್ತಿವೆ. ಮತ್ತೆ ಕೆಲವು ಅಳಿದು ಹೋಗುತ್ತಿವೆ. ಇವುಗಳಿಗೆ ಬರವಣಿಗೆಯ ರೂಪ ಕೊಡಲು ಆಗಬೇಗಾಗಿರುವ ಶೋಧನೆಯ ಕಾರ್ಯ ಮಹತ್ತರವಾಗಿದೆ.

ನಾಡಿನ ಈ ಸಾಂಸ್ಕೃತಿಕ ವೀರರ ಸಾಲಿನಲ್ಲಿ ನಿಲ್ಲಬಲ್ಲ ಸಿರಾ ಸೀಮೆಯ ಮತ್ತೊಬ್ಬ ವೀರ ರಂಗಪ್ಪನಾಯಕ. ಇತಿಹಾಸಕಾರರಾದ ಹೆಚ್.ವಿ. ವೀರನಾಯಕರು "ಗುಮ್ಮನಹಳ್ಳಿ" ಕದನ ಎಂಬ

ಲಾವಣಿಯಲ್ಲಿ ರಂಗಪ್ಪ ನಾಯಕನ ವೀರತನದ ಹೋರಾಟವನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಸಿರಾ ರಂಗಪ್ಪನಾಯಕನ ಈ ಲಾವಣಿ ಚಿತ್ರದುರ್ಗ ಹಾಗೂ ತುಮಕೂರು ಜಿಲ್ಲೆಗಳಲ್ಲಿ ಅತ್ಯಂತ ಜನಪ್ರಿಯವಾಗಿದೆ. ಇದು ಪಿರಿಯಾಪಟ್ಟಣದ ಕಾಳಗದಂತೆ ದುರಂತ ವಸ್ತು ವಿನ್ಯಾಸವನ್ನೊಳಗೊಂಡಿದೆ.

"ಹದಿನೈದನೆ ಶತಮಾನದ ಆರಂಭದಲ್ಲಿ ಸಿರಾದ ರಂಗಣ್ಣ ಮತ್ತು ಪೂವಲ ಕೆಂಗಣ್ಣ ಎನ್ನುವ ನಾಯಕರಿಬ್ಬರ ನಡುವೆ ನಡೆದ ಕರುಣಾಪೂರಿತ ಯುದ್ಧದ ವಿವರಣೆಯನ್ನು ಒಳಗೊಂಡಿದೆ ಎಂದು 'ಗುಮ್ಮನಹಳ್ಳಿ ಕದನ'ದ ಮುನ್ನುಡಿಯಲ್ಲಿ ಹಂ.ಪ.ನಾಗರಾಜಯ್ಯನವರು ಅಭಿಪ್ರಾಯ ಪಡುತ್ತಾರೆ.[೧]

ಕ್ರಿ.ಶ.೧೬೩೨ರ ವೇಳೆಗೆ ಮೂರು ಜನ ರಂಗಪ್ಪ ನಾಯಕರ ಪ್ರಸ್ತಾಪವಿದ್ದು ಕೂನನ ಕೆರೆ ಬಳಿ ಯುದ್ಧದಲ್ಲಿ ಚಿತ್ರದುರ್ಗ ಹಾಗೂ ಹಿರಿಯೂರು ಪಾಳೇಗಾರರೊಡನೆ ಕಾದು ಮಡಿದವನು ರಂಗಪ್ಪನಾಯಕನೆನಿಸಿದ್ದು ಈತ ಬಹುಶಃ ಮುಮ್ಮಡಿ ರಂಗಪ್ಪನಾಯಕನಿರಬೇಕೆಂದೂ, ಗುಮ್ಮನಹಳ್ಳಿ ಕದನದಲ್ಲಿ ಪುವ್ವಲ ಕೆಂಗಣ್ಣನೊಡನೆ ಹೋರಾಡಿ ಮಡಿದವನು ಬಹುಶಃ ರತ್ನಗಿರಿ ಸೀಮೆಯನ್ನಾಳುತ್ತಿದ್ದ ಕಸ್ತೂರಿ ರಂಗಪ್ಪರಾಜುವಿನ ಮಗ ಸರ್ಜಾ ರಂಗಪ್ಪನಾಯಕನೆಂದೂ, ಕಸ್ತೂರಿ ರಂಗಪ್ಪ ರಾಜನಿಗೆ ಸೀರ್ಯದ ರಂಗಪ್ಪರಾಜನೆಂಬ ಸೋದರನಿದ್ದನೆಂದು ಚಿತ್ರಲಿಂಗಯ್ಯನವರು ವಂಶವೃಕ್ಷದಲ್ಲಿ ಗುರುತಿಸಿದ್ದಾರೆ.[೨] ಬಹುಶಃ ಈತನು ರಣದುಲ್ಲಾ ಖಾನ್‌ನ ನೇತೃತ್ವದಲ್ಲಿ ಸಿರಾವನ್ನು ಮುತ್ತಿದ ಬಿಜಾಪುರದ ಸೈನ್ಯವನ್ನು ಎದುರಿಸಿ ವೀರ ಮರಣ ಪಡೆದವನು," ಎಂದು ಇತಿಹಾಸಕಾರ ಎಂ.ಎನ್. ಪ್ರಭಾಕರ ಅಭಿಪ್ರಾಯ ಪಡುತ್ತಾರೆ.[೩] ರಂಗಪ್ಪ ನಾಯಕ ತನ್ನ ಆಳ್ವಿಕೆಯ ಕಾಲದಲ್ಲಿ ಸಿರಾ ಕೋಟೆಯನ್ನು ಕಟ್ಟಿಸಿ ವೈಭವ ಪೂರ್ಣವಾಗಿ ಆಳಿದನು. ಕೋಟೆ ಪೂರ್ಣಗೊಳ್ಳುವುದರ ಒಳಗಾಗಿ ಬಿಜಾಪುರದ ರಣದುಲ್ಲಾಖಾನನ ದಾಳಿಗೆ ಈಡಾದ. ಸಿರಾ ಮುಂದೆ ಬಹಳ ವರ್ಷಗಳಕಾಲ ಮಹಮದೀಯರ ವಶದಲ್ಲಿತ್ತು. ಇಂತಹ ಸಂದರ್ಭದಲ್ಲಿ ಮಹ ಮದೀಯರ ಆಳ್ವಿಕೆಗೂ ಮೊದಲು ಒಂದು ಘಟನೆಯನ್ನು ಆಧರಿಸಿದ್ದು ರಂಗಪ್ಪ ನಾಯಕನ ಗುಮ್ಮನಹಳ್ಳಿ ಕದನ ಎಂಬ ಲಾವಣಿ.[೪]

ರಂಗಪ್ಪನಾಯಕ ಅಧಿಕಾರಕ್ಕೆ ಬಂದ ವೇಳೆಗಾಗಲೇ ಉತ್ತರದ ಮಹಮದೀಯರ ದಾಳಿ ದಕ್ಷಿಣದ ಕಡೆ ಹೆಚ್ಚಾಗಿತ್ತು. ಸ್ವರಕ್ಷಣೆ ಹಾಗೂ ಆಡಳಿತ ರಕ್ಷಣೆಯ ದೃಷ್ಟಿಯಿಂದ ಕೋಟೆ ನಿರ್ಮಾಣ ಅನಿವಾರ್ಯವೆನಿಸಿತ್ತು ಕೋಟೆ ನಿರ್ಮಾಣಕ್ಕೆ ಸಂಬಂಧಿಸಿದ ಲಾವಣಿ ತುಂಬಾ ಸೊಗಸಾಗಿ ಮೂಡಿಬಂದಿದೆ.

ಹುಟ್ಟುಗಲ್ಲಿನ ಮೇಲೆ। ಹುಟ್ಟೀತು ಸೀರ್ರೇವು।

ಸುತ್ತಕಾರಂಜಿ। ಹುಲಿಮುಖ।

ಸುತ್ತಕಾರಂಜಿ। ಹುಲಿಮುಖ। ಕೋಟೆಯ ಸುತ್ತ ಒಪ್ಪಾವಿ ನೆಟ್ಟಾರೆ ಕಸಿಮಾವು॥

ಗೂಡುಗಲ್ಲಿನ ಮೇಲೆ| ಮೂಡ್ಯಾತು ಸೀರ್ರೇವು|

ಸುತ್ತ ಕಾಡೆಲ್ಲಾ ಕಡಿಸಾನೆ|

ಸುತ್ತ ಕಾಡೆಲ್ಲಾ ಕಡಿಸಾನೆ| ರಂಗಣ್ಣಾ ಕಟ್ಟೇದ ಕೋಟೇಯ ಮುಗಿಲುದ್ದ

ಹತ್ತಿ ಕಟ್ಟಿದ ಕೋಟೆ| ಚಕ್ರ ಬಿಂಬದ ಕೋಟೆ|

ಹತ್ತೀತು ಕೋಟೆ ಮುಗಿಲುದ್ದ|

ಹತ್ತೀತು ಕೋಟೆ| ಮುಗಿಲುದ್ದ| ರಂಗಣ್ಣನ ಮುದ್ದಾದ ಮಗನ ಬಸುರೀಲಿ.

ಕೋಟೆ ನಿರ್ಮಾಣದ ಜೊತೆಗೆ ಕೋಟೆಗೆ ಹೊಂದಿಕೊಂಡಂತೆ ಕೆರೆಯೊಂದನ್ನು ಕಟ್ಟಿಸಲಾಯಿತು. ಬಟಾ ಬಯಲಲ್ಲಿ ಕಟ್ಟಿದ ನೆಲಗೋಟೆಗೆ ರಕ್ಷಣೆಗಾಗಿ ಸುತ್ತಲೂ ಕಂದಕವನ್ನು ತೋಡಿ ಕೆರೆಯ ನೀರು ಆ ಕಂದಕಕ್ಕೆ ಹೋಗುವ ವ್ಯವಸ್ಥೆ ಮಾಡಲಾಯಿತು.

ಕೋಟೆಸುತ್ತ| ಮುತ್ತ| ಜಗಲಿಜಾಲಿ| ಮರ|

ಅಗಳಿಗ| ಬ್ಯಾವೆ ರಸಬಳ್ಳಿ|

ಅಗಳಿಗ| ಬ್ಯಾವೆ ರಸಬಳ್ಳಿ| ರಂಗಣನ ಕೋಟೆಗೆದುರು ಇನ್ನುಂಟೆ||

ಜೊತೆಗೆ ಸಣ್ಣ ಕೆರೆಯನ್ನು ನಿರ್ಮಿಸಲಾಯಿತು. ಉತ್ತಮ ಆಡಳಿತ ನೆಡೆಸುತ್ತಾ ಜನತೆಗೆ ರಕ್ಷಣೆ ಒದಗಿಸಿ ಕೆರೆ, ಕಲ್ಯಾಣಿ ದೇವಾಲಯಗಳ ನಿರ್ಮಾಣ ಹಾಗೂ ಅನೇಕ ಜನಪರ ಕಾಯಕಗಳನ್ನು ಮಾಡಿ ರಂಗಪ್ಪನಾಯಕ ತನ್ನ ನಾಡಿನ ಜನಮನವನ್ನು ಗೆದ್ದಿದ್ದನು. ಸಿರಾದ ರಂಗಪ್ಪನಾಯಕ ಹಾಗೂ ಚಿತ್ರದುರ್ಗದ ನಾಯಕರು ಸಂಬಂಧಿಕರಾದರೂ ಗಡಿ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿದ್ದವು. ಇದೇ ಸಂಬರ್ಧದಲ್ಲಿ ಬಸವಾ ಪಟ್ಟಣದಲ್ಲಿ ಪುವ್ವಲ ಗೋತ್ರದ ಕೆಂಗಣ್ಣ ನಾಯಕನು ಸಂಸ್ಥಾನಿಕನಾಗಿ ಆಡಳಿತ ನೆಡೆಸುತ್ತಿದ್ದನು. ಇವನಿಗೂ ಸೀರ್‍ಯಾದ ರಂಗಪ್ಪನಾಯಕನಿಗೂ ನೆಂಟಸ್ತಿಕೆ ಚನ್ನಾಗಿತ್ತು. ರಂಗಪ್ಪನಾಯಕನ ಅತ್ತೆಯ ಮಗನೇ ಕೆಂಗಣ್ಣನಾಯಕ. ಎಂದರೆ ರಂಗಪ್ಪ ನಾಯಕನ ತಂದೆಯ ತಂಗಿ ಮಗ ಕೆಂಗಹನುಮನು ಬಸವಾಪಟ್ಟಣದ ಹನುಮಪ್ಪ ನಾಯಕ ಆಗಿರಬಹುದು ಇತಿಹಾಸಕಾರರು ಗುರ್ತಿಸುತ್ತಾರೆ."

ಒಮ್ಮೆ ಒಂದು ಹಬ್ಬದ ಸಮಾರಂಭಕ್ಕೆ ಪೂವಲ ಕೆಂಗಣ್ಣ ನಾಯಕನು ಸೀರ್‍ಯಾಕ್ಕೆ ಆಹ್ವಾನಿತನಾದ. ಹಬ್ಬದೂಟದ ಆನಂದದಲ್ಲಿ ಬಾವ ಮೈದುನರು ಜೂಜಾಡಲು ಕುಳಿತರು ಕೆಂಗಣ್ಣನಾಯಕ ಜೂಜಿನ ಪಣವಾಗಿ

ನಾ ಸೋತರೆ| ನನ್ನ ರಾಯದುರ್ಗ| ಕೊಡುತೀನಿ

ನೀ ಸೋತರೆ| ನಿನ್ನ ತಂಗಿ| ರಂಗೋಜಿಯ|

ನೀ ಸೋತರೆ ನಿನ್ನ ತಂಗಿ| ರಂಗೋಜಿಯ ಇಷ್ಟಾರ್ಥ ಸಲ್ಲಿಸಲು ಬಿಡಬೇಕು|

ಎಂದು ಕೇಳಿದನು. ಈ ಮಾತಿನಿಂದ ರಂಗಪ್ಪನಾಯಕ ಕೆಂಡಮಂಡಲವಾದನು. ಪಗಡೆಯಾಟದಲ್ಲಿ ತನ್ನ ತಂಗಿಯನ್ನು ಪಣವಾಗಿ ಒಡ್ಡಬೇಕೆಂಬ ಕೆಂಗಣ್ಣ ನಾಯಕನ ಸೊಕ್ಕು ಮುರಿಯಬೇಕೆಂದು ಅವಡುಗಚ್ಚಿ, ತನ್ನ ಸಿಟ್ಟನ್ನು ತೋರಗೊಡದೆ ನಿಬಂಧನೆಗೆ ಒಪ್ಪಿ ಪಗಡೆಯಾಡಿದನು. ಆಟದ ಮದ್ಯೆ ಸೋಲಿನ ನೆಪ ಮಾಡಿಕೊಂಡು ಅಂತಃಪುರಕ್ಕೆ ಬಂದನು. ಇದನ್ನು ತಪ್ಪಾಗಿ ತಿಳಿದ ಕೆಂಗಣ್ಣ ನಾಯಕನು ರಂಗಪ್ಪ ನಾಯಕನ ತಂಗಿ ರಂಗೋಜಿ ತನ್ನನ್ನು ಸ್ವಾಗತಿಸಲು ಬರಬೇಕೆಂದು ಕೇಳಿಕೊಂಡನು. ರಂಗಪ್ಪನಾಯಕ ತನ್ನ ತಂಗಿಯ ಮುಂದೆ ತನಗಾದ ಅವಮಾನವನ್ನು ತೋಡಿಕೊಂಡನು. ಅಣ್ಣ ತಂಗಿಯರು ಒಂದಾಗಿ ರಂಗೋಜಿ ತನ್ನ ಬಾಯಿ ಮುಕ್ಕಳಿಸಿದ ಎಂಜಲು ನೀರನ್ನು ತೆಗೆದುಕೊಂಡು ಬಂದು

ಬಂದ| ಮಾವಯ್ಯಾಗೆ| ರಂಗೋಜಿ| ತಂದಾಳೆ|
ಬನ್ನೀರಿ ಮಾವಯ್ಯ ಧರಿಸೀರಿ|
ಬನ್ನೀರಿ| ಮಾವಯ್ಯ ಕಾಶಿ ತೀರ್ಥವ| ತಂದೆ ಕಣ್ಗೊತ್ತಿ| ಕೈ ಎತ್ತಿ| ಮೊಗೆಯೀರಿ||

ಎಂದು ಹೇಳಿ ಕುಡಿಸಿದಳು. ನಂತರ ಅಣ್ಣ ತಂಗಿಯರಿಬ್ಬರೂ ಬಿದ್ದು ಬಿದ್ದು ನಕ್ಕರು. ಕೋಪಗೊಂಡ ಕೆಂಗಣ್ಣ ನಾಯಕನು ತಾನು ಮೋಸಹೋದ ಅರಿವಾಗಿ

ಮೋಸ ಮಾಡಿದ| ಇವನ| ಲೇಸಾಗಿ| ತೆಗೆದೇವು|
ಕಾಸಿಗೂ ತರವಲ್ಲ| ಇವನು ಸೀರ್‍ಯಾದ| ರಂಗ
ಕಾಸಿಗೂ| ತರವಲ್ಲ| ಇವನು ಸೀರ್‍ಯಾದ ರಂಗ|
ಪಾಶೀಗೆ| ಹಾಕೇನು ನಿನ್ನ ತುರುಕರ ಮುಂದೆ||

ಎಂದು ಶಪಥ ಮಾಡಿ ಅಲ್ಲಿಂದ ಹೊರಟುಹೋದನು. ತನ್ನ ಬಾವ ರಂಗಪ್ಪನಾಯಕನ ವಿರುದ್ದ ಪ್ರತೀಕಾರ ಕೈಗೊಳ್ಳಲು ಕೆಂಗಣ್ಣನಾಯಕ ಬಿಜಾಪುರದ ಬಹುಮನಿ ಸುಲ್ತಾನರ ಸಹಾಯ ಕೋರಿದ. ಅವಕಾಶಕ್ಕಾಗಿ ಕಾಯುತ್ತಿದ್ದ ಮುಸ್ಲಿಮರು ದಕ್ಷಿಣದಲ್ಲಿ ತಮ್ಮ ಪ್ರಭುತ್ವ ಸ್ಥಾಪಿಸಲು ನೆಪ ಸಿಕ್ಕಂತಾಗಿ ಕೆಂಗಣ್ಣನಾಯಕನ ಸಹಾಯಕ್ಕೆಂದು ಹಗಲೂ ರಾತ್ರಿ ಪ್ರಯಾಣಿಸಿ ಸಿರಾ ತಲುಪಿದರು. ರಾತ್ರಿ ಕೋಟೆ ಭೇದಿಸಲು ಸಿದ್ದರಾದರು. ವಿಷಪೂರಿತ ಮುಳ್ಳು ಬಳ್ಳಿಗಳಿಂದಲೂ, ಸುತ್ತಲೂ ಕಂದಕದಿಂದ ಕೂಡಿದ ಕೋಟೆಗೆ ದಾಳಿ ಮಾಡಲು ಕಂದಕದಲ್ಲಿರುವ ನೀರಿನ ಮೇಲೆ

ಬಂಡಿ| ಚಕ್ರದ ಮೇಲೆ| ಹತ್ತಿ ಅಂಡಿಗೆಯಿಟ್ಟು|
ಹತ್ತಲಾರದ| ಕೋಟೆ ಹತ್ತ್ಯಾರೆ|

ಹತ್ತಲಾರದ| ಕೋಟೆ| ಹತ್ತ್ಯಾರೆ| ತುರುಕಾರು|

ಇಳಿಯಾದ| ಅರಿಯಾರೆ||

ಬಂಡಿ ಚಕ್ರಗಳನ್ನು ಅವುಗಳ ಮೇಲೇರಿ ಕೋಟೆ ಗೋಡೆ ತಲುಪಿದರು. ಹಗಲು ರಾತ್ರಿ ಪ್ರಯಾಣ ಮಾಡಿ ಕೋಟೆಗೆ ಮುತ್ತಿಗೆ ಹಾಕಿದ ಮುಸ್ಲಿಂ ಸೈನ್ಯ ಹಸಿವಿನಿಂದ ಬಸವಳಿದಿತ್ತು. ಸಮಯಕ್ಕೆ ಸರಿಯಾಗಿ ರಂಗಪ್ಪನಾಯಕನ ಸೈನ್ಯವೂ ಎಚ್ಚರಗೊಂಡಿತು. ಆಗ ಬಿಜಾಪುರದ ಸೈನ್ಯ ಕೋಟೆಯಿಂದ ಹೊರಗುಳಿದು ಸಿರಾದ ಪೂರ್ವಕ್ಕೆ ಎರಡು ಮೈಲಿ ದೂರದ ಗುಮ್ಮನಹಳ್ಳಿಯಲ್ಲಿ ಬೀಡುಬಿಟ್ಟಿತು. ಬಿಜಾಪುರದ ಸೈನ್ಯ ವಿನಾಕಾರಣ ಏಕಾಏಕಿ ದಾಳಿ ಮಾಡಿದ ಕಾರಣ ತಿಳಿಯದ ರಂಗಪ್ಪನಾಯಕ ತಾಯಿ ತಿಮ್ಮಾಜಮ್ಮ, ಅಕ್ಕ ಕೃಷ್ಣಮ್ಮ, ಅರಸಿ ನರಸೋಜಿ, ತಂಗಿ ರಂಗೋಜಿಯರ ಸಲಹೆಯಿಂದ ತುರುಕರೊಡನೆ ಸಂಧಾನ ಮಾಡಿಕೊಳ್ಳಲು ಬಯಸುತ್ತಾನೆ. ಆದರೆ ತನ್ನ ದೇಹದಲ್ಲಿ ಹರಿಯುವ ವೀರರ ರಕ್ತವನ್ನು ನೆನೆದು ವೀರನಾಯಕರ ವಂಶದಲ್ಲಿ ಹುಟ್ಟಿ ರಣಕ್ಕೆ ಹೆದರಿದ್ದೇ ಆದರೆ ತನಗೆ ಜನ್ಮವಿತ್ತ ನಾಯಕ ಕುಲಕ್ಕೆ ಕಳಂಕ ಎಂದು ಕಲಿಯಾಗಿ ರಣಕ್ಕೆ ಹೋಗಲು ಸಿದ್ಧನಾದನು.

ಕ್ಷತ್ರಿಯಾ| ಮಗನಾಗಿ| ಕತ್ತಿಗೆ| ಹೆದರುವೆನೆ|

ಕತ್ತಿಯಾ| ಮೊನೆಗೆ| ನಾ ಹೆದರಿ| ಬಂದಾರೆ|

ಕತ್ತಿಯಾ| ಮೊನೆಗೆ| ನಾ ಹೆದರಿ| ಬಂದಾರೆ| ಕ್ಷತ್ರಿಯಾ| ಕುಲಕೆ ಕೆಟ್ಟೆಸರು||

ಸಿರ್‍ಯಾದ ಉತ್ತರ ಭಾಗದ ಅಮರಾವತಿ ರಸ್ತೆಯಲ್ಲಿ ಒಂದು ಮೈಲು ದೂರದ ಕಲ್ಲು ಕೋಟೆಯ ಬಳಿ ಕೆಂಗಣ್ಣ ನಾಯಕನಿಗೆ ಬೆಂಬಲವಾಗಿ ಚಿತ್ರದುರ್ಗದ ಕಸ್ತೂರಿ ರಂಗಪ್ಪನಾಯಕನೂ ಯುದ್ಧಕ್ಕೆ ಬಂದಿದ್ದಾನೆ.

ಪೂವಲ| ಕೆಂಗಣ್ಣ| ಕಸ್ತೂರಿ| ರಂಗಣ್ಣ|

ಕಲ್ಲು| ಕೋಟೆಯ| ಒಳಗೆ| ಕಡಿದಾಟ|

ಕಲ್ಲು| ಕೋಟೆಯ| ಒಳಗೆ| ಕಡಿದಾಟವಾದಾರೆ ಕಲ್ಲಾನೆ| ತೂರಿ ಎಸೆದಾರು||

ಬಿಜಾಪುರದ ಸೈನ್ಯ ತರಬೇತಿ ಪಡೆದ ಶಿಸ್ತಿನ ಸಿಪಾಯಿಗಳಿಂದ ಕೂಡಿದ್ದರೆ ರಂಗಪ್ಪನಾಯಕನ ಸೈನ್ಯದಲ್ಲಿ ತರಬೇತಿ ಇಲ್ಲದ ಚಿಕ್ಕ ಚಿಕ್ಕ ಹುಡುಗರು. ಯುದ್ಧ ಸಂದರ್ಭವನ್ನು ಕಟ್ಟಿ ಕೊಡುವ ಲಾವಣಿ ಎಲ್ಲರ ಗಮನ ಸೆಳೆಯುವಂತಹದ್ದು. ಕಲ್ಲಿನ ತೂರಾಟವೂ ನೆಡೆದಿದೆ.

ಭೋರೆಂಬ| ಕಳೇಯ| ಭುಗಿತಿಂದು| ಹಿಡಿಸ್ಯಾನೆ| ಕೋಲನ್ನೀರ||

ಈಟೀಟೆ| ಹುಡುಗಾರು| ಚೀಟಿ ಚೆಲ್ಲಣದಾರು|

ತುದಗಲಿ| ಪಾಪಾಪಿನೋರು| ಕ್ಯರೆರು ಮಾಲದೋರು|

ಯಾವಲ್ಲಿ| ಹೋದಾರೋ| ರಣಸರ್ಜ| ನಿನದಂಡು| ಕಲ್ಲುಕೋಟೆ| ಒಳಗೆ| ಕಡಿದಾಟ||

ಕಲ್ಲುಕೋಟೆಯ ಬಳಿಗೆ ಸ್ವಲ್ಪ ಸೈನ್ಯವನ್ನು ಕಳುಹಿಸಿ ರಂಗಪ್ಪನಾಯಕ ಅವನು ಗುಮ್ಮನಹಳ್ಳಿಯಲ್ಲಿರುವ ತುರುಕರನ್ನು ಎದುರಿಸಲು ಹೋಗುತ್ತಾನೆ. ಅನೇಕ ಅಪಶಕುನಗಳಾಗುತ್ತವೆ.

ಮುಸ್ಲಿಂರ ಏಕಾಏಕಿ ಧಾಳಿಗೆ ಕೆಂಗಣ್ಣನಾಯಕನ ಕರಾಮತ್ತೇ ಕಾರಣವೆಂದು ಅರಿತ ರಂಗಪ್ಪನಾಯಕ ಅವನು ಗುಮ್ಮನಹಳ್ಳಿ ಕದನ ಭೂಮಿಯಲ್ಲಿ ರಣಭೈರವನಾಗಿ ಹೋರಾಡುತ್ತಾನೆ.

ಕಣ್ಣು| ಕೆಂಪಾದಾವು| ದುಂಡನ್ನ| ಮುಖದಲ್ಲಿ|

ಕುಣಿದೆದ್ದು| ನಿಂತಾವೆ| ಮೀಸೆಗಳು|

ಕುಣಿದೆದ್ದು| ನಿಂತಾವೆ| ಮೀಸೆಗಳು| ರಂಗೈನ| ಅವುಡೇ ಕಚ್ಚಾವು| ಹಲ್ಲುಗಳೂ||

ಕತ್ತಿಯಾ| ಹಿಡಿದು| ತಾ| ನಿಂತಾನೆ| ರಂಗಯ್ಯ|

ಲೆಕ್ಕ| ವಿಲ್ಲವು ಬಿದ್ದ| ತಲೆಗಾಳು|

ಲೆಕ್ಕ| ವಿಲ್ಲವು ಬಿದ್ದ| ತಲೆಗಾಳು| ಕತ್ತೀಯ| ಮೇಲೆತ್ತಿ| ಮತ್ತೆ| ಹಿಡಿದಾನೆ||

ಕತ್ತಿಯಾ| ತಿರುವಾನೆ| ತುರುಕರ್ನ| ಎಸೆದಾನೆ|

ಒತ್ತಿ ತಿರ್ವೀ| ಮೀಸೆ| ರಣಸರ್ಜ|

ಒತ್ತಿ ತಿರ್ವೀದ| ಮೀಸೆ| ರಣಸರ್ಜ| ಸೀರ್‍ಯದ| ಗುತ್ತಿಗೆ| ತನಗೇ| ಇಲ್ಲೆಂದ||

ಕತ್ತಿಯಾ| ತಿರುವೂತ| ತಲೆಗಳನು| ತರಿಯುತ|

ಮತ್ತೆಲ್ಲಿ| ಲೆಖ್ಖವೋ| ರಣಸರ್ಜ| ತೊತ್ತಿಗರ| ಮುತ್ತೈದೆ| ತನಕೇ| ಉಳಿವಿಲ್ಲ||

ಆದರೆ ರಂಗಣ್ಣನ ಭಾಗ್ಯದೇವತೆ ಮುನಿದಿರುತ್ತಾಳೆ. ಕತ್ತಿಯನ್ನಿಡಿದು ಹೋರಾಡುತ್ತಿರುವ ರಂಗಪ್ಪನಾಯಕನಿಗೆ ಹಿಂಬದಿಯಿಂದ ಶತೃಗಳು ಇರಿಯುತ್ತಾರೆ.

ಬಿದ್ದಾನೆ| ರಂಗಣ್ಣ| ಬಿಟ್ಟಂಬು| ಮೇಲಾಗಿ|

ವಜ್ರದಂಗಿ| ಬಾಕೆ| ಅಡಿಯಾಗಿ|

ವಜ್ರದಂಗಿ| ಬಾಕೇ| ಅಡಿಯಾಗಿ| ಗುಮ್ಮನಹಳ್ಳೀಲಿ| ಬಿದ್ನಮ್ಮ| ಸೂರ್‍ಯಗೆ ತಲೆಬಾಗಿ||

ರಂಗನ| ದಯವಿಲ್ಲ| ರಣ| ಸರ್ಜನು ಇನ್ನಿಲ್ಲ|

ರಣರಂಗದಿ| ಬಿದ್ದ ರಣಸರ್ಜ|

ರಣರಂಗದಿ| ಬಿದ್ದ ರಣಸರ್ಜ| ಸೀರ್‍ಯದ| ರಂಗಣಸು| ಮೇಲೆದ್ದು ಬರಲಿಲ್ಲ||

ರಂಗಪ್ಪನಾಯಕನ ನಂತರ ಬಿಜಾಪುರದ ಆದಿಲ್‌ಷಾಹಿಗಳ ಆಳ್ವಿಕೆ ಪ್ರಾರಂಭವಾಗಿ ಮುಂದೆ ಹೈದರಾಲಿಯ ದಾಳಿಯಿಂದ ನಾಯಕ ವಂಶವೇ ಆಳ್ವಿಕೆಯಿಂದ ಮರೆಯಾಗುತ್ತದೆ.

ರಂಗಪ್ಪನಾಯಕನ ಜನಪರವಾದ ಆಳ್ವಿಕೆ, ಅವನ ದುರಂತ ಮರಣ, ಜನಪದರಿಗೆ ಮರೆಯಲಾಗಲಿಲ್ಲ. ರಂಗಪ್ಪ ನಾಯಕನನ್ನು ಒಬ್ಬ ವೀರನನ್ನಾಗಿ ಸ್ವೀಕರಿಸಿ ಅವನ ವ್ಯಕ್ತಿತ್ವ ಗುಣ ಶೀಲಗಳನ್ನು ಲಾವಣಿ ಹಾಡುಗಳಲ್ಲಿ ಕೊಂಡಾಡುತ್ತಾ ದೈವತ್ವೀಕರಿಸಿದರು. ಇಂದಿಗೂ ರಂಗಪ್ಪನಾಯಕನ ವಂಶಸ್ಥರನ್ನು ರತ್ನಗಿರಿ, ಹರತಿಕೋಟೆ, ವೇಣುಕಲ್ಲುಗುಡ್ಡ ಮೊದಲಾದ ಪ್ರದೇಶಗಳಲ್ಲಿ ಕಾಣಬಹುದು.

ಸಿರಾ ಸೀಮೆಯ ಮತ್ತೊಬ್ಬ ಸಾಂಸ್ಕೃತಿಕ ವೀರ ಜುಂಜಪ್ಪ ಹಾಗೂ ರಂಗಪ್ಪನಾಯಕ ಸಮಕಾಲಿನರು. ಜುಂಜಪ್ಪನ ತಾಯಿ ಚಿನ್ನಮ್ಮನ ಚೊಚ್ಚಲ ಹೆರಿಗೆ ಮಾಡಿಸಲು ರಂಗಪ್ಪನಾಯಕನ ತಾಯಿ ತಿಮ್ಮೋಜಮ್ಮ ಸೂಲಗಿತ್ತಿಯಾಗಿ ಬರುತ್ತಾಳೆ. ಈ ಸೂಲಗಿತ್ತಿಯ ಕೈ ಮುಟ್ಟಿದರೆ ತನ್ನ ಬತಗೆಡುತ್ತದೆಂದು ಭಾವಿಸಿದ ಜುಂಜಪ್ಪ ತಿಮ್ಮೋಜಮ್ಮನಿಗೆ ಅತಿಯಾದ ಕಷ್ಟ ಕೊಡುತ್ತಾನೆ.[೬]

**ಬೆಜ್ಜಿಹಳ್ಳಿ ಬೊಪ್ಪರಾಯ :**

ಜನಾಂಗಗಳ ಮ್ಯೂಸಿಯಂ ಎಂದೇ ಹೆಸರಾದ ಭಾರತ ದೇಶದಲ್ಲಿ ವಕ್ಕಲಿಗ ಜನಾಂಗ ಪ್ರಮುಖವಾದದ್ದು. ದಕ್ಷಿಣ ಭಾರತದಲ್ಲಿ ಗಣನೀಯ ಸಂಖ್ಯೆಯಲ್ಲಿರುವ ವಕ್ಕಲಿಗರ ಒಳಪಂಗಡವಾಗಿ ಬರುವ ಕುಂಚಿಟಿಗ ಜನಾಂಗ ಸಿರಾ ತಾಲ್ಲೂಕಿನಲ್ಲಿ ಅತೀ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಕರ್ನಾಟಕದ ಪ್ರಮುಖ ಧರ್ಮಗಳಿಂದ ಶ್ರೀ ವೈಷ್ಣವ, ವೀರಶೈವ, ಮುಸ್ಲಿಂ ಮೊದಲಾದ ಧರ್ಮಗಳ ಸೆಳೆತ, ಒತ್ತಡಗಳಿಗೊಳಗಾದ ಸಂದರ್ಭದಲ್ಲಿ ಹಾಲಿನಂತಹ ಕುಲ ನೀರಾಗದಂತೆ ಶ್ರಮಿಸಿದ ಈ ಜನಾಂಗದ ಪೌರಾಣಿಕ ವೀರರ ಹೋರಾಟಗಳನ್ನು ಕುಂಚಿಟಿಗರ ಮಹಾಪುರಾಣ, ವೀರನಾಗಮ್ಮನ ಚರಿತ್ರೆ, ಕುಂಚಿಜ್ಞಾತನ ಚರಿತೆ, ಶ್ರೀ ಗುರು ಸಾರ್ವಡೇಶ್ವರ ಪುರಾಣಗಳು ತಿಳಿಸುತ್ತವೆ. ಅವರುಗಳಲ್ಲಿ ಪ್ರಮುಖರಾದವರು ಉಂಡೆ ಎತ್ತರಾಯ, ವೀರಕ್ಯಾತರಾಯ, ರಾಜವಂತಿಪುರದ ನಾಡಪ್ರಭು, ವೀರಬಡಣ್ಣ, ನಿಡುಗಲ್ಲಿನ ಶೂಲದಈರಣ್ಣ ಹಾಗೂ ಬೆಜ್ಜಿಹಳ್ಳಿ ಬೊಪ್ಪರಾಯ ಮೊದಲಾದವರು.

ಸಿರಾದಿಂದ ಬರಗೂರು ಮಾರ್ಗವಾಗಿ ೩೫ ಕಿ.ಮಿ ದೂರದಲ್ಲಿರುವ ಬೆಜ್ಜಿಹಳ್ಳಿ ಗ್ರಾಮ ಕುಂಚಿಟಿಗ ಜನಾಂಗದ ಸಾಂಸ್ಕೃತಿಕ ವೀರನಾದ ಬೊಪ್ಪರಾಯ ನೆಲೆಗೊಂಡಿರುವ ಸ್ಥಳ.

ಕುಂಚಿಟಿಗ ಜನಾಂಗದ ಜಲದೇನವರು ಗೋತ್ರದ ಕುಲದೈವವೆನಿಸಿದ ಬೊಪ್ಪರಾಯನ ಸುತ್ತಲೂ ಅತಿಮಾನುಷ ಕತೆಯನ್ನು ಕಟ್ಟಲಾಗಿದೆ. ಈತನ ಮೂಲದ ಬಗ್ಗೆ ಭಿನ್ನಾಭಿಪ್ರಾಯಗಳಿದ್ದು ಕುಂಚಿಟಿಗ ಜನಾಂಗೀಯ ಪುರಾಣಗಳು ವಿಭಿನ್ನವಾಗಿ ಹೇಳುತ್ತವೆ.

ಒಂದು ಪುರಾಣದ ಪ್ರಕಾರ ಬೊಪ್ಪರಾಯ ಮೂಲತಃ ಕುಂಚಿಟಿಗ ಜನಾಂಗದವನೆ. ದೆಹಲಿಯಿಂದ ಈ ಜನಾಂಗವರು ದಕ್ಷಿಣ ಭಾರತದ ಕಡೆ ಬರುವಾಗ ಆ ಜನಾಂಗದ ಮುಖಂಡತ್ವ ವಹಿಸಿದ್ದವರಲ್ಲಿ ಈತನೂ ಒಬ್ಬನೆಂದು ಹೇಳುತ್ತದೆ.[೭]

ಮತ್ತೊಂದು ಪುರಾಣದ ಪ್ರಕಾರ ಮೂಲತಃ ಬೊಪ್ಪರಾಯ ಕುರುಬ ಜನಾಂಗದವನು. ದೆಹಲಿಯ ಮುಸಲ್ಮಾನ ದೊರೆ ಕುಂಚಿಟಿಗ ಜನಾಂಗದ ಉಂಡೆ ಎತ್ತರಾಯನ ಮಗಳನ್ನು ಮೋಹಿಸಿದ್ದರಿಂದ ಕುಲದ ಹಾಗೂ ಜನಾಂಗದ ಶೀಲ, ಮಾನ, ಪಾವಿತ್ರ್ಯ ರಕ್ಷಣೆಗಾಗಿ ಆ ಕುಲದವರೆಲ್ಲಾ ಬಂಡಿಗಳಲ್ಲಿ ದಕ್ಷಿಣದ ಕಡೆ ಓಡಿ ಬರುವಾಗ ನದಿಯೊಂದು ಅಡ್ಡವಾಯಿತು. ಹಿಂದೆ ಬೆನ್ನಟ್ಟಿ ಬರುತ್ತಿದ್ದ ಮುಸಲ್ಮಾನ ದೊರೆಯಿಂದ ತಪ್ಪಿಸಿಕೊಳ್ಳಲು ಚಡಪಡಿಸುತ್ತಿದ್ದರು. ಈ ಸಂದರ್ಭದಲ್ಲಿ ಅಲ್ಲಿಯೇ ಕುರಿ ಕಾಯುತ್ತಿದ್ದ ಬೊಪ್ಪರಾಯ ನದಿ ದಾಟಲು ಇವರಿಗೆ ಸಹಾಯ ಮಾಡಿದ. ಆಪತ್ಕಾಲದಲ್ಲಿ ನೆರವಾಗಿ ಕುಲದ ಪಾವಿತ್ರ್ಯ ಉಳಿಸಿದ ಬೊಪ್ಪರಾಯನನ್ನು ಕುಂಚಿಟಿಗ ಜನಾಂಗ ಆರಾದಿಸುತ್ತಾ ತಮ್ಮ ಸಾಂಸ್ಕೃತಿಕ ನಾಯಕನನ್ನಾಗಿ ಸ್ವೀಕರಿಸಿತು.[೮]

ಕುಂಚಿಟಿಗ ಜನಾಂಗದವರು ಮಾಡುವ ಧಾರ್ಮಿಕ ಕಾರ್ಯಗಳು, ವಿವಾಹ ಮೊದಲಾದ ಸಮಾರಂಭಗಳಲ್ಲಿ ಬೊಪ್ಪರಾಯನಿಗೇ ಮೊದಲ ಎಡೆಯ ಅಗ್ರ ಪ್ರಾಶಸ್ತ್ಯ. "ಕುರುಬ ಕೆಟ್ಟು ಕುಂಚಿಟಿಗನಾದ" ಎಂಬ ಗಾದೆ ಮಾತಿಗೆ ಬೊಪ್ಪರಾಯನ ಈ ಕತೆ ತಳುಕುಹಾಕುವಂತಿದೆ ಎಂಬ ಮೀರಾಸಾಬಿಹಳ್ಳಿ ಶಿವಣ್ಣನವರ ಅಭಿಪ್ರಾಯವು ಬೊಪ್ಪರಾಯನ ಕುರುಬ ಜನಾಂಗದ ಮೂಲವನ್ನೇ ಸಮರ್ಥಿಸುತ್ತದೆ.[೯]

ಬೊಪ್ಪರಾಯನ ವೀರತ್ವದ ಬಗ್ಗೆ ಕಥೆಯೊಂದು ಹೀಗೆ ಹೇಳುತ್ತದೆ. ದ್ವಾರಕೆ ಪಟ್ಟಣದಲ್ಲಿ ಕುಂಚಿಟಿಗರ ೪೮ ಕುಲದವರು ವಾಸವಾಗಿದ್ದರು. ದಿಲ್ಲಿ ಸುಲ್ತಾನ ಈ ಜನಾಂಗದ ಹೆಣ್ಣನ್ನು ಮೋಹಿಸಿ ಮದುವೆಯಾಗಲು ಮುಂದಾದಾಗ ಅವನಿಗೆ ಹೆದರಿ ಓಡಿ ಬರುವಾಗ ನದಿಯೊಂದು ಅಡ್ಡವಾಯಿತು. ಗಂಗೆಯನ್ನು ಭಕ್ತಿಯಿಂದ ಪ್ರಾರ್ಥಿಸಿ ದಾರಿಯನ್ನು ಬಿಡಲು ಕೇಳಿಕೊಂಡಾಗ ಆಕೆ ನಿಮ್ಮ ೪೮ ಕುಲದ ಗೌಡರುಗಳಲ್ಲಿ ಒಬ್ಬರ ಶಿರವನ್ನು ಕೊಟ್ಟರೆ ನಾನು ಒಂದು ಗೋವಿನ ಪಾದದಷ್ಟು ಜಾಗ ಬಿಡುತ್ತೇನೆಂದು ಹೇಳಿದಳು. ಅದಕ್ಕೆ ಅವರು ಯೋಚಿಸಿ ಹಾವಿನ ಗೂಡೊಳಗೆ ಇರುವ ಜಲದಿ ಬೊಪ್ಪರಾಯನನ್ನು ಬೇಡಿಕೊಳ್ಳೋಣ ಎಂದು ಬಂದು ಕೇಳಿಕೊಂಡರು. ಆಗ ಬೊಪ್ಪರಾಯ "ನೀವು ನನ್ನ ಸತ್ತಮುಂಡಕ್ಕೆ (ತಲೆ ಇಲ್ಲದ ದೇಹಭಾಗ) ಮದುವೆ ಮಾಡುತ್ತೇವೆ ಎಂದು ಮಾತುಕೊಟ್ಟರೆ ನಾನು ದಾರಿ ಬಿಡಿಸುತ್ತೇನೆ" ಎಂದು ಹೇಳಿದನು. ಗೌಡರು ಹಾಗೇಯೇ ಆಗಲಿ ಎಂದು ಮಾತು ಕೊಟ್ಟರು. ಬೊಪ್ಪರಾಯ ಹೊಳೆಯ ದಡದಲ್ಲಿ ನಿಂತು ಗಂಗೆಯನ್ನು ಭಕ್ತಿಯಿಂದ ಪ್ರಾರ್ಥಿಸಿ ಎಂಟು ಬಂಗಾರದ ಗಂಡುಕತ್ತಿಯನ್ನು ತೆಗೆದುಗೊಂಡು ತನ್ನ ಕತ್ತನ್ನು

ತಾನೇ ಕಡಿದುಕೊಳ್ಳುತ್ತಾನೆ. ಆಗ ಗಂಗೆ ತೃಪ್ತಳಾಗಿ ಎರಡು ಭಾಗವಾಗಿ ದಾರಿ ಬಿಟ್ಟಳು. ನದಿ ದಾಟಿ ಹಾಗೆಯೇ ಹೋಗುತ್ತಿರುವಾಗ ಬೊಪ್ಪರಾಯನ ಮುಂಡಭಾಗ 'ಅಯ್ಯಾ ನೀವು ನನ್ನ ಮದುವೆ ಮಾಡದೆ ಹೋಗುತ್ತೀರಿ' ಎಂದಿತು, ಅದಕ್ಕೆ ಗೌಡರು 'ಅಯ್ಯಾ ಬೊಪ್ಪರಯನೇ ನಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನು ನಿನ್ನ ಸತ್ತ ಮುಂಡಕ್ಕೆ ಕೊಟ್ಟು ನಾವು ದುಖಃ ಅನುಭವಿಸಬೇಕೆ' ಎಂದು ಕೇಳಿದರು. ಆ ಮಾತಿಗೆ ಬೊಪ್ಪರಾಯ ಏನೆಂದಿರಿ "ಕುಂಚಿಟಿಗರಿಗೆ ಕುಲವಿಲ್ಲ ಕುಡುಗೋಲಿಗೆ ವರಿಯಿಲ್ಲ, ಆಡಿದ ಮಾತು ಮಾಡುವುದಿಲ್ಲ ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ" ಎಂದಿತು. ಅದಕ್ಕೆ ಗೌಡರು 'ನಿನ್ನ ಮುಂಡಕ್ಕೆ ರುಂಢವನ್ನು ಕೂಡಿಸಿಕೊಂಡರೆ ನಾವು ಮದುವೆ ಮಾಡಿ ಕೊಡುತ್ತೇವೆ' ಎಂದರು. ಹಾಗೆಯೇ ಹಾಗಲಿ ಎಂದು ಬೊಪ್ಪರಾಯ ತನ್ನ ದೇವರಾದ ಬಸವೇಶ್ವರನನ್ನು ಪ್ರಾರ್ಥಿಸಿ ರುಂಡ ಮುಂಡಗಳನ್ನು ಕೂಡಿಸಿಕೊಂಡು ಜೀವಕಳೆ ತಳೆದನು ಆಗ ಅವರು ಉಂಡೆ ಐತ್ತರಾಯನ ಮಗಳು ಚಿಕ್ಕಬೈರಮ್ಮನನ್ನು ಕೊಟ್ಟು ವಿವಾಹ ಮಾಡಿದರು.

ಜುಂಜಪ್ಪನ ಕಾವ್ಯದಲ್ಲಿ ಬೊಪ್ಪರಾಯನ ಬಗೆಗೆ ಉಲ್ಲೇಖವಿದೆ. ಆ ಪ್ರಕಾರ ಬೊಪ್ಪರಾಯ ಒಬ್ಬ ಸಮುದ್ರ ರಾಜ. ಇಪ್ಪತ್ತನಾಲ್ಕು ವರ್ಷಗಳ ಕಾಲ ಸಮುದ್ರ ಮಧ್ಯದಲ್ಲಿ ಸೂರ್ಯನ ಜಪ ಮಾಡುತ್ತಿದ್ದ. ಜುಂಜಪ್ಪನ ತಾಯಿ ಸಿನ್ನಮ್ಮ ತಾನು ಪತಿವ್ರತೆ ಎಂಬುದನ್ನು ಸಾಬೀತು ಪಡಿಸಲು ಜುಂಜಪ್ಪ ಸಮುದ್ರಕ್ಕೆ ಎಸೆದ ಮುತ್ತಿನ ಉಂಗುರ ತರಲು ಹೋಗುತ್ತಿರುವಾಗ ಅರ್ಧಸಮುದ್ರದಲ್ಲಿ ಸೂರ್ಯನ ಜಪ ಮಾಡುತ್ತಿದ್ದ ಬೊಪ್ಪರಾಯ ಸಿಗುತ್ತಾನೆ. ಸಿನ್ನಮ್ಮನ ನೆರಳು ಅವನ ಮೇಲೆ ಬಿದ್ದು ಅವನ ಜಪ ಈಡೇರುತ್ತದೆ, ಇದರಿಂದ ಸಂತೋಷಗೊಂಡ ಬೊಪ್ಪರಾಯ ಸಿನ್ನಮ್ಮನಿಗೆ 'ನೀನು ಜುಂಜಪ್ಪನನ್ನು ಪ್ರಾರ್ಥಿಸಿದರೆ ಮುತ್ತಿನ ಉಂಗುರ ಸಿಗುತ್ತದೆ. ಅದನ್ನು ತೆಗೆದುಕೊಂಡು ಹೋಗಿ ಕೊಡು' ಎಂದು ಸಲಹೆ ಕೊಡುತ್ತಾನೆ°

ಬೊಪ್ಪರಾಯ ನೆಲೆಗೊಂಡಿರುವ ಬೆಜ್ಜಿಹಳ್ಳಿ ಸಮೀಪದ ಬೊಪ್ಪರಾಯನ ಪಾಳ್ಯದಲ್ಲಿರುವ ಬೊಪ್ಪರಾಯನ ಗುಡಿಯಲ್ಲಿ ವೀರಗಲ್ಲೊಂದು ಇದೆ. ವೀರಗಲ್ಲಿನ ಮೇಲ್ಭಾಗದಲ್ಲಿ ಲಿಂಗವನ್ನು ಪೂಜಿಸುತ್ತಿರುವ ವ್ಯಕ್ತಿ ಬೊಪ್ಪರಾಯನ ಗುರು ಬೀರಲಿಂಗೇಶ್ವರನೆಂದು ಹೇಳಲಾಗುತ್ತದೆ. ಕುಂಚಿಟಿಗ ಶಬ್ದದ ಹಿನ್ನೆಲೆಯಲ್ಲಿ ಕುಂಚ ಎಂಬುದು ಮಗ್ಗವನ್ನು ನೇಯುವಾಗ ಬಳಸುವ ವಸ್ತು. ಈ ಮಗ್ಗ ನೇಯುವವರು ಬಹುಪಾಲು ಕುರುಬರು. ಈ ಹಿನ್ನೆಲೆಯಲ್ಲಿ ಕುರುಬ ಕುಂಚಿಟಿಗ ಎರಡೂ ಒಂದೇ ಬೇರಿನ ಎರಡು ರೆಂಬೆಗಳಂತೆ ಕಂಡುಬರುತ್ತವೆ. ಈ ಎರಡೂ ಜನಾಂಗಗಳ ಆಚಾರ ವಿಚಾರಗಳ ಹಿನ್ನೆಲೆಯಲ್ಲಿ ಈ ಜನಾಂಗಗಳ ಮೂಲವನ್ನು ಭೇದಿಸುವ ಪ್ರಯತ್ನ ಮಾಡಬಹುದು.

**ಬರಗೂರು ವೀರಮ್ಮ :**

ವೀರತ್ವ ಕೇವಲ ಪುರುಷನಿಗೆ ಮಾತ್ರ ಸಂಬಂಧಿಸಿದ್ದಲ್ಲ. ವೀರತ್ವವನ್ನು ಮೆರೆದ ಮಹಿಳೆಯರು ನಮ್ಮ ನಾಡಿನಲ್ಲಿ ಅನೇಕರಿದ್ದಾರೆ. ಅತ್ತಿಮಬ್ಬೆ, ಕಿತ್ತೂರು ಚನ್ನಮ್ಮ, ಒನಕೆ ಓಬವ್ವ, ಬೆಳವಡಿಮಲ್ಲಮ್ಮ ಮೊದಲಾದವರು. ಪುರುಷ ರಣರಂಗದಲ್ಲಿ ಶತೃಗಳೊಡನೆ ಹೋರಾಡಿ, ಸ್ತ್ರೀಯರ ಮಾನ ಪ್ರಾಣ ರಕ್ಷಣೆಗಾಗಿ, ಜನಾಂಗದ ರಕ್ಷಣೆಗಾಗಿ ಆತ್ಮ ಬಲಿದಾನ ಮಾಡಿದವರು ವೀರರೆನಿಸಿದರೆ ಸ್ತ್ರೀ ಪುರುಷನಂತೆಯೇ ಶತೃಗಳೊಡನೆ ಹೋರಾಡಿಯೊ, ತನ್ನ ಗಂಡ ಮಡಿದಾಗ ತನ್ನ ಪತಿಯ ಜೊತೆಯಲ್ಲಿ ತಾನೂ ಚಿತೆ ಏರುವ ಮೂಲಕ ತನ್ನ ಶ್ರೇಷ್ಠತೆಯನ್ನು ಮೆರೆದು ತನ್ನ ಕುಟುಂಬ, ಜನಾಂಗ ಹಾಗೂ ಸಮಾಜದಲ್ಲಿ ಗೌರವ ಸ್ಥಾನವನ್ನು ಪಡೆದು ವೀರ ಮಹಿಳೆ ಎನಿಸಿಕೊಳ್ಳುತ್ತಾಳೆ. ಇಂತಹ ಸ್ತ್ರೀಯರ ಹೆಸರಿನಲ್ಲಿ ನೆಟ್ಟ ಕಲ್ಲುಗಳು ಇಂದು ಮಾಸ್ತಿಗಲ್ಲುಗಳೆಂದು ಹೆಸರಾಗಿ ಪೂಜಿಸಲ್ಪಡುತ್ತಿವೆ.

ಮಹಾಸತಿ ಪರಂಪರೆಯಲ್ಲಿ ಬರುವ ವೀರ ಮಹಿಳೆ ಬರಗೂರು ವೀರಮ್ಮ. ವೀರಮ್ಮಳ ಹೆಸರು ವಿಶೇಷವಾಗಿ ವಕ್ಕಲಿಗಜಾತಿಯ ಒಳಪಂಗಡವಾದ ಕುಂಚಿಟಿಗ ಜನಾಂಗದಲ್ಲಿ ಹೆಚ್ಚು ಪ್ರಚಲಿತವಿದೆ. ವೀರಮ್ಮಳ ಮೂಲ ಹೆಸರು ಮರೆಯಾಗಿ ಅವಳಿಗೆ ಜನಪದರು ವೀರಮ್ಮಳೆಂದೇ ಅನ್ವರ್ಥನಾಮ ಕೊಟ್ಟಿದ್ದಾರೆ.

ಸಿರಾ ತಾಲ್ಲೂಕಿನ ತಡಕಲೂರು ಗಂಗಣ್ಣ ವೀರಮ್ಮ ದಂಪತಿಗಳಿಗೆ ಕೊನೆಯ ಮಗಳಾಗಿ ಜನಿಸಿದ ವೀರಮ್ಮ ಹುಟ್ಟಿದಾರಂಬದಿಂದಲೂ ಅಪಶಕುನಗಳನ್ನು ಹೊತ್ತು ಬದುಕುತ್ತಾಳೆ. ಈಕೆ ನೀರು ಕುಡಿಯಲು ಹೋದರೆ ಜಲ ಬತ್ತಿಹೋಗುತ್ತದೆ. ಬೊಗಸೆಯಲ್ಲಿ ಹಾಕಿಕೊಂಡರೆ ಅದರಲ್ಲಿ ರಕ್ತ ಕಾಣುತ್ತದೆ. ಇಂತಹ ಅಪಶಕುನಗಳ ಅಸಾದೃಶ ವಾತಾವರಣದಲ್ಲಿ ಹುಟ್ಟಿ ಬೆಳೆದ ಎನ್ನುತ್ತಾರೆ ಜನಪದ ವಿದ್ವಾಂಸರಾದ ಡಾ.ಚಿಕ್ಕಣ್ಣಯಣ್ಣೆಕಟ್ಟೆ.[೧೧]

ಸಿರಾದಿಂದ ಹೇಮಾವತಿ ಮಾರ್ಗವಾಗಿ ೨೦ ಕಿ.ಮಿ ದೂರದಲ್ಲಿರುವ ಬರಗೂರು ಗ್ರಾಮದ ವೀಮ್ಮಳ ಕಥೆಯನ್ನು 'ವೀರ ಮಹೇಶ್ವರಿ ಅಮ್ಮಾಜಿಯವರ ಚರಿತೆ' ಎಂಬ ಪುಸ್ತಕದಲ್ಲಿ ಎಂ. ವೀರಪ್ಪನವರು ಕಟ್ಟಿಕೊಡುತ್ತಾರೆ.

"ತೋರ ಮುತ್ತಿನ ಹಾರದಂತಿಹ|
ವೀರ ಮಹೇಶ್ವರಿಯ ಚರಿತೆಯ
ಸಾರಿ ಬಣ್ಣಿಸಲಸಾಧ್ಯಮಾದುದು ಈ ಬಾಲಕಿಂಕರಗೆ|
ಗುರು ಕರುಣೆಯ ಪಯೋನಿಧಿ|

ಅರಿವೆ ಎನ್ನನ್ನು ಪೊರೆದು ರಕ್ಷಿಸಿ|
ಬರೆದು ಬರೆಪಿದ ಶ್ರೀ ವೇಣುಕಲ್ ಗುಡ್ಡದ ಕುಲಗುರುಗಳು||
ತಂದ ಸಂದೇಶವನೆ ಸಂಕಲ್ಪವೆಂದು|
ಒಂದನು ಯೋಚಿಸದೇ ಮನದೊಳು|
ತಂದೆ ನೀನೆ ಶ್ರೀ ಗುರುವೆಂದು ವಂದಿಸಿ ಬಹಳ ಭಕ್ತಿಯಲ್ಲಿ ಒಂದೇ||
ಮನದೊಳು ಮುದದಿಂದ|
ಇಂದು ಮುಖಿ ಶ್ರೀ ವೀರ ಮಹೇಶ್ವರಿಯ|
ಸುಂದರದ ಕೃತಿಯ ತಿದ್ದಿ ಪೊರೆವುದು ನಿಮ್ಮದೆ ಕಂದನೆನ್ನುತ ಕೈಬಿಡದೆ||"

ಹಿರಿಯೂರು ಹರಿಯಬ್ಬೆಯ ಕಾಮರಾಯನ ಎರಡನೆಯ ಮಗನಾದ ಬೊಮ್ಮಲಿಂಗಯ್ಯ ವೇಣುಕಲ್ಲು ಗುಡ್ಡದ ಪಾಳೇಗಾರ ಕಸ್ತೂರಿ ರಂಗಪ್ಪನಾಯಕನ ಗರಡಿಯಲ್ಲಿ ವಿದ್ಯೆಕಲಿತು, ಅಲ್ಲಿನ ಸೇನಾ ನಾಯಕನಾಗಿ ನೇಮಕಗೊಂಡನು, ಒಮ್ಮೆ ಪಾಳೇಗಾರ ಕಸ್ತೂರಿ ರಂಗಪ್ಪನಾಯಕ ಕೆಲಸಾರ್ಥವಾಗಿ ಶ್ರೀರಂಗಪಟ್ಟಣಕ್ಕೆ ಹೋಗಬೇಕಾಗಿ ಬಂದಾಗ ರಾಜ್ಯದ ಜವಾಬ್ದಾರಿಯನ್ನು ದಳಪತಿ ಬೊಮ್ಮಲಿಂಗಯ್ಯನಿಗೆ ವಹಿಸಿ ಹೋದನು. ವೇಣುಕಲ್ಲು ಗುಡ್ಡದ ದಾಳಿಯ ಅವಕಾಶಕ್ಕಾಗಿ ಕಾಯುತ್ತಿದ್ದ ಪಠಾಣರು ಈ ಸಂದರ್ಭವನ್ನು ಬಳಸಿಕೊಂಡು ಕೋಟೆಗೆ ಮುತ್ತಿಗೆ ಹಾಕಿದರು. ಕೋಟೆಯನ್ನು ಭೇದಿಸಲಾಗದೆ ಗೋವುಗಳನ್ನು ಸೆರೆಹಿಡಿದರು. ಇನ್ನೂ ಅನುಭವ ಸಾಲದ, ಕಿರಿಯ ವಯಸ್ಸಿನ ದಳಪತಿ ಬೊಮ್ಮಲಿಂಗಯ್ಯ ಶತ್ರು ಸೈನ್ಯವನ್ನು ಬೆನ್ನತ್ತಿ ಹೋದನು. ಇತ್ತ ಅಂತಃ ಪುರದ ರಾಣಿ ವಾಸದಲ್ಲಿ ಭಯ ಆತಂಕ ಉಂಟಾಯಿತು. ಶತ್ರು ಸೈನ್ಯದೊಂದಿಗೆ ವೀರಾವೇಶವಾಗಿ ಹೋರಾಡಿದ ದಳಪತಿ ಬೊಮ್ಮಲಿಂಗಯ್ಯ ಶತ್ರುಗಳನ್ನು ಹಿಮ್ಮೆಟ್ಟಿಸಿ ಗೋವುಗಳನ್ನು ಬಿಡಿಸಿ ತಂದನು. ಆಗ ಊರ ಹೆಬ್ಬಾಗಿಲಲ್ಲಿ ಮಹಾರಾಣಿ ಸಮೇತ ಜನರೆಲ್ಲಾ ಆರತಿ ಎತ್ತಿ ಆನಂದಬಾಷ್ಪಗಳಿಂದ ಬರಮಾಡಿಕೊಂಡರು. ಶ್ರೀರಂಗ ಪಟ್ಟಣದಿಂದ ಹಿಂತಿರುಗಿ ಬಂದ ಕಸ್ತೂರಿ ರಂಗಪ್ಪನಾಯಕ ತನ್ನ ದಳಪತಿಯ ಸಾಹಸದ ವಾರ್ತೆ ಕೇಳಿ ಅವನನ್ನು ಗೌರವಾದರಗಳಿಂದ ಸತ್ಕರಿಸಿದನು. ಈ ವಿಷಯ ನಾಡಿನಾದ್ಯಂತ ಹರಡಿ ಪಕ್ಕದ ರಾಜ್ಯ ನಿಡುಗಲ್ಲು ಸಂಸ್ಥಾನಕ್ಕೂ ಹಬ್ಬಿತು. ನಿಡುಗಲ್ಲು ಪಾಳೇಗಾರ ಸರಿಯಾದ ಸೇನಾಧಿಕಾರಿಯಿಲ್ಲದೆ ಪರಿತಪಿಸುತ್ತಿದ್ದ. ಬೊಮ್ಮಲಿಂಗಯ್ಯನ ಈ ಸಾಹಸದ ವಿಷಯ ತಿಳಿದು ತನ್ನ ಸಂಸ್ಥಾನದ ಸೇನಾಧಿಕಾರಿಯನ್ನಾಗಿ ಮಾಡಿಕೊಳ್ಳಲು ಮನಸ್ಸುಮಾಡಿ ತನ್ನ ಆಪೇಕ್ಷೆಯನ್ನು ರಕ್ತ ಸಂಬಂಧಿ ಬಾವನಾದ ಕಸ್ತೂರಿ ರಂಗಪ್ಪನಾಯಕನಿಗೆ ತಿಳಿಸಿದನು. ಕಸ್ತೂರಿ ರಂಗಪ್ಪನಾಯಕ ಈ ಆಪೇಕ್ಷೆಯನ್ನು ವಿರೋಧಿಸಿದರೂ

ಒತ್ತಾಯಕ್ಕೆ ಮಣಿದು ಒಲ್ಲದ ಮನಸ್ಸಿನಿಂದ ಒಪ್ಪಿಕೊಂಡನು. ಬೊಮ್ಮಲಿಂಗಯ್ಯ ವೇಣುಕಲ್ಲುಗುಡ್ಡ ಹಾಗೂ ನಿಡುಗಲ್ಲು ಸಂಸ್ಥಾನಗಳೆರಡರಲ್ಲೂ ಸೈನ್ಯಾಧಿಕಾರಿಯಾಗಿ ನೇಮಕಗೊಂಡನು.

ಒಮ್ಮೆ ಬೊಮ್ಮಲಿಂಗಯ್ಯ ಬೇಟೆಯಾಡಲು ಹೋದಾಗ ಮದಿಸಿದ ಕಾಡು ಹಂದಿಯೊಂದನ್ನು ಬೆನ್ನತ್ತಿ ಹೋದನು. ಅದು ಒಂದು ಜೋಳದ ಹೊಲವನ್ನು ಹೊಕ್ಕಿತು. ಸಿರಾದ ತಡಕಲೂರಿನ ಶಿವನಂಜೇಗೌಡರ ವಂಶದ ಗಂಗೇಗೌಡರ ಮಗಳು ವೀರಮ್ಮ ಜೋಳದ ಹೊಲವನ್ನು ಕಾಯುತ್ತಿದ್ದಳು. ಬಾಲ್ಯದಲ್ಲೇ ಅಣ್ಣನೊಂದಿಗೆ ಸಿರಾ ಪಾಳೇಗಾರ ವೀರರಂಗಪ್ಪ ನಾಯಕನ ಗರಡಿಯಲ್ಲಿ ವಿವಿಧ ಯುದ್ಧ ವಿದ್ಯೆಗಳನ್ನು ಕಲಿತಿದ್ದಳು. ಸಹಜವಾಗಿಯೇ ದಳಪತಿ ಬೊಮ್ಮಲಿಂಗಯ್ಯನ ಗುಣ, ಶೌರ್ಯ, ಕೀರ್ತಿಗಳನ್ನು ಕೇಳಿ ತಿಳಿದು ಆತನನ್ನು ವಿವಾಹವಾಗುವ ಬಯಕೆ ಹೊತ್ತಿದ್ದಳು. ಹಂದಿಯನ್ನು ಬೆನ್ನತ್ತಿ ಬಂದ ಬೊಮ್ಮಲಿಂಗಯ್ಯ ಜೋಳದ ಹೊಲದಲ್ಲಿ ಹಂದಿ ಹತವಾಗಿ ಬಿದ್ದಿರುವುದನ್ನು, ಅದಕ್ಕೆ ತಾಗಿದ ಬಾಣವನ್ನು ಕಂಡು ಆಶ್ಚರ್ಯಪಟ್ಟನು. ಆ ಸಮಯಕ್ಕೆ ವೀರಮ್ಮಳೂ ಅಲ್ಲಿಗೆ ಬಂದಳು. ಇಬ್ಬರಿಗೂ ಪರಸ್ಪರ ಪರಿಚಯವಾಗಿ ಪರಿಚಯ ಪ್ರೇಮಕ್ಕೆ ತಿರುಗಿತು.

ಬೊಮ್ಮಲಿಂಗಯ್ಯ ಹಾಗೂ ವೀರಮ್ಮಳ ಎರಡೂ ಕುಟುಂಬದವರಿಗೂ ಈ ವಿಷಯ ತಿಳಿದು ಪರಸ್ಪರ ಒಪ್ಪುಗೆಯಾಗಲು ಸಿರಾ ಪಾಳೇಗಾರ ರಂಗಪ್ಪನಾಯಕನೇ ಮುಂದಾಳತ್ವ ವಹಿಸಿಕೊಂಡು ವೇಣುಕಲ್ಲು ಗುಡ್ಡ, ನಿಡುಗಲ್ಲು ಹಾಗೂ ಸಿರಾ ಸಂಸ್ಥಾನಗಳ ಪಾಳೆಗಾರರ ಆಶೀರ್ವಾದದೊಂದಿಗೆ ವಿಜೃಂಭಣೆಯಿಂದ ವಿವಾಹವಾದರು.

ಉಭಯ ಸಂಸ್ಥಾನಗಳ ಕಾರ್ಯಭಾರವನ್ನು ಹೊತ್ತ ಬೊಮ್ಮಲಿಂಗಯ್ಯ ಸದಾಕಾಲ ಕರ್ತವ್ಯ ನಿರತನಾಗಿ ವಾರಕ್ಕೊಮ್ಮೆ ತನ್ನ ಊರು ಹರಿಯಬ್ಬೆಗೆ ಹೋಗಿ ಬರುತ್ತಿದ್ದನು. ತನ್ನ ದೈವಭಕ್ತಿ, ಧೈರ್ಯ, ಉದಾರಗುಣ, ರಾಜಕೀಯ ಚತುರತೆಯಿಂದ ದಿನೇ ದಿನೆ ಪ್ರಖ್ಯಾತಿ ಪಡೆದನು.

ಇವನ ಏಳಿಗೆಯನ್ನು ಸಹಿಸದ ನಿಡುಗಲ್ಲು ಸಂಸ್ಥಾನದ ಮೊದಲ ದಳಪತಿಯ ವಂಶೀಯರು ಅಸೂಯಪರರಾಗಿ ಬೊಮ್ಮಲಿಂಗಯ್ಯನಿಗೆ ಸದಾ ಕೇಡು ಬಗೆಯುತ್ತಾ ಧೈರ್ಯ ಶೌರ್ಯಗಳಲ್ಲಿ ಹಿಂಜರಿಯದ ದಳಪತಿಯನ್ನು ಎದುರಿಸಲಾರದೆ ಹಿಂಬದಿಯಿಂದ ಆತನ ನಾಶಕ್ಕೆ ಕಾರ್ಯಾಚರಣೆ ಮಾಡತೊಡಗಿದರು. ದಳಪತಿ ಬೊಮ್ಮಲಿಂಗಯ್ಯ ಒಮ್ಮೆ ತನ್ನ ಊರಿಗೆ ವಿಶ್ರಾಂತಿ ಪಡೆಯಲು ಬಂದಾಗ ಅವನನ್ನು ಮುಗಿಸಲು ಸಂಚುಕೋರರು ಯೋಜನೆ ರೂಪಿಸಿದರು. ವಿಹಾರಕ್ಕೆಂದು ಅಡವಿಗೆ ಬಂದ ದಳಪತಿ ಒಬ್ಬಂಟಿಯಾಗಿ ಸುತ್ತಾಡುತ್ತಿರುವಾಗ ನಿರಾಯುಧನಾಗಿದ್ದ ಬೊಮ್ಮಲಿಂಗಯ್ಯನ ಮೇಲೆ ಬಿದ್ದ ಸಂಚುಕೋರರು "ನೀನು ನಮ್ಮ ದಳಪತಿಯ ಅಧಿಕಾರವನ್ನು ನಮಗೆ ಬಿಟ್ಟುಕೊಡು ಇಲ್ಲವಾದರೆ ನಿನ್ನನ್ನು ಕೊಲ್ಲುತ್ತೇವೆ" ಎಂದು ಹೇಳಿದರು. ದಳಪತಿ

ಬೊಮ್ಮಲಿಂಗಯ್ಯ ಹೇಡಿಗಳಾದ ನೀವು ಕೊಲ್ಲುವುದಾಗಿ ಬೆದರಿಸಿದರೆ ಹೆದರುವವನಲ್ಲ, ಸತ್ತರೆ ವೀರಸ್ವರ್ಗ ಅದಕ್ಕಾಗಿ ಚಿಂತೆಯಿಲ್ಲ ಎಂದು ಘರ್ಜಿಸಿದನು. "ನೀನು ಬದುಕಿದ್ದರೆ ನಮಗೆ ದಳಪತಿ ಸ್ಥಾನವು ದಕ್ಕುವುದಿಲ್ಲ ಆದ್ದರಿಂದ ನಿನಗೆ ಸಾವು ಖಚಿತ ಎಂದು ಹೇಳಿ ಅಧರ್ಮದಿಂದ ಕೈ, ಕಾಲು, ರುಂಡ ಕತ್ತರಿಸಿ ಹಾಕಿದರು.

ಎರಡೂ ಸಂಸ್ಥಾನಗಳಿಗೂ ವಿಷಯ ತಿಳಿದು ದಿಗ್ಭ್ರಮೆಗೊಂಡರು. ಬೊಮ್ಮಲಿಂಗಯ್ಯನ ಸಾವಿನಿಂದ ಕೊರಗಿದ ತಂದೆ ತಾಯಿಗಳು ಇಹಲೋಕ ತ್ಯಜಿಸಿದರು. ಮಡದಿ ವೀರಮ್ಮ ಕಂಗಾಲಾದಳು. ಕಂಗೆಟ್ಟ ವೀರಮ್ಮ ದಿನೇದಿನೆ ಅಂತರ್ಮುಖಿಯಾದಳು. ಅತ್ತಿಗೆ ನಾದಿನಿಯರು "ಇವಳನ್ನು ಮದುವೆಯಾದ್ದರಿಂದಲೇ ಬೊಮ್ಮಲಿಂಗಯ್ಯ ಹತ್ಯೆಯಾದ, ಇವಳ ಕಾಲುಗುಣ ಸರಿಯಿಲ್ಲ, ಎಂದು ಚುಚ್ಚು ಮಾತಾಡಿದರು. ವೀರಮ್ಮಳಿಗೆ ಅನಿಷ್ಟ, ದರಿದ್ರಳ ಪಟ್ಟಕಟ್ಟಿದರು. "ನೀನು ದರಿದ್ರದವಳು. ನಿನ್ನ ಕೈಹಿಡಿದು ಬೊಮ್ಮಲಿಂಗಯ್ಯ ಸತ್ತನು. ಅವನ ವ್ಯಥೆಯಲ್ಲಿ ನಮ್ಮ ತಂದೆ ತಾಯಿಗಳೂ ಸತ್ತರು. ಎಲ್ಲವೂ ನಿನ್ನಿಂದ" ಮುಂತಾಗಿ ಹಂಗಿಸಿದರು. ಅತ್ತಿಗೆಯರು ವೀರಮ್ಮನನ್ನು ಯಾವುದೋ ನೆಪತೆಗೆದು ಹೊಡೆಯುತ್ತಿರುವಾಗ ಮಧ್ಯಬಂದ ವೀರಮ್ಮಳ ಮಗುವಿಗೆ ಉರಿವ ಕೊಳ್ಳಿಯಿಂದ ಬರೆ ಎಳೆದರು. ಮಗುವಿಗಾದ ನೋವು, ಮನೆಯವರಿಂದ ತನಗಾಗುತ್ತಿರುವ ಹಿಂಸೆಯನ್ನು ಸಹಿಸದೆ ಕರುಳು ಕಿತ್ತಂತಾಗಿ, ಹೆತ್ತೊಡಲು ನೊಂದು ಪತಿಯೊಡನೆ ಸಹಗಮನದ ನಿರ್ಧಾರಕ್ಕೆ ಬರುತ್ತಾಳೆ.

ಸಹಗಮನಕ್ಕೆ ಸರಿಯಾದ ಜಾಗವನ್ನು ಹರಸುತ್ತಾ ಬರಗೂರಿಗೆ ಬಂದು ಇದೇ ಸೂಕ್ತವಾದ ಸ್ಥಳವೆಂದು ತೀರ್ಮಾನಿಸಿ ತನ್ನ ತವರು ಮನೆ ಹಾಗೂ ಗಂಡನ ಮನೆಯವರಿಗೆ ತಾನು ಸತಿಯಾಗುತ್ತಿರುವ ವಿಷಯವನ್ನು ಓಲೆಕಾರರ ಮೂಲಕ ತಲುಪಿಸಿ ತನಗೆ ಮಡಿಲಕ್ಕಿ ತರಬೇಕೆಂದು ಕೇಳಿಕೊಂಡಳು ಎಲ್ಲಾ ಬಂದು ಬಾಂಧವರು ಈ ವಿಚಾರದಿಂದ ಆತಂಕಗೊಂಡು ಮಡಿಲಕ್ಕಿ ಸಮೇತ ಬರಗೂರಿಗೆ ಬಂದರು. ಆದರೆ ಗಂಡನ ಮನೆಯವರು ಯಾರೂ ಬರಲಿಲ್ಲ ಇದರಿಂದ ನೊಂದ ವೀರಮ್ಮ ಗಂಡನ ಮನೆಯವರಿಗೆ

"ಕಲ್ಲಳ್ಳಿ ಹಾಳಾಗಿ|

ಕದಿರೇಹಳ್ಳಿ ಊರಾಗಿ

ಬರಗೂರು ಚನ್ನಪಟ್ಟಣವಾಗಲಿ"[೫೨]

ಎಂದು ಶಪಿಸಿ, ಸಹಗಮನ ಮಾಡಿ ಪತಿಯ ಸಾನಿಧ್ಯ ಪಡೆದಳು. ಕಲ್ಲಹಳ್ಳಿ ವೀರಮ್ಮಳ ಗಂಡನ ಸಂಬಂಧಿಗಳು ವಾಸವಿದ್ದ ಹಳ್ಳಿ. ಮಾನವ ಜಲ್ಮತಳೆದು ದೃಢ ಭಕ್ತಿಯಿಂದ ಬಂದ ಕಷ್ಟಗಳನ್ನೆಲ್ಲಾ ಸ್ವೀಕರಿಸಿ ಕೊನೆಗೆ ಗಂಡನೊಂದಿಗೆ ಸಹಗಮನ ಮಾಡಿ ಸ್ಥಿರವಾದ ಪದವಿಯನ್ನು

ಪಡೆದ ವೀರಮ್ಮಳ ಬದುಕಿನ ವ್ಯಥೆಯ ಕತೆಯೇ ಬರಗೂರು ವೀರಮ್ಮಳ ಸಾಹಸ ಯಶೋಗಾಥೆ. ಬದುಕಿನಲ್ಲಿ ಬಂದ ಕಷ್ಟ ಕಾರ್ಪಣ್ಯ, ಧೀರ ದಳಪತಿಯ ಮಡದಿಯಾಗಿ ಮೆರೆದು, ಕೊನೆಯಲ್ಲಿ ತನ್ನ ಬಂಧು ಬಾಂಧವರಿಂದಲೇ ಹಿಂಸೆಗೆ ಒಳಗಾಗಿ ದರಿದ್ರದ ಪಟ್ಟ ಹೊತ್ತು, ನಿಂದನೆಗೆ ಗುರಿಯಾದ ಈ ಬದುಕು ಯಾರ ಮನಸ್ಸನ್ನಾದರೂ ಕರಗಿಸಬಲ್ಲದು. ವೀರಮ್ಮ ಇಂದು ಬರಗೂರಿನ ಗ್ರಾಮದೇವತೆಯಾಗಿ, ಕುಂಚಿಟಿಗ ಜನಾಂಗದ ಆವಿನ ಗೋತ್ರದವರಿಗೆ (ಆಕಳು) ಮನೆದೇವರಾಗಿ ಸಹಸ್ರಾರು ಭಕ್ತಾದಿಗಳನ್ನು ಪಡೆದು ವರ್ಷಕ್ಕೊಮ್ಮೆ ವಿಜೃಂಭಣೆಯ ಉತ್ಸವ ಪಡೆಯುತ್ತಾಳೆ.

### ದಿಬ್ಬದ ವೀರಬೊಮ್ಮಣ್ಣ :

ವೀರಬೊಮ್ಮಣ್ಣ ಸಿರಾ ಸೀಮೆಯಲ್ಲಿ, ಅದರಲ್ಲೂ ಗೌಡಗೆರೆ ಹಾಗೂ ಹುಲಿಕುಂಟೆ ಹೋಬಳಿಗಳಲ್ಲಿ ಹೆಚ್ಚು ಜನಪ್ರೀಯತೆ ಪಡೆದ ಸ್ಥಳೀಯ ಸಾಂಸ್ಕೃತಿಕ ವೀರ. ಸಿರಾದ ಗೌಡಗೆರೆ ಹೋಬಳಿ ವೀರಬೊಮ್ಮನಹಳ್ಳಿಯ ಹೊರ ವಲಯದಲ್ಲಿ ಒಂದು ದಿಬ್ಬವಿದೆ ಅಲ್ಲಿ ಎಳೆಂಟು ವೀರಗಲ್ಲುಗಳು ಒಟ್ಟೊಟ್ಟಿಗೆ ಕಂಡುಬರುತ್ತವೆ ಇದನ್ನು 'ವೀರಬೊಮ್ಮನ ಗುಡಿ,' 'ದಿಬ್ಬದ ವೀರಬೊಮ್ಮಣ್ಣ' ಎಂದು ಕರೆಯುತ್ತಾರೆ. ವೀರಬೊಮ್ಮಣ್ಣ ವಕ್ಕಲಿಗರ ಒಂದು ಪಂಗಡವಾದ ಕುಂಚಿಟಿಗರ ಅಳುವನವರ ಕುಲದ ಮನೆದೈವವಾಗಿದ್ದಾನೆ. ವೀರಬೊಮ್ಮಣ್ಣ ಒಬ್ಬ ಐತಿಹಾಸಿಕ ವ್ಯಕ್ತಿ. ಅವಿವಾಹಿತನಾಗಿದ್ದು ತನ್ನ ಪವಾಡಗಳಿಂದ ಹಾಗೂ ತನ್ನ ವೀರತ್ವದಿಂದ ಸಿರಾ ಭಾಗದ ಸುತ್ತಮುತ್ತಲ ಪ್ರದೇಶದಲ್ಲಿ ಆರಾಧ್ಯ ದೈವವಾಗಿ ಇಂದು ಜಾತ್ರೆ ಉತ್ಸವಗಳನ್ನು ಮಾಡಲಾಗುತ್ತಿದೆ.

ಶಿವಣ್ಣ, ಗಂಗಣ್ಣ, ಬೊಮ್ಮಣ್ಣ, ಲಿಂಗಣ್ಣ ಎಂದು ನಾಲ್ಕು ಜನ ಅಣ್ಣ ತಮ್ಮಂದಿರು ಇವರಲ್ಲಿ ಒಬ್ಬನನ್ನು ಪಕ್ಕದ ಯಾದಲಡಕು ಗ್ರಾಮದ ಪೂಜಾರರ ಮನೆತನದ ಕುಂಚಿಟಿಗ ಎಮ್ಮೇನವರು ಸಾಕಿಕೊಂಡಿದ್ದರು. ಇವರ ಮನೆಯಲ್ಲೇ ನಾಗಮ್ಮ ಎಂಬ ಕನ್ಯೆಯನ್ನು ಇವನಿಗೆ ಕೊಟ್ಟು ವಿವಾಹ ಮಾಡಿದ್ದರು. ಕಾಲಾನಂತರ ನಾಗಮ್ಮ ಒಂದು ಗಂಡು ಮಗುವಿಗೆ ಜನ್ಮವಿತ್ತಳು. ಒಮ್ಮೆ ಮಳೆಗಾಲದಲ್ಲಿ ದನಗಳನ್ನು ಕಟ್ಟಿ ಸೆಜ್ಜೆ ಬಿತ್ತಲು ಮಗುವನ್ನು ಮನೆಯಲ್ಲಿಯೇ ಬಿಟ್ಟು ಹೊಲಕ್ಕೆ ಹೋದಳು. ರಾತ್ರಿ ಹನ್ನೆರಡು ಕಂಡುಗ ಸೆಜ್ಜೆ ಬಿತ್ತಿ ಬೇಳಗಿನಜಾವ ಕೋಳಿ ಕೂಗುವ ಹೊತ್ತಿಗೆ ಮನೆಗೆ ಬರುತ್ತಾಳೆ. ಇತ್ತ ಮನೆಯಲ್ಲಿ ಮಗು ರಂಪಮಾಡುತ್ತಿರುತ್ತದೆ. ಕೈಕಾಲು ತೊಳೆದುಕೊಂಡು ಹಾಲುಕೊಡಲು ಹೋದಾಗ ಆಕೆ ರಾತ್ರಿಯೆಲ್ಲಾ ಹೊಲದಲ್ಲಿ ಬಿತ್ತನೆ ಕೆಲಸ ಮಾಡಿದ್ದರಿಂದ ಎದೆಯಲ್ಲಿ ಹಾಲಿರುವುದಿಲ್ಲ. ಅಳುತ್ತಿರುವ ಮಗುವನ್ನು ಸಂತೈಸುತ್ತಾ ತಾಯಿ ನಾಗಮ್ಮ 'ನಿಮ್ಮ ಅಪ್ಪಗಳು ಗೋವು ಆಳಿರುವರೇ ಹಾಲುಕೊಡಲೇ? ನನ್ನ ನಾಲಿಗೆಯಾದರೂ ಸೀಳಿ ರಕ್ತ ಹುಯ್ಯಲೇ? ಎನ್ನುತ್ತಿದ್ದಳು. ಅದೇ ಸಮಯಕ್ಕೆ ಮೈದುನ ಬೊಮ್ಮಣ್ಣ ಮುಟ್ಟಿ

ಹೆಗಲಿಗೆ ಹಾಕಿಕೊಂಡು ಹೊಲದಿಂದ ಮನೆಗೆ ಬಂದ. ನಾಗಮ್ಮನ ಈ ಕರುಳಿರಿಯುವ ಮಾತುಗಳನ್ನು ಕೇಳಿಸಿಕೊಂಡು ಹೆಗಲ ಮೇಲಿನ ಮಟ್ಟನ್ನು ಪಡುವಲ ದಿಕ್ಕಿಗೆ ಎಸೆದು 'ನಾನು ಗೊಲ್ಲರ ಮನೆಯಲ್ಲಾದರೂ ಸಂಬಳ ಇದ್ದು ಗೋವು ಪಡೆಯದ ಹೊರತು ವಾಪಸ್ ಬರುವುದಿಲ್ಲ ಎಂದು ಅದೇ ದಿಕ್ಕಿಗೆ ಹೊರಟು ಹೋದನು. ಗೊಲ್ಲರ ಹಟ್ಟಿಯ ಹೊರಭಾಗದ ಬಾವಿಯ ಬಳಿ ಕುಳಿತುಕೊಂಡನು. ಗೊಲ್ಲ ಹೆಂಗಸರು ಆ ಬಾವಿಯ ಬಳಿಗೆ ನೀರಿಗೆ ಬಂದರು. ಇವನನ್ನು ಕಂಡು 'ದಿನವೂ ನೀರಿಗೆ ಬರುತ್ತಿದ್ದಾಗ ಯಾರೂ ಕುಳಿತಿರುತ್ತಿರಲಿಲ್ಲ, ಇಂದು ಯಾರೋ ಒಬ್ಬ ಕುಳಿತಿದ್ದಾನೆ. ಈತ ಯಾರು, ಏನು, ಎತ್ತ ಎಂದು ಮಾತಾಡಿಸೋಣವೆ" ಎಂದು ಮಾತನಾಡಿಕೊಳ್ಳುತ್ತಿದ್ದರು. ತಿರುಗಿ ಮತ್ತೆ ನೀರಿಗೆ ಬಂದಾಗ 'ಯಾವ ಊರು? ಎಲ್ಲಿಂದ ಬಂದಿರುವೆ?' ಎಂದು ವಿಚಾರಿಸಿದರು. ವೀರಬೊಮ್ಮಣ್ಣ ಯಾವುದೋ ಒಂದೂರು ಎಂದ. ನಮ್ಮ ಮನೆಯಲ್ಲಿ ಸಂಬಳ ಇರುವೆಯಾ ಎಂದು ಕೇಳಿದಾಗ ಎರಡು ಪಡಿ ಜೋಳಕ್ಕೆ ಇರುತ್ತೇನೆ ಎಂದನು. ಆ ಹೆಂಗಸರು ಮತ್ತೆ ನೀರಿಗೆ ಬರುವ ಹೊತ್ತಿಗೆ ತನ್ನ ಜಡೆಯನ್ನು ನೀರಲ್ಲಿ ಹರಡಿ ಬಿಟ್ಟಿದ್ದನು. ಅವು ಹಾವಿನಂತೆ ನೀರನ್ನು ತುಂಬುವ ಗಡಿಗೆಯಲ್ಲಿ ಬರುತ್ತಿದ್ದವು. ಆಗ ಭಯಗೊಂಡ ಗೊಲ್ಲ ಹೆಂಗಸರು ನೀರು ತುಂಬಿಕೊಳ್ಳಲಾರದೆ ಮನೆಗೆ ಹೋಗಿ ನಡೆದ ವಿಚಾರವನ್ನು ತಿಳಿಸಿದರು. ಬೊಮ್ಮಣ್ಣನನ್ನು ಕಾಣಲು ಊರಿನ ಜನ ಗೌಡನೊಂದಿಗೆ ಬಂದರು. ಅವನನ್ನು ಹಟ್ಟಿಯೊಳಕ್ಕೆ ಕರೆದುಕೊಂಡು ಹೋಗಿ ಹಟ್ಟಿಯ ಮುಂಭಾಗದಲ್ಲಿ ಕುಳ್ಳಿರಿಸಿ ಗೌಡರ ಗೋವುಗಳನ್ನು ಕಾಯ್ದುಕೊಂಡಿರಬೇಕೆಂದು ಕೇಳಿದರು. ಅದಕ್ಕೆ ಬೊಮ್ಮಣ್ಣ ನಾನು ಊರಿನ ಎಲ್ಲರ ದನಗಳನ್ನು ಮಾತ್ರ ಕಾಯ್ದುಕೊಂಡಿರಲಾರೆ, ಊರಿನ ಒಬ್ಬರ ದನಗಳನ್ನು ಕಾಯುತ್ತೇನೆ ಎಂದನು. ಅವರೂ ಒಪ್ಪಿಗೆ ಕೊಟ್ಟರು. ಹೊಸಬಟ್ಟೆ ಹೊಲಿಸಿ, ಚೌರ ಮಾಡಿಸಿ, ಸ್ನಾನ, ಊಟ ಮಾಡಿಸಿ ಕರಿಯ ಕಂಬಳಿ ಕೊಟ್ಟು ದನಗಳನ್ನು ಕಾಯಲು ಬೆಳ್ಳಾರದ ಕಣಿವೆಗೆ ಕಳುಹಿಸುತ್ತಾರೆ. ಮೂರು ವರ್ಷಗಳ ಕಾಲ ಪಶುಪಾಲಕನಾದ ಬೊಮ್ಮಣ್ಣನ ಮಹಿಮೆಯಿಂದ ಕಂದು ಹಾಕಿಕೊಂಡಿದ್ದ ಹಸುಗಳೆಲ್ಲಾ ಗರ್ಭಧರಿಸಿ ಕರು ಹಾಕಿದವು. ಒಮ್ಮೆ ಗೊಲ್ಲರಿಗೆ ಕೊಟ್ಟಿಗೆ ಹಾಲುಹೊಯ್ಯುವ ಹಬ್ಬ ಬಂದಿತು. ಹಬ್ಬಕ್ಕೆ ಬೊಮ್ಮಣ್ಣ 'ನನಗೆ ದನ ಜಾಸ್ತಿ, ಬಿಡುವಿಲ್ಲ" ಎಂದನು. ನೀನು ಬಂದೆ ಬರಬೇಕು ಎಂದು ಒತ್ತಾಯಿಸಿದಾಗ ಪಂಚಕಲ್ಯಾಣಿ ಹಸುವಿನಲ್ಲಿ ಎರಡು ಕಾಗಡಿ ಹಾಲು ಮನೆಗೆ ಕೊಟ್ಟು, ಮಧ್ಯಾನವೇ ದೇವರಿಗೆ ಹೋಗಲು ದನಗಳನ್ನು ದೊಡ್ಡ ರೊಪ್ಪದಲ್ಲಿ ಕೂಡಿ ಬೀಗಹಾಕಿ ಎಲ್ಲರ ಜೊತೆಯಲ್ಲಿ ದೇವರಿಗೆ ಹೋದನು. ತೀರ್ಥ, ಪ್ರಸಾದ ಪಡೆದು 'ನಾನು ಈಗಲೇ ಹೋಗಬೇಕು' ಎಂದು ದನಗಳ ರೊಪ್ಪಕ್ಕೆ ಬಂದು ದನಗಳನ್ನು ಹೊಡೆದುಕೊಂಡು ಹೊರಟನು. ಇತ್ತ ದೇವಸ್ಥಾನದ ಹತ್ತಿರ ಊರ ಗೌಡನ ಸೊಸೆಗೆ ಊರಿನ ಎಲ್ಲಾ ದನಗಳನ್ನು ಯಾರೋ ಕದ್ದು ಹೊಡೆದುಕೊಂಡು ಹೋದಂತೆ ಭಾಸವಾಯಿತು ಎಂದು ಹೇಳಿದಳು. ಆದರೆ ಮನೆಯವರು

ನಂಬಲಿಲ್ಲ. ಬೊಮ್ಮಣ್ಣ ದನಗಳನ್ನು ಹೊಡೆದುಕೊಂಡು ಕುನ್ನಿಕೆರೆ ತೊರೆ ಮಗ್ಗುಲಿಗೆ ಬರುವಷ್ಟರಲ್ಲಿ ತೊರೆ ಉಕ್ಕಿ ಹರಿಯುತ್ತಿತ್ತು. ಇತ್ತ ಹಿಂದೆ ಗೊಲ್ಲರು ಬರುತ್ತಿದ್ದಾರೆಂದು ಅರಿತ ಬೊಮ್ಮಣ್ಣ ಗಂಗೆಯನ್ನು ಕುರಿತು ಅತ್ತಲಗಂಗೆ ಅತ್ತಲಾಗಿ, ಇತ್ತಲಗಂಗೆ ಇತ್ತಲಾಗಿ, ಆ ದಡಕ್ಕೆ ದನದ ಹಿಂಡನ್ನು ದಾಟಿಸಿದರೆ ನನ್ನ ಶಿರವನ್ನು ತೆಗೆದು ಅಂಗೈಯಲ್ಲಿಟ್ಟು ನಿನಗೆ ಆರತಿ ಮಾಡುತ್ತೇನೆ ಎಂದು ಹರಕೆ ಮಾಡಿಕೊಳ್ಳುತ್ತಾನೆ. ಅದರಂತೆ ಗಂಗೆ ದಾರಿ ಬಿಟ್ಟಳು. ದನಗಳನ್ನು ಮುಂದೆ ಹೊಡೆದಾಗ ದನ ಹೊಳೆದಾಟಿದವು. ನಂತರ ಗಂಗೆ ಮೊದಲಿನಂತೆ ಕೂಡಿಕೊಂಡು ಹರಿದಳು. ಇತ್ತ ಕಡೆಯ ದಡದಲ್ಲಿ ನಿಂತ ಗೊಲ್ಲರು 'ನಮ್ಮ ಮನೆಯಲ್ಲಿ ಉಂಡು, ಉಟ್ಟು, ನಮ್ಮ ಹಿಂಡಿನ ದನಗಳನ್ನೇ ಕದ್ದೆಯಲ್ಲಾ ಬೊಮ್ಮಣ್ಣ' ಎಂದರು "ನಿಮ್ಮ ದನಗಳಾದರೆ ನೀವು ಕರೆಯಿರಿ ಬಂದರೆ ಹೊಡೆದುಕೊಂಡು ಹೋಗಿ, ಎಂದ. ತಾವು ಮೋಸ ಹೋದೆವು ಎಂದುಕೊಂಡ ಗೊಲ್ಲರು ಹೊಳೆ ದಾಟಲಾರದೆ ವಾಪಸ್ಸಾದರು. ಗಂಗೆಗೆ ಕೊಟ್ಟ ಮಾತಿನಂತೆ ವೀರ ಬೊಮ್ಮಣ್ಣ ನೆಡೆದುಕೊಳ್ಳುತ್ತಾನೆ. ಅಲ್ಲಿಂದ ಮುಂದೆ ಅವನ ರುಂಡ ಹುರುಳಿಕೊಂಡು ತಡಕಲೂರಿಗೆ ಬಂದು ಅಲ್ಲಿನ ಬಸವಣ್ಣನನ್ನು ತನಗೆ ಉಳಿದುಕೊಳ್ಳಲು ಜಾಗ ಕೊಡುವಂತೆ ಕೇಳಿತು. ಆಗ ಬಸವಣ್ಣ ನೀನು ಯಾರ ದನಗಳನ್ನು ಕದ್ದುಕೊಂಡು ಬಂದಿರುವೆಯೋ ಯಾರ ತಲೆಗೆ ತರುತ್ತೀಯೋ, ಜಾಗ ಗೊಡುವುದಿಲ್ಲ ಎಂದಿತು. ಅಲ್ಲಿಂದ ಬರಗೂರಿಗೆ ಬಂದು ತಂಗಿ ವೀರಮ್ಮನನ್ನು ನಿನ್ನ ಜಾಗದಲ್ಲಿ ನನಗೆ ಸ್ವಲ್ಪ ಜಾಗ ಕೊಡು ಎಂದು ಕೇಳಿತು. ಆಕೆಯೂ ಅದೇ ರೀತಿ ಜಾಗ ಇಲ್ಲವೆಂದಳು. ಕೊನೆಗೆ ಯಾದಲಡಕಿನ ರಂಗನಾಥನ ಬಳಿಗೆ ಬಂದು ಜಾಗ ಕೇಳಿದಾಗ ಈ ಊರಿನ ಹೊರಭಾಗದ ದಿಬ್ಬದಬಳಿ ಜಾಗವಿದೆ ಅಲ್ಲಿ ಹೋಗಿ ಆವಿನಗೂಡಿನ ಸಮೇತ ನೆಲೆಸು ಎಂದು ಹೇಳಿದನು. ಅದರಂತೆ ವೀರಬೊಮ್ಮಣ್ಣ ದಿಬ್ಬದ ಬಳಿ ಬಂದು ನೆಲೆನಿಂತನು. ಆ ಸ್ಥಳವೇ ಇಂದು ದಿಬ್ಬದ ವೀರಬೊಮ್ಮಣ್ಣನ ಮೂಲ ನೆಲೆಯಾಗಿದೆ.

**ಗುರುಗುಂಡ ಬ್ರಹ್ಮೇಶ್ವರ :**

ಸಿರಾ ತಾಲ್ಲೂಕಿನ ಪಟ್ಟನಾಯಕನ ಹಳ್ಳಿಯಲ್ಲಿರುವ ಶ್ರೀ ಗುರುಗುಂಡ ಬ್ರಹ್ಮೇಶ್ವರ ಸಂಸ್ಥಾನ ಮಠ ಅವಧೂತ ಪರಂಪರೆಯ ಶೂದ್ರ ವರ್ಗದ ಮಠ. ಈ ಮಠದ ರೂವಾರಿಗಳೇ ಶ್ರೀ ಗುರುಗುಂಡ ಬ್ರಹ್ಮೇಶ್ವರರು, ಇವರು ಶ್ರೀ ನೀಲಗಿರಿ ಸ್ವಾಮಿಗಳ ಶಿಷ್ಯರು. ಇವರು ಮೂಲತಃ ಕುಂಬಾರ ಜಾತಿಯವರು. ಇಂದಿಗೂ ಸಹ ಕುಂಬಾರ ಜನಾಂಗದಲ್ಲಿ 'ಗುಂಡ' ಎಂಬ ಹೆಸರಿನ ಪದ ಬಳಕೆಯಲ್ಲಿರುವುದನ್ನು ಕಾಣಬಹುದು. ಗುರುಗುಂಡರ ಮೂಲ ಹೆಸರು 'ಗುರಪ್ಪ' ಎಂದು ಇವರು ನೀಲಗಿರಿ ಸ್ವಾಮಿಗಳ ಶಿಷ್ಯರಾದನಂತರ ಗುರುಗುಂಡರಾದರೆಂದು ಪ್ರತೀತಿ ಇದೆ.

ಈ ಮಠ ಸ್ಥಾಪನೆಗೆ ಕಾರಣರಾದ ಗುರುಗುಂಡರು ಹಾಗೂ ಅವರ ಗುರು ನೀಲಗಿರಿ ಸ್ವಾಮಿಗಳಿಗೆ ಸಂಬಂಧಿಸಿದ ಒಂದು ಕಥೆ ಜನಪದರಲ್ಲಿದೆ.

ಮೈಸೂರು ಮಹಾರಾಜರು ಮದ್ರಾಸಿಗೆ ನೀಲಗಿರಿ ಬೆಟ್ಟಗಳ ಮೂಲಕ ರಸ್ತೆ ಮಾಡಿಸುತ್ತಿರುವಾಗ ಆ ಬೆಟ್ಟದಲ್ಲಿ ರಸ್ತೆಗೆ ಅಡ್ಡವಾಗಿದ್ದ ಹುತ್ತವೊಂದನ್ನು ಅಗೆಯುವಾಗ ಹುತ್ತದಲ್ಲಿ ತಪಸ್ವಿಗಳೊಬ್ಬರು ಗೋಚರಿಸಿದರು. ವಿಷಯ ತಿಳಿದ ಮಹಾರಾಜರು ಬಂದು ತಮ್ಮಿಂದಾದ ಪ್ರಮಾದಕ್ಕೆ ಋಷಿಗಳಿಲ್ಲಿ ಕ್ಷಮೆಯಾಚಿಸಿದರು. ಈ ತಪಸ್ವಿಯು ಅವರ ತಪ್ಪನ್ನು ಮನ್ನಿಸಿ ಅವರ ಕೋರಿಕೆಯಂತೆ ಅರಮನೆಗೆ ಬಂದು ಧರ್ಮೋಪದೇಶ ನೀಡಿ ದೇವನಹಳ್ಳಿಯ ವಿಜಯಪುರಕ್ಕೆ ಬಂದು ನೆಲೆಸಿದರು.ಅಲ್ಲಿ ಕುಂಬಾರ ಮತದ 'ಗುರಪ್ಪ' ಎಂಬುವರು ನೀಲಗಿರಿ ಸ್ವಾಮಿಗಳ ಶಿಷ್ಯರಾದರು. ಕಾಲಕ್ರಮೇಣ ನೀಲಗಿರಿ ಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಗುರಪ್ಪನವರು 'ಗುರುಗುಂಡ ಬ್ರಹ್ಮೇಶ್ವರ' ಎಂಬುದಾಗಿ ನಾಮಕರಣಗೊಂಡರು. ನೀಲಗಿರಿ ಸ್ವಾಮಿಗಳು ಸಮಾದಿಯಾದ ಸ್ಥಳದಲ್ಲಿ ೧೦೧ ಲಿಂಗಗಳನ್ನು ಪ್ರತಿಷ್ಠಾಪಿಸಿ ಮಠ ಕಟ್ಟಿದರು. ಶ್ರೀ ಗುರುಗುಂಡರು ಅನೇಕ ಶಿಷ್ಯರನ್ನು ಹೊಂದಿದ್ದು ಅವರಲ್ಲಿ 'ನಂಜಪ್ಪ' ನೆಚ್ಚಿನ ಶಿಷ್ಯನಾಗಿದ್ದ. ಗುರುಗುಂಡರು ಧರ್ಮಾರ್ಥವಾಗಿ ನಂದಿ ಬೆಟ್ಟದ ಮುಖಾಂತರ ಮಧುಗಿರಿಗೆ ಬಂದು ಮುಂದೆ ಮಡಕಶಿರಾ ತಾಲ್ಲೂಕು ಹೇಮಾವತಿಯಲ್ಲಿ ಕೆಲದಿನಗಳು ಇದ್ದು ನಂತರ ಈಗಿನ ಪಟ್ಟನಾಯಕನಹಳ್ಳಿ ಆಗಿರುವ 'ಸ್ಪಟಿಕಪುರಿ'ಗೆ ಬಂದು ನೆಲೆಸಿದರು. ಭಕ್ತರ ಅಪೇಕ್ಷೆಯಂತೆ ಅಲ್ಲಿಯೇ ನೆಲೆಸಿದರು. ದೇವನಹಳ್ಳಿ ಸಮೀಪದ ವಿಜಯಪುರದಲ್ಲಿದ್ದ ನೆಚ್ಚಿನ ಶಿಷ್ಯ ನಂಜಪ್ಪನನ್ನು ಕರೆಸಿಕೊಂಡರು. ಸ್ಪಟಿಕಪುರಿಯಲ್ಲಿ ಮಠವೊಂದನ್ನು ನಂಜಪ್ಪ ಶಿಷ್ಯನ ಮೂಲಕ ಕಟ್ಟಿಸಿದರು. ಹೀಗೆ ಸ್ಪಟಿಕಪುರಿಯಲ್ಲಿ ಮಠ ಸ್ಥಾಪಿಸಿ ಧರ್ಮೋಪದೇಶ ನೀಡಿ ಅಪಾರ ಭಕ್ತ ಸಮೂಹವನ್ನು ಪಡೆದರು. ವಿವಿಧ ಪವಾಡಗಳನ್ನು ಮಾಡಿ ಈ ಪ್ರದೇಶದ ಜನರ ಮನದಲ್ಲಿ ಭಕ್ತಿ, ಗೌರವ ಮೂಡುವಂತೆ, ಶಾಂತಿ ನೆಲೆಸುವಂತೆ ಮಾಡಿದರು. ಕಾಲಾಂತರದಲ್ಲಿ ಗುರುಗುಂಡರು ಕಾಯ ತ್ಯಜಿಸಿದಾಗ ಅವರ ಶಿಷ್ಯ ನಂಜಪ್ಪ 'ನಂಜಾವಧೂತ'ರಾಗಿ ಗುರುಗುಂಡ ಬ್ರಹ್ಮೇಶ್ವರ ಹಾಗೂ ನೀಲಗಿರಿ ಸ್ವಾಮಿಗಳ ಹೆಸರಿನಲ್ಲಿ ಮಠವನ್ನು ಕಟ್ಟಿಸಿ ಮುನ್ನಡೆಸಿಕೊಂಡು ಬಂದರು.

ಹೀಗೆ ಗುರುಗುಂಡ ಬ್ರಹ್ಮೇಶ್ವರರ ಪ್ರೇರಣೆ ಪ್ರೋತ್ಸಾಹ, ಪರಿಶ್ರಮಗಳಿಂದ ಸ್ಪಟಿಕ ಪುರಿಯ ಗುರುಗುಂಡ ಬ್ರಹ್ಮೇಶ್ವರ ಸಂಸ್ಥಾನವೆಂಬ ಅವಧೂತ ಪರಂಪರೆಯ ಶೂದ್ರ ಮಠ ಅಸ್ತಿತ್ವವನ್ನು ಪಡೆದು ಪ್ರಮುಖ ಧಾರ್ಮಿಕ ಕೇಂದ್ರವಾಯಿತು. ನಂಜಾವಧೂತರ ನಂತರ ಮಠದ ಗುರು ಪರಂಪರೆ ಬೆಳೆದುಕೊಳ್ಳುತ್ತಾ ಬಂದು ಶ್ರೀ ಕುಮಾರಾವಧೂತರ ನಂತರ ಈಗಿನ ಶ್ರೀ ನಂಜಾವಧೂತರು ಪೀಠಾಧ್ಯಕ್ಷರಾಗಿ ಮಠವನ್ನು ಮುನ್ನಡೆಸುತ್ತಿದ್ದಾರೆ.

**ಕಳುವೋರಹಳ್ಳಿ ಜುಂಜಪ್ಪ :**

ಸಿರಾ ತಾಲ್ಲೂಕು ಕೇಂದ್ರದಿಂದ ೨೦ ಕಿ.ಮೀ ದೂರದ ಕಳುವೋರಹಳ್ಳಿ ಕಾಡುಗೊಲ್ಲರ ಪರಮ ಪವಿತ್ರ ಸ್ಥಳ. ಪ್ರಮುಖ ಸಾಂಸ್ಕೃತಿಕ ನೆಲೆ. ವೀರ ಜುಂಜಪ್ಪನ ಸಮಾದಿ ಇಲ್ಲಿದೆ.

ಜುಂಜಪ್ಪ ಕಾಡುಗೊಲ್ಲರ ಕುಲದೈವ. ದನಕಾಯ್ದು ದೇವರಾದವನು. ಪಶುಸಂಗೋಪನೆಯಲ್ಲೇ ಬದುಕನ್ನು ಸಾರ್ಥಕ ಪಡಿಸಿಕೊಳ್ಳಬಹುದೆಂದು ತೋರಿಸಿಕೊಟ್ಟ. ತನ್ನ ನೈತಿಕ ಬದುಕಿನಲ್ಲಿಯೇ ಪುರಾಣ ಪುರುಷನಂತೆ ಗುರುತಿಸಿಕೊಂಡ ನಾಯಕ. ಜುಂಜಪ್ಪನ ಹುಟ್ಟಿನ ಹಿನ್ನೆಲೆಯೂ ಕುತೂಹಲಕಾರಿ.[೨೩] ಸಾಲಹಟ್ಟಿಯ ಗೊಲ್ಲನೊಬ್ಬನ ಮಡದಿ ಬಸಿರಾದಳು. ಕಡು ಬಡತನ, ಸಾಕಲು ಅನ್ನ ಹಾಲಿಲ್ಲ. ಹಡೆದ ಮಗುವನ್ನು ಕಾಡಿಗೆ ತಂದು ಮುಳ್ಳು ಪೊದೆಯ ಪಕ್ಕದಲ್ಲಿ ಬಾಳೆ ಎಲೆ ಹಾಸಿ ಮಗುವನ್ನು ಮಲಗಿಸಿ ಹೋದಳು. ದನಕಾಯುವುದಕ್ಕೆಂದು ಬಂದಿದ್ದ ಹೊನ್ನಟ್ಟಿಯ ಆಲೇಗೌಡ ಮಗುವಿನ ಕೀರಲು ಶಬ್ದವನ್ನು ಕೇಳಿ, ಕಂಡು ಎತ್ತಿ ತಂದು ಮಡದಿ ದೊಡ್ಡಮ್ಮಳಿಗೆ ಕೊಡುತ್ತಾನೆ. ಹುಟ್ಟು ಬಂಜೆ ದೊಡ್ಡಮ್ಮ ಮಗುವನ್ನು ಪ್ರೀತಿಯಿಂದ ಸಾಕಿದಳು. ಮಗು ಕೆಂಪಗಿದ್ದುದರಿಂದ 'ಕೆಂಗರು ಮಲ್ಲೇಗೌಡ' ಎಂದು ಹೆಸರಿಟ್ಟರು. ಬೆಳೆದು ದೊಡ್ಡವನಾದ ಕೆಂಗರು ಮಲ್ಲೇಗೌಡನಿಗೆ ಗೊಲ್ಲರ ಸಂಪ್ರದಾಯದಂತೆ ಕಂಬೇರ ಹಟ್ಟಿಯ ಚಿನ್ನಮ್ಮನನ್ನು ತಂದು ಮದುವೆ ಮಾಡುತ್ತಾರೆ. ಕೆಂಗರು ಮಲ್ಲೇಗೌಡನಿಗೆ ದಾಂಪತ್ಯ ಸುಖ ಜೀವನಕ್ಕಿಂತ ದನಕರು ಪೋಷಣೆಯೇ ಮುಖ್ಯವಾಗುತ್ತದೆ. ಆಗ ಚಿನ್ನಮ್ಮ ಗಂಡನನ್ನು ಒಲಿಸಿಕೊಳ್ಳಲು ಏನೆಲ್ಲಾ ಪ್ರಯತ್ನ ಮಾಡಿದರೂ ಸಾಧ್ಯವಾಗುವುದಿಲ್ಲ. ಕೊನೆಗೆ ಕುಲದೇವತೆ ಗೌರಸಂದ್ರದ ಮಾರಮ್ಮನ ವರದಿಂದ ಗರ್ಭಧರಿಸಿದಳು. ಈಕೆಗೆ ಜುಂಜಪ್ಪ, ಮಾರಣ್ಣ, ಮೈಲಣ್ಣ ಹಾಗೂ ಮಾರಕ್ಕಳೆಂಬ ಒಂದು ಹೆಣ್ಣು ಮಗು ಜನಿಸುತ್ತದೆ. ಜುಂಜಪ್ಪ ಹುಟ್ಟಿದಾರಂಭ್ಯವೂ ಪವಾಡ ಪುರುಷ. ಹದಿನಾರು ವರ್ಷದವನಿರುವಾಗಲೇ ಪರಾಕ್ರಮದಿಂದ ಸಾಹಸ ಕಾರ್ಯ ಮಾಡಿದವನು.

ಹಗಲು ಹಚ್ಚೇರಗಂಡ
ಇಳ್ಳು ಜವುದರು ಮಿಂಡ
ನಾಗುರಾವಿನು ಗಂಡ
ನಾಲಕ್ಕು ಲೋಕಕ್ಕೆ
ಉದ್ದಂಡ ನಮ್ಮ
ಹರಿಯ ಹಾವಿನ ಮಿಂಡ
ಸೊಪ್ಪಿನುಕ್ಕುಡದೋನು
ಪಚ್ಚೆಯ ತೆನಿಯೇನು
ಕಾಲು ಕದುಲೇ ಕಂಬ
ತೋಳು ಬಾಳೇದಿಂಡು
ಕೆಂಗರಿ ಕಣ್ಣಿನೋನು
ಕೆದರಿದಾ ಮಂಡೇನು

ಬೂದಿ ಮುಚ್ಚಿದ ಕೆಂಡ
ಭೂಲೋಕಕ್ಕೆ ಉದ್ದಂಡ
ನರಲೋಕದೊಳುಗೆಂತ
ಒದ್ದೇಕಾರುರು ಗಂಡ
ಶೂನ್ಯಕಾರಾರು ಮಿಂಡ
ಕೈಯಲ್ಲಿ ಕತ್ತುರು ಬಾಳೆ
ತಲೆಯಲ್ಲಿ ನೆತ್ತುರುಬಾಳೆ
ಸುರುನಾರಾಯಣುನೆಂಬ
ಮರಿಬಿಲ್ಲು ಬಾಣ ಧರಿಸಿ
ಉಗ್ಗುರುದ ಗಡಿಗೆನು
ಹುಲಿ ಮುಕುದನು
ಈಶ್ವರುನ ಮಗುನೆ ಜುಂಜಪ್ಪ

ಜುಂಜಪ್ಪ ಏಳು ಗೂಡಿನ ದನಗಳಿಗೆ ಒಡೆಯನಾಗುತ್ತಾನೆ. ಹಾಲು ಹಯನಕ್ಕೆ ಹೆಸರುವಾಸಿಯಾಗುತ್ತಾನೆ. ಈತನು ಮುಟ್ಟಿದ್ದೆಲ್ಲವೂ ಚಿನ್ನವಾಗಿ, ಬಹುದೊಡ್ಡ ಸಿರಿವಂತನಾಗಿ ನ್ಯಾಯ ಸತ್ಯಕ್ಕೆ ಹೆಸರುವಾಸಿಯಾಗುತ್ತಾನೆ. ಜುಂಜಪ್ಪನ ಬೆಳವಣಿಗೆ ಕಂಬೇರಹಟ್ಟಿಯ ಸೋದರ ಮಾವಂದಿರಿಗೆ ಅಸೂಯೆಯಾಗಿ, ಅಸಮಧಾನವಾಗಿ ಕಾಡುತ್ತದೆ. ಒಳಗೊಳಗೇ ಹಲ್ಲು ಮಸೆಯುತ್ತಾರೆ. ಒಮ್ಮೆ ಜುಂಜಪ್ಪನು ದನಗಳನ್ನು ಮರಡೀಗುಡ್ಡದ ಪಕ್ಕದ ಪುರುಸವ್ವನ ಕೆರೆಯ ಕಾವಲಿಗೆ ಒಡೆಯುತ್ತಾನೆ. ಅಲ್ಲಿ ದನಗಳು ನೀರು ಕುಡಿದು ಹುಲ್ಲು ಮೇದು ಆನಂದದಿಂದ ಇರುವಾಗ ಕಂಬೇರ ಹಟ್ಟಿಯ ಸೋದರ ಮಾವಂದಿರು ಜುಂಜಪ್ಪನ ದನಗಳನ್ನು ಸಾಯಿಸಲು ಕುತಂತ್ರ ಹೂಡುತ್ತಾರೆ. ಕಂಬೇರ ಗೊಲ್ಲರು ತಮ್ಮಲ್ಲಿನ ರೋಗಗ್ರಸ್ಥ ಕರುವನ್ನು ತಂದು ಜುಂಜಪ್ಪನ ದನಗಳು ನೀರು ಕುಡಿಯುವ ಜಾಗದಲ್ಲಿ ಕೆಸರಿನಲ್ಲಿ ನಿಲ್ಲಿಸುತ್ತಾರೆ. ಇದರಿಂದ ರೋಗ ಹರಡಿ ಜುಂಜಪ್ಪನ ದನಗಳು ನಾಶವಾಗುತ್ತವೆಂಬ ಬಯಕೆ ಸೋದರ ಮಾವಂದಿರದು. ಆದರೆ, ರೋಗದ ಕರುವಿನಿಂದ ರೋಗ ಹರಡದೆ ಅದರ ಆರೋಗ್ಯ ಸುಧಾರಿಸುತ್ತದೆ. ಜುಂಜಪ್ಪ ಅದಕ್ಕೆ 'ಬಡಮೈಲ' ಎಂದು ಹೆಸರಿಡುತ್ತಾನೆ. ಅದು ಏಳು ಗುಂಪಿನ ಹಸುಗಳ ಹಾಲುಕುಡಿದು ಏಳು ಬೆಟ್ಟದ ಗಾತ್ರಕ್ಕೆ ಬೆಳೆಯುತ್ತದೆ. ಆದರೆ ಈ ಪ್ರಸಂಗದಿಂದ ಕಂಬಿಗೊಲ್ಲರು ಖಿನ್ನರಾದರು. ಕ್ರೋಧಗೊಂಡು ಬೇಡರ ಸಹಾಯ ಬೇಡುತ್ತಾರೆ. ಜುಂಜಪ್ಪನ ದನಗಳನ್ನು ಕದ್ದು ತಲೆ ಹೊಡೆಯುವಂತೆ ಹೊನ್ನಿನ ಆಸೆ ತೋರಿಸುತ್ತಾರೆ. ಆದರೂ ಜುಂಜಪ್ಪನ ಗೋವುಗಳನ್ನು ಮುಟ್ಟುವುದಕ್ಕೂ ಇವರ ಕೈಲಾಗುವುದಿಲ್ಲ. ಮಪಗದ ಸುತ್ತಮುತ್ತ ಹುಲ್ಲುಗಾವಲುಗಳಲ್ಲಿ ಮೇವಿನ ಅಭಾವವಾಗುತ್ತದೆ. ಆಗ ಜುಂಜಪ್ಪ

ತನ್ನ ದನಗಳಿಗೆ ಹೊಸ ಜಾಗ ಹುಡುಕಬೇಕಾಗುತ್ತದೆ. ಕೊನೆಗೆ ಚೇಳೂರು ಸೀಮೆಯಲ್ಲಿ ಮಳೆಯಾಗಿ ನೀರು, ಹುಲ್ಲು ಸಮೃದ್ಧವಾಗಿರುವುದು ತಿಳಿಯುತ್ತದೆ. ಜುಂಜಪ್ಪ ಚೇಳೂರು ಕಾವಲಿಗೆ ದನಗಳನ್ನು ಒಡೆಯುತ್ತಾನೆ. ಇದನ್ನು ಕಂಡ ಜುಂಜಪ್ಪನ ಮಾವಂದಿರು ಚೇಳೂರು ಕಾವಲಿನ ಪಾಳೇಗಾರ ರಂಗಣ್ಣನನ್ನು ಜುಂಜಪ್ಪನ ವಿರುದ್ಧ ಎತ್ತಿಕಟ್ಟುತ್ತಾರೆ. ಅವರ ಮಾತು ನಂಬಿ ಚೇಳೂರು ರಂಗಣ್ಣ ತನ್ನ ಕಾವಲಿನಲ್ಲಿ ಮೇಯುತ್ತಿದ್ದ ಜುಂಜಪ್ಪನ ದನಗಳ ಮೇಲೆ ಗುಂಡು ಹಾರಿಸಲು ದಂಡಿನೊಂದಿಗೆ ಬಂದನು. ಆದರೆ ಬಡಮ್ಮೈಲ ದನಗಳನ್ನೆಲ್ಲಾ ಒಂದುಗೂಡಿಸಿ, ಹಿಂದಕ್ಕೆ ಒಂದು ಹೆಜ್ಜೆ ಇಡದಂತೆ ಮೇಯುವುದನ್ನು ಬಿಡದಂತೆ ಇರಬೇಕೆಂದು ಕರೆ ನೀಡಿ ಎಲ್ಲಾ ದನಗಳಲ್ಲಿ ಧೈರ್ಯ ತುಂಬಿತು. ಕೊನೆಗೆ ರಂಗಣ್ಣ ದಿಕ್ಕುಕಾಣದೆ ತಾನೇ ತನ್ನ ಕಾವಲಿನಿಂದ ಹೊರಡಬೇಕಾಯಿತು. ಜುಂಜಪ್ಪನ ದನಗಳಿಗೆ ನಾಯಕನಾಗಿ ನಿಂತು, ಚೇಳೂರು ರಂಗಣ್ಣನ ಮದ್ದು ಗುಂಡುಗಳಿಗೆ ಹೆದರದೆ ನಿಂತ ಬಡಮ್ಮೈಲನ ಮೇಲೆ ಕಂಬೇರಗೊಲ್ಲರಿಗೆ ಅಪಾರವಾದ ಸಿಟ್ಟು ಬಂದಿತು. 'ಕೊಡಲಿಕಾವು ಕುಲಕ್ಕೆ ಮೃತ್ಯು' ಎಂಬಂತೆ, ನಮ್ಮ ಕರು ನಮಗೇ ಮೂಲವಾಯಿತೆಂದು ಆತಂಕಕ್ಕೆ ಒಳಗಾದರು. ಜೊತೆಗೆ ಬಡಮ್ಮೈಲನನ್ನು ಕೊಲ್ಲುವ ಉಪಾಯ ಹೂಡಿದರು.

ಒಮ್ಮೆ ಜುಂಜಪ್ಪ ತಾಯಿಯನ್ನು ನೋಡಲು ಮನೆಗೆ ಹೋಗುತ್ತಾನೆ. ಇದನ್ನು ತಿಳಿದ ಕಂಬೇರಗೊಲ್ಲರು ನೇರವಾಗಿ ಜುಂಜಪ್ಪನ ದನಗಳಿದ್ದ ಕಾವಲಿಗೆ ಬಂದರು. ಏಳುಜನ ಸೋದರ ಮಾವಗಳು ಮಾರಣ್ಣ, ಮೈಲಣ್ಣರ ಬಳಿ ಬಂದು ಗೋಳೋ ಅಂಥ ಅತ್ತರು. ತಿಳಿಯದೆ ನಿಮ್ಮ ಮೇಲೆ ದ್ವೇಷ ಸಾಧಿಸಿದೆವು ಇದರಲ್ಲಿ ಬೇರೆಯವರ ಇಕಮತ್ತು ಸೇರಿತ್ತೆಂದು ಗೋಳಾಡಿದರು. ಕೊನೆಗೆ ಮಾರಣ್ಣ ಮೈಲಾರಣ್ಣರಿಗೆ ತಾವು ತಂದಿದ್ದ ಕಡ್ಲೆಪುರಿಯನ್ನು ಕೊಟ್ಟು ತಲೆಸವರಿ ತಿನ್ನಲು ಹೇಳಿದರು. ನಂತರ ಚೇಳೂರು ಗೌಡಿಕೆ ನಮ್ಮದು, ಚೇಳೂರಿನ ತೇರು ಹರಿಯಬೇಕು. ಇದಕ್ಕೆ ಬಡಮ್ಮೈಲ ಬೇಕು. ತೇರು ಎಳೆದಾದ ಕೂಡಲೇ ಬಡಮ್ಮೈಲನನ್ನು ಹಿಂದಕ್ಕೆ ತಂದು ಬಿಡುತ್ತೇವೆಂದರು. ಆದರೆ ಮಾರಣ್ಣ, ಮೈಲಣ್ಣರು ಬಡಮ್ಮೈಲನನ್ನು ಕೊಡುವ ಅಧಿಕಾರ ನಮಗೇನಿದೆ ಅಣ್ಣ ಜುಂಜಪ್ಪನಿಗೆ ಮಾತ್ರ. ನಾವು ಕೊಡಲಾಗುವುದಿಲ್ಲ ಎಂದರು. ಆ ಮಾತನ್ನು ಕೇಳಿ ಕಂಬೇರಗೊಲ್ಲರು ಅವರಿಗೆ ಚಿತ್ರಹಿಂಸೆ ನೀಡಿದರು. ಹುಣಸೆ ಬರಲಿನಿಂದ ಹೊಡೆದು ಒಂದು ಹಗೇವಿನೊಳಗೆ ಹಾಕಿ ಮೆಣಸಿನ ಕಾಯಿ ಹೊಗೆ ಹಾಕಿಸಿ ಪ್ರಜ್ಞೆ ತಪ್ಪಿಸಿದರು. ಹೀಗೆ ಮಾಡಿ ಬಡಮ್ಮೈಲನನ್ನು ಹೊಡೆದು ತಂದು ಚೋಳೂರಿನ ಊರ ಮುಂಭಾಗದಲ್ಲಿ ಕಲ್ಲು ಕಂಬಕ್ಕೆ ಕಟ್ಟಿದರು.

ಇತ್ತ ಮನೆಗೆ ಬಂದಿದ್ದ ಜುಂಜಪ್ಪ ಕೇಡಿನ ನಿದ್ದೆ ಬಂದು ಮೂರು ತಿಂಗಳು ಮಲಗಿ ನಂತರ ಎದ್ದನು. ತಾಯಿ ಎಣ್ಣೆ ಒತ್ತಿ ಸ್ನಾನ ಮಾಡಿಸಲು ಎಬ್ಬಿಸಿ ಎಣ್ಣೆ ಹೊತ್ತುವಾಗ ಎಣ್ಣೆಯ ಬಟ್ಟಲಲ್ಲಿ ಚೇಳೂರು ಕಂಬಕ್ಕೆ ಕಟ್ಟಿದ ಬಡಮ್ಮೈಲನ ಚಿತ್ರ ಕಾಣಿಸಿತು. ಕೂಡಲೆ ಹಾಗೆಯೇ ಹೊರಟುಬಂದನು. ಮದಗದ ದಿಬ್ಬದ ಮೇಲೆ ನಿಂತು ಪಿಳ್ಳಂಗೋವಿ ಹಿಡಿದು ಹೀಗೆ ಕರೆದನು.

ಕಲ್ಲು ಕಂಬ ಮುರಿಯೋ | ಕಬ್ಬುನದ ಸಡರ ಮುರಿಯೋ |

ಮುದ್ದು ಚೇಳೂರು ತೆನೆಮುರಿಯೋ | ಬಡಮ್ಮೈಲ

ಗೆದ್ದು ಬಾರೋ ಚೇಳೂರ ಬಯಲೀಗೆ |

ಜುಂಜಪ್ಪನ ಕೊಳಲಿನ ಧ್ವನಿ ಚೇಳೂರು ಕಲ್ಲು ಕಂಬದಲ್ಲಿ ಬಂದಿಯಾಗಿದ್ದ ಬಡಮ್ಮೈಲನಿಗೆ ಕೇಳಿಸಿತು. ಆಗ ಬಡಮ್ಮೈಲ ಕಾಲು ಕೆರೆದು ಬಾಲ ನಿಗುರಿಸಿ ಉಡ್ನರಿಕೆ ಹೊಡೆದು, ಕಲ್ಲು ಕಂಬಕ್ಕೆ ಕಟ್ಟಿದ್ದ ಕಬ್ಬಿಣದ ಸರಪಳಿ ಹಗ್ಗವನ್ನು ಜಾಡಿಸಿ ಎಳೆದು, ಕಂಬವನ್ನು ಮೂರು ತುಂಡಾಗಿ ಮಾಡಿ ಮದಗದ ಗಿರಿಯನ್ನು ಸೇರಿ ತನ್ನ ಒಡೆಯ ಜುಂಜಪ್ಪನನ್ನು ಕೂಡಿಕೊಂಡಿತು.

ಜುಂಜಪ್ಪನ ಸೋದರ ಮಾವಂದಿರ ಅಸಮಧಾನ ಮತ್ತುಷ್ಟು ಹೆಚ್ಚಿತು. ಬಡಮ್ಮೈಲನಿಂದಾದ ಮುಖಭಂಗದಿಂದ ಅವರು ಇನ್ನೂ ಕೆರಳಿದರು. ಮತ್ತೊಂದು ತಂತ್ರವನ್ನು ಯೋಚಿಸಿ ಚೇಳೂರು ರಂಗಣ್ಣನಲ್ಲಿಗೆ ಬಂದರು. 'ಜುಂಜಪ್ಪನ ಜೊತೆ ದಾಯ ಪಗಡೆ ಆಡಿದರೆ ಏಳುಗೂಡಿನ ಎತ್ತುಗಳು ನಿನ್ನವಾಗುತ್ತವೆ' ಎಂದು ರಂಗಣ್ಣನನ್ನು ಎತ್ತಿಕಟ್ಟಿದರು. ಸಾವಿರ ಎತ್ತಿನ ಕಣದಲ್ಲಿ ಸಾವಿರಾರು ಜನರ ಎದುರಲ್ಲಿ ಜುಂಜಪ್ಪನಿಗೂ ಚೇಳೂರು ರಂಗಣ್ಣನಿಗೂ ದಾಯ ಪಗಡೆ ಆರಂಭವಾಯಿತು. ಜೂಜಿನಲ್ಲಿ ರಂಗಣ್ಣ ಮೂರು ಭಾರಿಯೂ ಸೋತುಹೋದ. ಅವನು ಒಡ್ಡಿದ ಹಣವೆಲ್ಲಾ ಜುಂಜಪ್ಪನಿಗೆ ಸೇರಿತು. ಜುಂಜಪ್ಪನ ಏಳುಗೂಡಿನ ದನಗಳು ರಂಗಣ್ಣನ ಹೊಲಗದ್ದೆಗಳನ್ನೆಲ್ಲಾ ಮೇದವು. ಏಳು ವರ್ಷ ಜುಂಜಪ್ಪ ಚೇಳೂರಿನ ದೊರೆತನ ಮಾಡಿದ.

ರಾಜ ಮುದ್ರಿಕೆ

ಉಂಗುರ ಸ್ವಾಮಿ

ಬೆರಳಿಗೆ ಧರಿಸೋರೋ

ಜುಂಜಪ್ಪ

ಏಳು ವರ್ಷ

ಸೇಳೂರೊಳಗೆ

ರಾಜ್ಯ ಆಳಿದನೋ ಸ್ವಾಮಿ ಶಿವುನೀಗೋ

ಏಳು ವರ್ಷ

ಸೇಳೂರು ದೊರಿತಾನ

ಮಾಡಿದುನಣ್ಣಾ ಜುಂಜಪ್ಪ

ಅನಂತರ ಅದರ ಆಳ್ವಿಕೆಯನ್ನು ರಂಗಣ್ಣನಿಗೆ ವಹಿಸಿದನು.

ಹುಲಿಕುಂಟೆ ತಮ್ಮಣ್ಣ ಪ್ರಬಲ ವ್ಯಕ್ತಿಯಾಗಿದ್ದ. ಅವನ ಕಾವಲು ಅನೇಕ ಬಗೆಯ ಹುಲ್ಲುಗಳಿಂದ ತುಂಬಿತ್ತು. ಅವನ ಕಾವಲಿನಲ್ಲಿ ತನ್ನ ದನಗಳನ್ನು ಮೇಯಿಸಬೇಕೆಂದು ಜುಂಜಪ್ಪನಿಗೆ ಆಸೆಯಾಯಿತು. ಹುಲಿಕುಂಟೆ ತಮ್ಮಣ್ಣನ ಕಾವಲಿಗೆ ಮಾರಣ್ಣ, ಮೈಲಣ್ಣರೊಡನೆ ದನಗಳನ್ನು ಹೊಡೆದುಕೊಂಡು ಬಂದನು. ತಮ್ಮಣ್ಣನಿಂದ ಏನೂ ಮಾಡಲು ಸಾಧ್ಯವಾಗಲಿಲ್ಲ. ಆಗ ಅವನು ತನ್ನ ಗುರು ಸಾಣೆಕೆರೆ ಪುಟ್ಟಣ್ಣನ ಬಳಿಗೆ ಬಂದು ಅವನ ಸಲಹೆಯನ್ನು ಕೇಳಿದ. ಜುಂಜಪ್ಪ, ಮಾರಣ್ಣ, ಮೈಲಣ್ಣ ಈ ಮೂವರ ಪ್ರಾಣವನ್ನು ತೆಗೆಯುವಂತೆ ಮಾಟ ಮಾಡಲು ಯತ್ನಿಸಿದ ಹುಲಿಕುಂಟೆ ತಮ್ಮಣ್ಣ, ಸಾಣೆಕೆರೆ ಪುಟ್ಟಣ್ಣ ಇಬ್ಬರೂ ತಮ್ಮ ಪ್ರಾಣವನ್ನು ಕಳೆದುಕೊಂಡರು. ಜುಂಜಪ್ಪ ತಮ್ಮಣ್ಣನ ಕಾವಲನ್ನು ಕಾಯುತ್ತಿದ್ದ ಏಳು ಜನ ಮುಚ್ಚಲೋರ ನಾಯಕರಿಗೆ ಆ ಕಾವಲನ್ನು ವಹಿಸಿಕೊಟ್ಟನು.

ಜುಂಜಪ್ಪ ಸಾಣೆಕೆರೆ ಪುಟ್ಟಣ್ಣ ಹಾಗೂ ಹುಲಿಕುಂಟೆ ತಮ್ಮಣ್ಣನನ್ನು ಕೊಂದ ಸುದ್ದಿಯನ್ನು ತಿಳಿದ ಸೋದರ ಮಾವಂದಿರ ಹೊಟ್ಟೆಹುರಿ ಹೆಚ್ಚಾಯಿತು. ಏನಾದರೂ ಮಾಡಿ ಜುಂಜಪ್ಪನ ಪೊಗರನ್ನು ಇಳಿಸಬೇಕೆಂದು ನಿರ್ಧರಿಸಿ ತಾಳೇದುರ್ಗಿಯಲ್ಲಿಗೆ ಬಂದು ಏನಾದರೂ ಮಾಡಿ ಜುಂಜಪ್ಪನನ್ನು ತಾಳೇದುರ್ಗಿ ಕಾವಲಿಗೆ ಕರೆಸಿಕೊಂಡು ಅವನನ್ನು ಕೊಂದು ಹಾಕಬೇಕೆಂದು ಬೇಡಿಕೊಂಡರು. ತಾಳೇದುರ್ಗಿಯಿಂದ ಜುಂಜಪ್ಪನಿಗೆ ಅಪಾಯ ಎದುರಾದಾಗ ಪುರಲಹಳ್ಳಿ ಭೂತಪ್ಪ ತಾಳೇದುರ್ಗಿಯನ್ನು ಕೊಂದು ರಕ್ಷಿಸಿದ. ಪುರಲಹಳ್ಳಿ ಭೂತಪ್ಪ ತನಗೆ ಮಾಡಿದ ಉಪಕಾರಕ್ಕಾಗಿ ಜುಂಜಪ್ಪ ಅವನಿಗೆ ಒಂದು ಗುಡಿಕಟ್ಟಿಸಿ, ತನ್ನನ್ನು ಪೂಜೆ ಮಾಡುವವರು ಅವನನ್ನು ಪೂಜೆ ಮಾಡಬೇಕೆಂದು ನಿಯಮವನ್ನು ಮಾಡಿದನು.

ಹೀಗೆಯೇ ಜುಂಜಪ್ಪ ಪೌರುಷತನದಿಂದ ಚಾನುಕಲ್ಲು ದೊಡ್ಡಕ್ಕನಿಗೆ ಬುದ್ಧಿ ಕಲಿಸಿದ. ಸಿದ್ಧರ ಕಾವಲಿಗೆ ಹೋಗಿ ಅವರ ಅಹಂಕಾರವನ್ನು ಮುರಿದ. ಗುಡ್ಡದ ಬೋರಿಯ ಕಾವಲು, ಬಾಬಾಬುಡನ್‌ಗಿರಿ ಕಾವಲು, ಹೊಸದುರ್ಗದ ಕಾವಲು ಮೊದಲಾದ ಹಲವಾರು ಕಾವಲಿನಲ್ಲಿ ತನ್ನ ದನಗಳನ್ನು ಮೇಯಿಸಿ, ಆ ಕಾವಲುಗಳಲ್ಲಿ ತನ್ನನ್ನು ಎದುರಿಸಲು ಬಂದವರನ್ನು ಸೋಲಿಸಿ ತನ್ನ ಮಹಿಮೆಯನ್ನು ಅವರಿಗೆ ತೋರಿಸಿದ.

ಜುಂಜಪ್ಪ ಸಾಹಸಕಾರ್ಯಗಳನ್ನು ಮಾಡಿ ತಮ್ಮನ್ನು ಎಲ್ಲಾ ಸಂದರ್ಭಗಳಲ್ಲಿಯೂ ವಿಫಲಗೊಳಿಸಿದ್ದನ್ನು ಕಂಡು ಅವನ ಸೋದರ ಮಾವಂದಿರಿಗೆ ಅಸಾಧ್ಯ ಸಂಕಟವಾಯಿತು. ಜುಂಜಪ್ಪನನ್ನು ಕೊಲ್ಲದಿದ್ದರೆ ತಾವು ಬದುಕುವುದೇ ಕಷ್ಟವೆಂದು ಭಾವಿಸಿದರು. ಅವನಿಗೆ ವಿಷಹಾಕಿ ಕೊಲ್ಲುವುದೇ ಸರಿಯಾದ ಮಾರ್ಗವೆಂದು ನಿರ್ಧರಿಸಿದರು. ಸ್ನೇಹಸಂಬಂಧದ ನೆಂಟಸ್ತಿಕೆಯ ನೆಪ ಹೂಡುತ್ತಾರೆ. ಕಂಚೇರ ಮನೆದೇವರ ಹಬ್ಬವನ್ನು ಅದ್ದೂರಿಯಾಗಿ ಆಚರಿಸುತ್ತಿರುವುದಾಗಿಯೂ

ಅದಕ್ಕೆ ಜುಂಜಪ್ಪ ತನ್ನ ಸಹೋದರರೊಂದಿಗೆ ಆಗಮಿಸಬೇಕೆಂದು ಬಗೆಬಗೆಯಾಗಿ ಬೇಡಿಕೊಳ್ಳುತ್ತಾರೆ. ತೌರು ಮನೆಯ ಹಬ್ಬಕ್ಕೆ ಮಕ್ಕಳನ್ನು ಕಳುಹಿಸಿಕೊಡಬೇಕೆಂದು ಚಿನ್ನಮ್ಮನ್ನನ್ನು ಬೇಡಿಕೊಳ್ಳುತ್ತಾರೆ. ತಾಯಿಯ ಒತ್ತಾಯಕ್ಕೆ ಮಣಿದು ಜುಂಜಪ್ಪ ತನ್ನ ತಮ್ಮಂದಿರಾದ ಮಾರಣ್ಣ, ಮೈಲಣ್ಣ ಹಾಗೂ ಆತನ ಪ್ರೀತಿಯ ಜೂಲನಾಯಿಯನ್ನು ಕರೆದುಕೊಂಡು ತನ್ನ ಸೋದರ ಮಾವಂದಿರು ವಾಸವಾಗಿದ್ದ ಕಂಬೇರ ಹಟ್ಟಿಗೆ ಹೋದ. ಮನೆಗೆ ಬಂದವರನ್ನು ಸೋದರ ಮಾವನ ಮಕ್ಕಳು ಆರತಿ ಎತ್ತಿ ಸ್ವಾಗತಿಸಿದರು. ಜುಂಜಪ್ಪನ ತಂಗಿ ಮಾರಕ್ಕ. ಈಕೆಯನ್ನು ತಾಯಿಯ ತೌರುಮನೆಗೆ ಸೋದರ ಮಾವನಿಗೆ ಕೊಟ್ಟು ಮದುವೆ ಮಾಡಿದ್ದರು. ಈಕೆಯಿಂದಲೇ ವಿಷಕುಡಿಸಿ ಕೊಲ್ಲಲು ಉಪಾಯ ಮಾಡಿದ್ದ ಸೋದರ ಮಾವಂದಿರು ಮಾರಕ್ಕನನ್ನು ಬಲವಂತವಾಗಿ ವಿಷದ ಅಡಿಗೆ ತಯಾರಿಸಲು ಒತ್ತಾಯಿಸಿದರು. ಸಂಕಟವನ್ನು ಹೊತ್ತುಕೊಂಡೇ ಮಾರಕ್ಕ ದತ್ತೂರಿ ಬೀಜವನ್ನು ಅರೆದು ಅಡಿಗೆಗೆ ಸೇರಿಸಿದ್ದಳು.

ಹಾಲಸ್ವರ್ಕಗೆ
ಹಾಲಾಲಿ ಬೇಯ್ತೆಯ್ತೆ
ಹಾಳು ದತ್ತೂರಿ ಉರಿಮದ್ದು
ಹಾಳು ದತ್ತೂರಿ ಉರಿಮದ್ದು ಚಿನ್ನಮ್ಮನಾ
ಮಕ್ಕಳಿಗೂ ಬೇಸುತಾರೋ ಹಗಿಯೋರು
ಸಿಕ್ಕಸ್ವಾರ್‍ಯಾಗೆ ಉಕ್ಕಿಕ್ಕಿ ಬೇಯ್ಯಾದು
ಕೆಟ್ಟ ದತ್ತೂರಿ ಉರಿಮದ್ದು
ಸಿನ್ನಮ್ಮ ನಿನ್ನ
ಪುತ್ರುಗು ಬೇಸುತಾರೋ ಹಗಿಯೋರು ||

ಮಾರಕ್ಕ ಊಟಕ್ಕೆ ಬಡಿಸುತ್ತಲೂ ಒಂದು ಹಿಡಿಯನ್ನು ತೆಗೆದು ಜುಂಜಪ್ಪ ಅಲ್ಲಿಯೇ ಹತ್ತಿರದಲ್ಲಿದ್ದ ಜೂಲುನಾಯಿಗೆ ಹಾಕಿದ, ಪ್ರೀತಿಯಿಂದಲೇ ವಿಷಪೂರಿತ ಅಡಿಗೆಯನ್ನು ತಾನೂ ತಿಂದು, ತನ್ನ ತಮ್ಮಂದಿರಿಗೂ ತಿನ್ನಿಸಿ ಅವರಿಬ್ಬರನ್ನು ಕರೆದುಕೊಂಡು ಹೊನ್ನಟ್ಟಿ ಆಲೇಗೌಡನ ಹುಲ್ಲಿನ ಬಣವೆಯ ಒಳಗೆ ಹೊಕ್ಕು ಅಲ್ಲಿ ತನ್ನ ಉರಿಗಣ್ಣನ್ನು ಬಿಟ್ಟನು. ಆ ಬಣವೆಯೊಡನೆ ಅವರು ಮೂವರು ಸುಟ್ಟು ಬೂದಿಯಾದರು. ಜುಂಜಪ್ಪ ಸತ್ತ ಏಳು ದಿನಗಳ ಮೇಲೆ ಮತ್ತೆ ಹುಟ್ಟುತ್ತಾನೆ. ಮಾರಣ್ಣ, ಮೈಲಣ್ಣರನ್ನು ಬದುಕಿಸುತ್ತಾನೆ. ಕಂಬೇರ ಚಿನ್ನಿಯ ಮಗ ಕೊನೆಗೂ ಸತ್ತನೆಂದು ಗೆಜ್ಜೆಕೋಲು ಹಾಕುತ್ತಿದ್ದ ಸೋದರ ಮಾವಂದಿರ ಮೇಲೆ ಜುಂಜಪ್ಪ ಮರಡಿಗುಡ್ಡದ

ಮೇಲೆ ನಿಂತು ಅಲ್ಲಿಂದಲೇ ಉರಿಗಣ್ಣುಬಿಟ್ಟ. ಮಾರಕ್ಕನನ್ನು ಬಿಟ್ಟು ಇಡೀ ಹಟ್ಟಿಯೇ ಸುಟ್ಟು ಬೂದಿಯಾಯಿತು. ಗರ್ಭಿಣಿಯಾಗಿದ್ದ ಮಾರಕ್ಕ ಮುಂದೆ ಮಗುವಿಗೆ ಜನ್ಮ ನೀಡಿದಳು. ಇವಳಿಂದ ಕಂಬೇರ ವಂಶ ಬೆಳೆಯಿತು. ಮುಂದೆ ಜುಂಜಪ್ಪ ಹಲವಾರು ವರುಷಗಳ ಕಾಲ ಆಳಿ ನಂತರ ಮಡಿಯುತ್ತಾನೆ. ಕಂಬೇರಹಟ್ಟಿಯ ದಕ್ಷಿಣ ದಿಕ್ಕಿನಲ್ಲಿ ಸಮಾದಿ ಮಾಡಿಸಿಕೊಳ್ಳುತ್ತಾನೆ. ಕಳುವ್ರೋರಹಳ್ಳಿ ಹತ್ತಿರದ ಆ ಸಮಾದಿಯೇ ಇಂದಿಗೂ ಕಾಡುಗೊಲ್ಲರಿಗೆ ಪರಮ ಪವಿತ್ರ ಸ್ಥಳ.

**ಎತ್ತಪ್ಪ :**

ಕಾಡುಗೊಲ್ಲರ ಪ್ರಮುಖ ಸಾಂಸ್ಕೃತಿಕ ವೀರರಲ್ಲೊಬ್ಬ ಎತ್ತಪ್ಪ. ಕಾಡುಗೊಲ್ಲರ 'ಮಾರೇನೋರ' ಬೆಡಗಿಗೆ ಸೇರಿದವನು. ಪಶುಪಾಲನ ಸಂಸ್ಕೃತಿ ಹಿನ್ನೆಲೆಯಲ್ಲಿ ಬಂದವನು. ಈಡೀ ಕಾಡುಗೊಲ್ಲರ ಜನಾಂಗಕ್ಕೆ ಒಂದು ಸಾಂಸ್ಕೃತಿಕ ನೆಲಗಟ್ಟನ್ನು ಒದಗಿಸಿ ಕೊಟ್ಟವನು. ಗೊಲ್ಲರ ಕುಲಾಚಾರದ ಕಟ್ಟು ಕಟ್ಟಲೆ ರೂಪಿಸಿ, ಜನಾಂಗದ ಕರೇಕಡೆಗಳನ್ನು ವಿಂಗಡಿಸಿ ಒಂದು ದುಡ್ಡಿನಿಂದ ಇಪ್ಪತ್ತು ದುಡ್ಡಿನವರೆಗೆ ತಪ್ಪು ತೆಗೆದು ಕಾಡುಗೊಲ್ಲರಿಗೆ ಪುರಾಣ ಪುರುಷನಾದವನು. ಎತ್ತಪ್ಪನ ಹೆಸರೇ ಸೂಚಿಸುವಂತೆ ಇವನು 'ಎತ್ತು' ಎಂದರೆ ಗೋವುಗಳನ್ನು ಕಾಯುವ ಗೋಪಾಲಕ. ಎತ್ತಪ್ಪನಿಗೆ ತಂದೆ ತಾಯಿಗಳಿಲ್ಲ ಅವನು ಅಯೋನಿಜ. ತುಪ್ಪದ ಮಡಿಕೆಯಲ್ಲಿ ಜನ್ಮತಳೆದವನು. ದೈವಾಂಶು ಸಂಭೂತನಾಗಿ, ಮದುವೆಯಾದರೂ ಉಂಡೂ ಉಪವಾಸಿ ಬಳಸಿ ಬ್ರಹ್ಮಚಾರಿಯಂತೆ ಎಂದರೆ ಸಂಸಾರ ವ್ಯಾಮೋಹದಲ್ಲಿ ಸಂಪೂರ್ಣವಾಗಿ ಸಿಲುಕದೆ ಬೆನವ ಎತ್ತಯ್ಯನಾಗಿ ಬದುಕಿ ಪಶು ಸಂಗೋಪನೆಯಲ್ಲಿ ಪರಮಾರ್ಥ ಕಂಡವನು.

ಅಂಬೇರಾಯ, ತುಂಬೇರಾಯರ ದನಗಳನ್ನು ಕಾಯಲು ಗೌರಸಂದ್ರದ ಮಾರಮ್ಮ ಕೈಲಾಸದಿಂದ ಕರೆತಂದ ವ್ಯಕ್ತಿಯೇ ಎತ್ತಯ್ಯ.[೧೫] ತನ್ನ ಹುಡುಗ ಬುದ್ದಿಯ ತುಂಟತನದಿಂದ ಖುಷಿಯಿಂದ ಹಾಗೂ ದೆವಕನ್ನಿಕೆಯರಿಂದ 'ಸಂಡೂರಿನಲ್ಲಿ ಸೆರೆ ಬೀಳುವ ಹಾಗೂ ತಲೆಯೊಡೆಸಿಕೊಳ್ಳುವ ಶಾಪಕ್ಕೆ ಗುರಿಯಾದವನು. ಗೋವುಗಳ ಸತ್ಯೇವು ಕಾಪಾಡಲು ಸದಾ ನಾಗರೀಕ ಜನ ವಸತಿಯಿಂದ ದೂರವೇ ಉಳಿದಿರುತ್ತಾನೆ. ಈ ಎತ್ತಯ್ಯನ ವ್ಯಕ್ತಿತ್ವಕ್ಕೆ ಮಾರುಹೋದ ಕೆಲವು ಕುರುಬ ವ್ಯಾಪಾರಗಾರರು ಎತ್ತಯ್ಯನ ಹೆಸರಿನಲ್ಲಿ 'ದೊಡ್ಡಮೈಗ', 'ಚಿಕ್ಕಮೈಗ' ಎಂಬ ಎರಡು ಗ್ರಾಮಗಳನ್ನು ಕಟ್ಟಿಸಿ, ಎತ್ತಯ್ಯನಿಗೆ ಗೆಜ್ಜೆಕಾಲು ಮಲ್ಲಮ್ಮ ಎಂಬ ಹೆಣ್ಣು ತಂದು ಮದುವೆ ಮಾಡುತ್ತಾರೆ.

ಹತ್ತು ಕಂಡುಗಕ್ಕಿ ಕುಟ್ಟಿ, ಕೇಸರಿ ಮಾಡಿ
ಹಟ್ಟಿಗೆ ಎತ್ತಯ್ಯ ಮದಲಿಂಗ ಎಂಬ ಸುದ್ದಿ
ಸುತ್ತಲೊಕ್ಕಲಿಗೆ ಹರಿದಾವು
ಆಕಾಶದಿಂದ ಅರಿಣೆ ಕುಂಬ ಬಂದು

ಲೋಕಾದ್ರಿ ನಿಮ್ಮ ಮದಿವೀಗೆ ಶಿವ ಕಳಿವ್ಯಾನೆ

ನಲವತ್ತೇಳು ಎಲೆಕಳಸ

ಅಕ್ಕಿಎಳೆಯಾಗೆ ವಪ್ಪದ ಅಸೆಯ ಬರದು

ಮುತ್ತೈದೆರೋಗಿ ತುಂಬಿ ಗುಡ್ಡಾದ ಅಪ್ಪ

ಎತ್ತಯ್ಯನ ಅಸೆಗಳ

ಸರಪಾನ ಸರಸ ನೋಡಿ ಹಿರಿಯಟ್ಟಿ ಅರಸು ತಾನೊರಟ.

ಹೆಸರಿಗಷ್ಟೇ ಮದುವೆಯಾದ ಎತ್ತಯ್ಯ ಎಂದೂ ಮಲ್ಲಮ್ಮನನ್ನು ಕಣ್ಣೆತ್ತಿ ನೋಡಲಿಲ್ಲ. ಆಕೆಯ ಕೈಮುಟ್ಟಿದ ಅಡಿಗೆ ಉಂಡವನಲ್ಲ. ಹೆಂಗಸರ ನೆರಳು ಸೋಂಕಿದರೆ ಗೋವು ಕಾಯುವ ವ್ಯಕ್ತಿಯ ಪಾವಿತ್ರ್ಯ ಕೆಡುತ್ತದೆ ಎಂದು ಭಾವಿಸಿದ ಎತ್ತಯ್ಯ ತನ್ನ ಕೈಯ್ಯಾರೆ ಹಾಲಡಿಗೆ ಮಾಡಿಕೊಳ್ಳುತ್ತಾನೆ. ಸದಾ ಎತ್ತುಗಳ ಯೋಗಕ್ಷೇಮದಲ್ಲೇ ನಿರತನಾಗಿದ್ದ ಎತ್ತಯ್ಯ ನೀರಿಲ್ಲದ ಬರಗಾಲದಲ್ಲಿ ಪಡಬಾರದ ಕಷ್ಟಪಟ್ಟು ಗೋಕಟ್ಟೆಗಳನ್ನು ಹಾಕಿಸಿದ. ಎತ್ತುಗಳಿಗೆ ಜೆಡ್ಡು ಜಾಪತ್ತು ಬರದಂತೆ ಬೇವಿನಹಳ್ಳಿ ಕರಿಯಮ್ಮನನ್ನು ಪ್ರತಿಷ್ಠಾಪಿಸಿದ. ಎತ್ತುಗಳನ್ನು ಕಾಯಲು ಹೆಂಡತಿಯ ತಮ್ಮ ವಲಗಾನಿ ಸಹಾಯಕನಾದ. ಶಿವ ಕೈಲಾಸದಿಂದ ಮುತ್ತಣ್ಣನನ್ನು ಎತ್ತಯ್ಯನ ಸಹಾಯಕ್ಕೆ ಕಳುಹಿಸಿದ.

ಎತ್ತಯ್ಯನ ಏಳಿಗೆಯನ್ನು ಸಹಿಸದ ಅಜ್ಜೀರಬಾಲ, ಹುಲಿಕುಂಟೆ ರಂಗಣ್ಣ, ಮೊದಲಾದ ಪಾಳೇಗಾರರೊಂದಿಗೆ ಪಗಡೆಯಾಡಿ ಗೆದ್ದು, ಚಂಗಾವರದ ಚದುರಂಗದ ಕಾವಲಿನಲ್ಲಿ ಅರವತ್ತು ಅಡಿ ಎತ್ತರದ ಬೇವಿನ ಮರವನ್ನು ತನ್ನ ಗಬ್ಬಾದ ಹಸು 'ಚಿಕ್ಕರೆಂಬೆ' ಹಾರುವಂತೆ ಮಾಡಿದ.

ಮುತ್ತಿನ ಕಾಲ ಚಿಕ್ಕರೆಂಬೆ ಚಿಕ್ಕವ್ವ

ಅಪ್ಪನ ಜೂಜ ಗೆಲಿಸ್ಯಾಳೆ

ರಾಯ ಕೋಡಿಹಳ್ಳಿ ಸೊಬಗಿನ

ಆವೆ ಎತ್ತಯ್ಗೆ ಗೆಲುದಾವೆ

ಎತ್ತಿಗೆ ಕೊಡಿರಣ್ಣ ಮತ್ತೊಂದು ಹಳ್ಳವ

ಚಿಕ್ಕ ಕೋಡಿಹಳ್ಳಿ ಸೊಬಗಿನ ಹಳ್ಳವ

ಎತ್ತಿಗೆ ಮಾನ್ಯವ ಕೊಡಿರಣ್ಣ

ನಾಡಿಗೇ ಚೆಲುವನಾದ ಆಪಿನ ಗೊಲ್ಲ ಎತ್ತಯ್ಯನ ಜೀಸಾದ ತೋಳಿಗೆ ಎಷ್ಟೋಜನ ನಾರಿಯರು ಮನಸೋತು ಬಿಟ್ಟಿರುತ್ತಾರೆ. ತಮ್ಮ ಆಸೆಗಳನ್ನು ತೋಡಿಕೊಳ್ಳುತ್ತಾರೆ, ಬೇಡಿಕೊಳ್ಳುತ್ತಾರೆ.

ಚಂಗಾವರದ ತೆಂಗಿನ ಮರದಡಿ

ಬಂಗಾರದ ದಟ್ಟಿ ಉಡುವೋನ ಎತ್ತಯ್ಯ

ಸಣ್ಣ ಬಾಲೇರು ತಡುದಾರೆ

ತುಗ್ಗಲಿ ವನದಾ ತುಗ್ಗಲಿ ಮರದಡಿಯ

ಬಗೆಬಗೆಯ ಬಟ್ಟೆ ಉಡುವೋನ ಎತ್ತಯ್ಯ

ಭದ್ರೆ ಬಾಲೇರು ತಡುದಾರೆ.

ಎತ್ತಯ್ಯನ ರೂಪಕ್ಕೆ ಮನಸೋತ ಗುಡ್ಡದ ಬೋರಿ ಎಂಬ ಮ್ಯಾಸಬೇಡರ ಹೆಣ್ಣು ಬೆನ್ನತ್ತುತ್ತಾಳೆ.

ಅಡವೀಯ ಗೊಲ್ಲಾಗೆ ಬೆಡಗಿನ ಸೂಳ್ಯಾಕೆ

ಅಡೆದಮ್ಮ ಕಂಡಾರೆ ಬಯ್ದಾಳು ಗುಡ್ಡದ ಬೋರಿ

ನೀನೋಗೆ ನಿನ್ನರಮನೆಗೆ

ಎಂದು ಎತ್ತಯ್ಯ ಬುದ್ದಿ ಹೇಳುತ್ತಾನೆ. ಆದರೂ ಗುಡ್ಡದ ಬೋರಿ ಬಿಡದೆ ಬೆನ್ನತ್ತಿ ಬಂದು ಎತ್ತಯ್ಯನ ಹಿಂಡನ್ನು ತಡೆಯುತ್ತಾಳೆ.

ಗುಡ್ಡದ ಬ್ಯಾಡರು ನಮ್ಮೀಗೆ ಹಳೆ ಮಕ್ಕಳು

ನೀನು ನಮ್ಮೀಗೆ ಕಿರುತಂಗಿ ಬೋರಮ್ಮ

ನೀನೋಗೆ ನಿನ್ನರಮನೆಗೆ

ಎಂದು ಎತ್ತಯ್ಯ ಸಮಾಧಾನದಿಂದಲೇ ಬುದ್ಧಿ ಹೇಳುತ್ತಾ ಅವಳ ಬಯಕೆಯನ್ನು ನಿರಾಕರಿಸುತ್ತಾನೆ.

ಕಂಕನೆಲ್ಲಿ ಸೊಪ್ಪು ಅಂಚಿಕ್ಕಿ ಉರಿದುಂಬ

ಕಂಕ ಬ್ಯಾಡರಿಗೆಲ್ಲೆ ಕುಲವಯ್ಯೊ ಗೊಲ್ಲಗೌಡ

ನಾನು ನಿನ್ನೀಗೆ ಪ್ರತಿಯಾಳು.

ಕಾಡುನೆಲ್ಲಿ ಸೊಪ್ಪು ಕೂಡಿಕ್ಕಿ ಉರಿದುಂಬ

ಕಾಡು ಬ್ಯಾಡರಿಗೆಲ್ಲೆ ಕುಲವಯ್ಯೊ ಗೊಲ್ಲಗೌಡ

ನಾನು ನಿನ್ನೀಗೆ ಪ್ರತಿಯಾಳು

ಎಂದು ಏನು ಹೇಳಿದರೂ ಗಂಟು ಬೀಳುತ್ತಾಳೆ. ಕರೆದುಣ್ಣಾಲು ಹಸುಕೊಟ್ಟರೆ ಇವಳು ತನ್ನನ್ನು ಬಿಡಬಹುದೆಂದು ಲೆಕ್ಕ ಹಾಕಿದ ಎತ್ತಯ್ಯ ಹಸುಗಳ ಆಮಿಷ ಒಡ್ಡುತ್ತಾನೆ.

ಗುಡ್ಡದ ಬೋರಮ್ಮ ಎತ್ತಾಕೆ ತಡುದಮ್ಮ
ಆವೆ ಕೊಡುತೀನಿ ಬಿಡುಸೆರಗ ಬೋರಮ್ಮ
ನೀನೋಗೆ ಏನ್ನ ಅರಮನೆಗೆ
ಆವುಗಳು ನಮುಗವೆ ಗೋವುಗಳು ನಮುಗವೆ
ದೇವರು ಕೊಟ್ಟಂತ ಸಕಲಾತು ಮಂಚದ ಮ್ಯಾಕೆ
ಜಾವೊತ್ತು ಬಾರೋ ಅರಮನೀಗೆ

ಎಂದು ಕರೆಯುತ್ತಾಳೆ. ಕೊನೆಗೆ ಎತ್ತಯ್ಯ ಅವಳ ಕೋರಿಕೆಯನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸುತ್ತಾನೆ.

ಗುಡ್ಡದ ಕಾವಲಿನಲ್ಲಿ ಬರಗಾಲ ಬಂದದ್ದರಿಂದ ಎತ್ತುಗಳನ್ನು 'ಸಂಡೂರಿನ ಕಾವಲಿಗೆ ಹೊಡೆಯುತ್ತಾನೆ. ಸಂಡೂರಿನ ಕಾವಲಿಗೆ ಹೋದರೆ ನಿನಗೆ ಮರಣ ಬರುತ್ತದೆ

ಮೂಗುತಿ ಮುರಿಯೋದು ಕಂಡೆ
ಮುಂದಲೆ ಸಿಡಿಯೋದು ಕಂಡೆ
ಮೂಡಲುಪ್ಪರಿಗೆ ಧಗಧಗ ಉರಿಯೋದು ಕಂಡೆ'

ಎಂದು ಹೆಂಡತಿ ಮಲ್ಲಮ್ಮ ಎಷ್ಟು ಹೇಳಿದರೂ ಕೇಳುವುದಿಲ್ಲ. "ಎಲ್ಲಿ ಹುಲ್ಲು ನೀರಿದೆಯೋ ಅದೇ ನನ್ನ ಮನಿ ಮಾರು" ಎಂದು ಹೊರಡುತ್ತಾನೆ. ಜೊತೆಗೆ ಬಾವಮೈದುನ ವಲಗಾನಿಯೂ ಹೋಗುತ್ತಾನೆ. ತಳಕಿನ ಗುಡ್ಡದಲ್ಲಿ ಎತ್ತಯ್ಯ ತನ್ನ ಸುಣ್ಣದ ಡಬ್ಬಿಯನ್ನು ಬಿಟ್ಟು ಬಂದಾಗ ಅದನ್ನು ತರಲು ಹೋದ ವಲಗಾನಿ ಸೂಳೆಯರ ಮೇಲೆ ಮನಸ್ಸಾಗಿ ಕುದುರೆ ಕುಂಟೆಗೆ ಹೋಗಿ ನಾಯಕಸಾನಿಯರ ಸಂಗದಲ್ಲಿ ಮೈಮರೆಯುತ್ತಾನೆ. ಇತ್ತ ಎತ್ತಯ್ಯನ ಸಂಗಸುಖ ಬಯಸಿ ಗುಡ್ಡದ ಬೋರಿ ಎತ್ತಯ್ಯನ ಬೆನ್ನತ್ತುತ್ತಾಳೆ. ದನ ತಿನ್ನುವ ಆಸೆಯಿಂದ ಬ್ಯಾಡರ ದಂಡು ಎತ್ತಯ್ಯನ ಮೇಲೆ ಬಿದ್ದಾಗ ಅವರನ್ನು ಹೊಡೆದುರುಳಿಸುತ್ತಾನೆ. ಗುಡ್ಡದ ಬೋರಿ ಎಷ್ಟು ಬೇಡಿದರೂ ಭೋಗ ಸುಖ ಕೊಡಲು ನಿರಾಕರಿಸಿದ ಎತ್ತಯ್ಯನ ಮೇಲೆ ಸೇಡು ತೀರಿಸಿಕೊಳ್ಳಲು ಸಂಡೂರಿನ ಬೊಮ್ಮನನ್ನು ಎತ್ತಯ್ಯನ ವಿರುದ್ಧ ಎತ್ತಿಕಟ್ಟುತ್ತಾಳೆ. ಸಂಡೂರು ಬೊಮ್ಮ ಮೋಸದಿಂದ ಎತ್ತಯ್ಯನನ್ನು ಸೆರೆಹಿಡಿದು ಜೈಲಿಗೆ ತಳ್ಳಿ ಚಿತ್ರಹಿಂಸೆ ಕೊಡುತ್ತಾನೆ. ಆದರೆ ಎತ್ತಯ್ಯನಿಗೆ ಏನೂ ಆಗುವುದಿಲ್ಲ. ಕೊನೆಗೆ ದಾಸಯ್ಯನ ವೇಷ ಧರಿಸಿಕೊಂಡು ಹೋಗಿ

ಎತ್ತಯ್ಯನ ತಲೆ ಕತ್ತರಿಸಿ ತಂದು ಗುಡ್ಡದ ಬೋರಿಗೆ ಕೊಡುತ್ತಾನೆ. ಅವಳು ಅದನ್ನು ಪೀಠ ಮಾಡಿಕೊಂಡು ಸ್ನಾನ ಮಾಡಬೇಕೆಂದು ಸನ್ನದ್ಧಳಾದಾಗ ಎತ್ತಯ್ಯನ ಬಾವಮೈದ ವಲಗಾನಿ ಅಲ್ಲಿಗೆ ಬಂದು ಸೊಂಡೂರಿನ ಬೊಮ್ಮನ ತಲೆ ಕತ್ತರಿಸಿ, ಎತ್ತಯ್ಯನ ರುಂಡ ಮುಂಡ ಜೋಡಿಸಿ ಜೀವ ಕೊಡುತ್ತಾನೆ. ಆದರೆ ಎತ್ತಯ್ಯ ಎಂಜಲು ಜನ್ಮ ಹೊರಲಾರೆ ಎಂದು ತಳಕಿನ ಗುಡ್ಡದಲ್ಲಿ ಪ್ರಾಣ ಬಿಡುತ್ತಾನೆ. ಅವನೊಂದಿಗೆ ವಲಗಾನಿ, ಆವಿನಗೂಡು, ಎತ್ತಿನಗೂಡು, ಚಿಕ್ಕರೆಂಬೆ, ಗೊಡ್ಡುಗಾಳಿ ಮುಂತಾದ ಹಸುಗಳು ಅಲ್ಲಿಯೇ ಮಡಿಯುತ್ತವೆ.

**ಚಿತ್ರದೇವರು :**

ಕಾಡುಗೊಲ್ಲರ ಪುರಾಣ ಪುರುಷ ಹಾಗೂ ಆರಾಧ್ಯ ದೈವ ಚಿತ್ರ ದೇವರು. ತಮ್ಮ ಶೀಲ ಶೌರ್ಯಗಳಿಂದ ಈ ಜನಾಂಗದ ಮಾದರಿ ನಾಯಕರು. ಜುಂಜಪ್ಪ, ಎತ್ತಪ್ಪರಂತಹ ಐತಿಹಾಸಿಕ ವೀರರೂ ಚಿತ್ರದೇವರ ಭಕ್ತರೆನಿಸಿದ್ದಾರೆ. ಚಿತ್ರದೇವರನ್ನು ಕುರಿತು ಹಾಡುವವರು ತೀರಾ ದುರ್ಲಭ. ಅಷ್ಟೇ ಅಲ್ಲ ಜುಂಜಪ್ಪ, ಎತ್ತಪ್ಪ ಇವರನ್ನು ಕುರಿತು ಕಾವ್ಯ ಸಂಗ್ರಹದ ಜೊತೆಗೆ ಪಿಹೆಚ್.ಡಿ ಸಂಶೋಧನೆಗಳೂ ನೆಡೆದಿದೆ. ಮೂರ್‍ನಾಲ್ಕು ಸಂಶೋಧನೆಗೆ ವೈವಿಧ್ಯ ಅಧ್ಯಯನಕ್ಕೆ ದಾರಿಯಾಗಿವೆಯಾದರೂ ಚಿತ್ರದೇವರನ್ನು ಕುರಿತು ಸಮಗ್ರ ಅಧ್ಯಯನ ಈತನಕ ನೆಡೆದಿಲ್ಲ. ಕಾವ್ಯ ಸಂಗ್ರಹವೂ ಆಗಿಲ್ಲ. ಇದಕ್ಕೆ ಕಾರಣ ಕಾವ್ಯ ಹಾಡುವವರ ಅಲಭ್ಯವೇ ಆಗಿದೆ ಎಂದು ಕಾವ್ಯ ಸಂಪಾದಕರಾದ ಚಿಕ್ಕಣ್ಣ ಯಣ್ಣೆಕಟ್ಟೆ ಅಭಿಪ್ರಾಯ ಪಡುತ್ತಾರೆ. ತೀನಂ ಶಂಕರನಾರಾಯಣರು ಚಿತ್ರದೇವರ ಕೆಲವೊಂದು ಹಾಡುಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ.

ಚಿತ್ರದೇವರು ಸ್ವಯಂ ಶಿವನ ಸೃಷ್ಟಿ. ಶಿವ, ಪಾರ್ವತಿಯರು ಭೂ ಸಂಚಾರಕ್ಕಾಗಿ ನಂದಿಯ ಮೇಲೆ ಹೊರಟ ಸಂದರ್ಭ, ಗೋವರ್ದನಗಿರಿಗೆ ಬೆಂಕಿ ಬಿದ್ದು ಅಲ್ಲಿನ ಸಕಲ ಜೀವರಾಶಿಯೆಲ್ಲಾ ಹಿಂಸೆಯಿಂದ ರೋದಿಸುತ್ತಿರುವಾಗ ಪಾರ್ವತಿ ಕಿವಿಗೆ ತಲುಪುತ್ತದೆ. ರಥ ನಿಲ್ಲಿಸಿ ಜನರ ನೋವಿಗೆ ಸ್ಪಂದಿಸಬೇಕೆಂದು ಪಾರ್ವತಿ ಶಿವನನ್ನು ಬೇಡಿಕೊಳ್ಳುತ್ತಾಳೆ. ಆಗ ಶಿವನು

ನಡಿಯಾಲ ಪಾರ್ವತಿಯೆ ನಾವೊರಿಗೋಗಾನ
ಅಂದಾನು ಶಿವನು ಮಾತು ಮುರಿಯೋನಂತೋ
ಶಿವನೆಂಬ ಮಾತು ಕೇಳಿ ಪಾರ್ವತಿಯು ಹೇಳುತ್ತಾಳೆ
ಕೇಳಲೇ ಮಾಸ್ವಾಮಿ ನಾನೊಂದ ಹೇಳುತ್ತೀನಿ
ಸುರಲೋಕ ನರಲೋಕ ದೇವಲೋಕ ಮೂರು
ಲೋಕದೊಳಗೆ ನಮ್ಮನ್ನು ಕಣ್ಣಿಂದ ನೋಡಿದರೆ

ಕಿವಿಯಾರ ಕೇಳಿದರೆ ಮುಂದಕ್ಕೆ ಹೋಗಾರು

ಅಂತಂದು ಕ್ಷಮಿಸೋದಿಲ್ಲ ನಮ್ಮನ್ನು ಸ್ವಾಮಿ

ದೇವರು ಅಂಬೋದಿಲ್ಲ ನಮ್ಮನ್ನು ಅಂಬೋಳಂತೋ

ಪಾರ್ವತಿಯ ಅತೀವ ಒತ್ತಡ ಜೀವ ಪ್ರೀತಿಗಳಿಂದ ರಥವನ್ನು ನಿಲ್ಲಿಸಿ ಶಿವ ಆ ಬೆಂಕಿ ಉರಿಯುತ್ತಿರುವ ಬೆಟ್ಟದ ಬಳಿ ಬಂದು ಬೆವರುತ್ತಾನೆ. ಬೆವರು ನೀರಿನಿಂದ ಒದ್ದೆಯಾದ ಬಟ್ಟೆಯನ್ನು ಪಾರ್ವತಿ ಆ ಬೆಟ್ಟದ ಬೆಂಕಿಗೆ ಹಿಂಡುತ್ತಾಳೆ. ಆ ಬೆಂಕಿಯಲ್ಲಿ ಹುಟ್ಟಿದವರೇ ಕಾಟಯ್ಯ, ಚಿತ್ರಯ್ಯ ಹಾಗೂ ನರಸಿಂಹ. ಈ ಮೂವರು ತಮ್ಮ ಮಕ್ಕಳೆಂದೆ ಭಾವಿಸಿದ ಶಿವ ಪಾರ್ವತಿಯರು ಚಿತ್ರಗಿರಿ ಪಟ್ಟಣವನ್ನು ನಿರ್ಮಿಸಿ ಪ್ರಕೃತಿ ಮಾತೆ ಮಕ್ಕಳನ್ನು ಪಾಲಿಸುವಂತೆ ಪ್ರಾರ್ಥಿಸಿ, ಕಾಟಯ್ಯನಿಗೆ 'ಚಿಂತಾಮಣಿ' ಎಂಬ ಕಾಲಜ್ಞಾನ ಹೊತ್ತಿಗೆಯನ್ನು, ಚಿನ್ನದ ಗಿಂಡಿ, ಬಂಗಾರದ ಬೆತ್ತವನ್ನು ಮತ್ತು ಹೊನ್ನು ಮೂರು ಮಣ, ತಾಮ್ರ ಮೂರು ಮಣ, ಕಬ್ಬಿಣ, ಉಕ್ಕು, ಬೆಳ್ಳಿ ಮೂರು ಮಣ, ರಣದಲ್ಲಿ ರಣಸೂರ, ರಣಭೇರಿ ಎಂಬ ಭೂಚಕ್ರದ ಜಂಪಾರೆ ಹೆಚ್ಚು ಗೊಡಗನ್ನು ಶಿವ ಈ ಮಕ್ಕಳಿಗೆ ನೀಡುತ್ತಾನೆ. ಇದೊಂದು ಛತ್ರಿಯಾಗಿದ್ದು ಅಲೌಕಿಕ ಶಕ್ತಿಯನ್ನು ಪಡೆದದ್ದು ಸ್ವಯಂ ನೆಡೆಯಬಲ್ಲದು. ಅಪೂರ್ವ ಪರಾಕ್ರಮ ತೋರಲೂ ಬಲ್ಲದು. ಇಂತಹ ವಸ್ತುವಿನ ಸಹಾಯದಿಂದ ಮಕ್ಕಳು ಬೆಳೆದು ದೊಡ್ಡವರಾದರು. ಹಿರಿಯನಾದ ಕಾಟಯ್ಯ ರಾಜ್ಯಭಾರದಲ್ಲಿ ಅನಾಸಕ್ತನಾದುದರಿಂದ ಚಿತ್ರಯ್ಯನೇ ಚಿತ್ರಗಿರಿ ಪಟ್ಟಣಕ್ಕೆ ರಾಜನಾಗುತ್ತಾನೆ. ಒಮ್ಮೆ ಬೇಟೆಗೆ ಹೋದ ಸಂದರ್ಭ ಬ್ರಾಹ್ಮಣರ ಬೊಮ್ಮಯ್ಯನ ಮಗಳು ಗಂಗೆ ಮಾಳಮ್ಮನಲ್ಲಿ ಮೋಹ ಉಂಟಾಗಿ ಅವಳನ್ನು ಒಲಿಸಿಕೊಳ್ಳುವ ಭರದಲ್ಲಿ ಬಹಳ ದಿನಗಳಕಾಲ ಕಾಡಲ್ಲೇ ಇದ್ದು ರಾಜ್ಯಭಾರವನ್ನು ಮರೆತುಬಿಡುತ್ತಾನೆ.

ಮೂಡಲ ತಿರುಗೆವರೆ| ಪಡುವಾನ ತಿರುಗೆವರೆ

ಟೆಂಕಾನೆ ತಿರುಗೆವರೆ| ಬಡಗಾನೆ ತಿರುಗೆವರೆ

ಮುರಾನೆ ದಿಕ್ಕೂನು ಸೋಸಿ ನೋಡೋರಂತೋ|

ಕಿಡಿಗಣ್ಣನು ಚಿತ್ರಯ್ಯನು ಕುಂತಾದ ನೋಡಿದಂತೋ|

ಅಂತೆಂಬ ಹೊತ್ತಿನಲ್ಲೋ| ಜಪದ ಮುನಿ ಕಾಟಯ್ಯ

ಚಿಂತಾಮಣಿ ಹೊತ್ತಿಗೆ ಬಗೆದು ನೋಡೋನಂತೋ

ಒತ್ತಿಗೆಯೂ ಓದಿದನಂತೋ| ನೋಡಣ್ಣಾ ಒತ್ತಿಗಾಗಿ ಕುಳುವದಲ್ಲೋ|

ಬೆಸ್ತರ ಹಳ್ಳಿಗೆ ಜಲಮಾನ ಮಗಳಂತೆ

ತುಪ್ಪದಂತಾ ಮುಖವಂತೆ ಮೊಸರಂತಾ ದೆಸೆವಂತೆ

ದೆಸೆವಂತೆ ಮಾಳಮ್ಮನು ಒತ್ತಿಗೆ ತಿಲುವುದಂತೋ|

ಬ್ರಾಹ್ಮಣರ ಬೊಮ್ಮಯ್ಯನ ತೀವ್ರ ವಿರೋಧದ ನಡುವೆಯೂ ಮದುವೆಗೆ ಒಪ್ಪಬೇಕಾಯಿತು.

ಚಿತ್ತಯ್ಯನ ರಾಜ್ಯ ಕಬಳಿಸಲು ಯತ್ನಿಸುತ್ತಿದ್ದ ಬೊಮ್ಮಯ್ಯನಿಗೆ ಸಕಾಲ ಒದಗಿ ಚಿತ್ರಗಿರಿ ರಾಜ್ಯದ ಭಾಗವಾದ ಗೋವರ್ಧನಗಿರಿ ಸಮೀಪದ ಕತ್ತಲು ಕರಿಮಲೆಯಲ್ಲಿ ಕಾಡು ಪ್ರಾಣಿಗಳು ಅಧಿಕವಾಗಿ ಜನರಿಗೆ ಕ್ರೂರವಾಗತೊಡಗುತ್ತವೆ. ಇವುಗಳನ್ನು ಅಡಗಿಸಲು ಚಿತ್ತಯ್ಯ, ಕಾಟಯ್ಯ, ನರಸಿಂಹರು ನಾಲ್ಕುಸಾವಿರ ನಾಯಿಗಳೊಡನೆ ಹೋರಡಬೇಕಾಯಿತು. ಆಗ ಗೊಡಗನ್ನು ಚಿತ್ರಗಿರಿಯ ನೆಲಮಾಳಿಗೆಯಿಂದ ತರಲು ಅಪಾರ ಬಲ, ಅನ್ನ ಸಂತರ್ಪಣೆ ಮಾಡಿ ಗೊಡಗನ್ನು ರಣಭೇರಿ ಹೆಂಡ ಕಹಳೆಯನ್ನು ತೆಗೆದುಕೊಂಡು ಕರಿಮಲೆಗೆ ಬಂದರು. ಕಾಟಯ್ಯನ ಸಲಹೆಯಂತೆ ಒಂಟಿಯಾಗಿದ್ದ ಗಂಗೆ ಮಾಳಿಗೆ 'ಮೂಳ' ಎಂಬ ನಾಯಿಯನ್ನು 'ಗಿಡುಗ' ಎಂಬ ಪಕ್ಷಿಯನ್ನು ನೀಡಿ ಸಲಹುತ್ತಾ ಕಾಲಕಳೆಯಬೇಕೆಂದು ಸೂಚಿಸುತ್ತಾರೆ. ಕರಿಮಲೆಗೆ ಬಂದು ಬೊಮ್ಮಯ ಮಾವನೂ ಸೇರಿದಂತೆ ನಾಲ್ಕು ದಿಕ್ಕುಗಳಿಗೂ ಒಬ್ಬೊಬ್ಬರು ಗುಡಾರ ಹಾಕಿ ಮಧ್ಯದಲ್ಲಿ ಮುತ್ತಿನ ಗೊಡಗನ್ನು ಇಟ್ಟು ಊಟಮಾಡಿ ಮಲಗುತ್ತಾರೆ.

ಮೂಡಾಲ ದಿಕ್ಕಿಗೆ ನರಸಿಂಹನ ಡೇರೇವು

ಪಡುವಲ ದಿಕ್ಕಿಗೆ ಚಿತ್ತಯ್ಯನ ಡೇರೇವು

ಬಡಗಾಲ ದಿಕ್ಕಿಗೆ ಬೊಮ್ಮಯ್ಯನ ಡೇರೇವು

ಟೆಂಕಾಲ ದಿಕ್ಕಿಗೆ ಕರಪಲ್ಕರ ಡೇರೇವು

ನಟ್ಟ ನಡವಗಲ ಬಟ್ಟಂ ಬೈಲಾಗ

ದೊಡ್ಡಾನೆ ಭೂತಾಳಿ ಗಜನಿಂಭೆ ಮರದಡಿಗೆ

ಜಪದ ಮುನಿ ಕಾಟಯ್ಯನ ಡೇರೇವು ಹೂಡಿಸೇಸಂತೋ.

ಕತ್ತಲು ಕರಿಮಲೆಗೆ ಸಮೀಪದಲ್ಲಿ 'ತಿರುಣಿ' ಎಂಬ ನಗರ, ಅದು ಕರಪಲ್ಲಿ ರಾಜನ ರಾಜ್ಯ ಅವನ ದಂಡಿನಲ್ಲಿ ಏಳುಸಾವಿರ ಕಳ್ಳ ಕೊರಮರಿದ್ದು, ದರೋಡೆಯಲ್ಲಿ ನಿಸ್ಸೀಮರು. ಇವರು ಚಿತ್ತಯ್ಯನ ಬೀಡಿನ ಗೊಡಗನ್ನು ಅಪಹರಿಸಲು ಯತ್ನಿಸಿ ಆಮೆಯ ಸಹಾಯದಿಂದ ಗೊಡಗನ್ನು ಚಮತ್ಕಾರಿಕ ರೀತಿಯಲ್ಲಿ ಅಪಹರಿಸುತ್ತಾರೆ.

ಚಿನ್ನದಂತ ಮಳೆಯಾಗಿ ರನ್ನದಂತ ಹೊಳೆಯಾಗಿ

ಬಂದವರು ಕಳ್ಳಕೊರಮರು ಕರಿಮಲೆಯ ಕಾಡಿಗೆ

ಹವಳದ ಗೊಡಗು ಅದರಗವರು ತೆಗೆದಾರಂತೋ

ದಿಟ್ಟಿಸಿ ನಿಟ್ಟುಸಿರು ಮೂರು ಮುಕ್ಕಾಲುಗಳಿಗೆ

ಒಳಗಾಗಿ ದಿಲ್ಲಿ ಪಟ್ಟಣದಿಂದ ಕೆಂಗರು ಮಲೆಗೆ ಹೋಗೋರಂತೋ.

ಬೆಳಗಾದ ಕೂಡಲೆ ಗೊಡಗು ಕಾಣೆಯಾಗಿರುವ ಸಂಗತಿಯಿಂದ ಚಿತ್ತಯ್ಯನ ದಂಡಿಗೆ ಆತ್ಮಬಲವೇ ಅಡಗುತ್ತದೆ.

ರಾಮರಾಮ ಗುರುವೇ ಕಿಡಿಗಣ್ಣನು ಚಿತ್ತಯ್ಯ

ಧರಣಿ ಮಂಡಲದುದ್ದಕ್ಕೂ ಬಿದ್ದಾನಂತೋ

ಬಂಗಾರದ ಗೊಡಬು ಚಂದವಿಲ್ಲ ಮುಂದೆ

ಜಂಗಮಯ್ಯ ಜ್ಞಾಪದ ಮುಂದೆ ಬಂಗಾರದ ಗೊಡಬು

ಕರಿಮಲೆಗೆ ಇಲ್ಲವಂತೋ.

ಕಾಟಯ್ಯನು ತನ್ನ ದಿವ್ಯಜ್ಞಾನದ ಹೊತ್ತಿಗೆ ತೆಗೆದು ನೋಡಿದಾಗ ಗೊಡಗು ಇರುವ ಜಾಗ ತಿಳಿಯುತ್ತದೆ. ಅದನ್ನು ತರುವ ಬಗ್ಗೆಗೆ ಚಿತ್ತಯ್ಯನೊಂದಿಗೆ ಮಾತಾಡುತ್ತಾರೆ. ಅಗಸರ ಮನೆಯ ಲಕ್ಕಿಯ ಸತ್ತ ಮಗನಂತೆ ಮಡಿ ಬಟ್ಟೆಗಳೊಡನೆ ವೇಷಹಾಕಿಕೊಂಡು ಅರಮನೆ ಪ್ರವೇಶ ಪದ್ಮಾವತಿ, ಎಂಬ ರಾಜವೇಶ್ಯೆಯ ಸಹವಾಸ, ಸಿಪಾಯಿಯಾಗಿ ವರ್ತಕರ ಅಂಗಡಿ ಲೂಟಿ, ಹೀಗೆ ಹಲವು ವೇಷಗಳನ್ನು ಹಾಕಬೇಕಾಗುತ್ತದೆ. ದಾರಿ ತಪ್ಪಿದಾಗಲ್ಲೆಲ್ಲಾ ಚಿತ್ತಯ್ಯ ಕಾಟಯ್ಯನನ್ನು ನೆನೆದು ಸಮಸ್ಯೆಗೆ ಪರಿಹಾರ ಕಂಡುಕೊಳ್ಳುತ್ತಾನೆ. ಕೊನೆಗೆ ಚಿತ್ರಗಿರಿ ಕಾವಲುಗಾರನನ್ನು ಕೊಂದು ತಿರುಣಿ ಪಟ್ಟಣ ಸೇರಿ ಗೊಡಗಿದ್ದ ತಾಣವನ್ನು ಪತ್ತೆಹಚ್ಚುತ್ತಾರೆ. ಭಯಂಕರ ಯುದ್ಧವೂ ಆಗುತ್ತದೆ. ನೆಲಮಾಳಿಗೆಯಲ್ಲಿದ್ದ ಗೊಡಗನ್ನು ತೆಗೆದುಕೊಂಡು ಬರುತ್ತಾನೆ.

ಗೊಡಗನ್ನು ತೆಗೆದುಕೊಂಡು ಬರುವಾಗ ಚಿತ್ತಯ್ಯನಿಗೆ ಅಹಂ ಬರುತ್ತದೆ. ಕಾಟಯ್ಯನೂ ಮರೆತು ಹೋಗುತ್ತಾನೆ. ಮೊದಲು ಮುಂಡಾದ್ರಿ ಎಂಬ ಕಪ್ಪೆ ಚಿತ್ತಯ್ಯನಿಗೆ ಉಗಿಯುತ್ತಾ, ಮೈ ಪರುಚುತ್ತಾ ಗಾಸಿಗೊಳಿಸುತ್ತದೆ.

ಏಟೋತ್ತಿಗೆ ತಿಂದೆನು ನಾನು| ಮಂಡಾದ್ರಿ ಎಟೋತ್ತಿಗೆ ಸುಂಗೆಸು ನಾನು

ಚಿತ್ತಯ್ಯನು ನೋಡಣ್ಣಾ ಬಂಡೆ ಸರಕಿಗೆ ನಡೆದಾನಂತೋ

ಬಾಗಿಲು ಸರಕಿನಲ್ಲೋ ನೋಡಣ್ಣಾ| ಮಂಡಾದ್ರಿ ನೋಡಣ್ಣಾ

ದೇಕಿ ದೇಕಿಕೊಂಡು ಬರುವುದೆಲ್ಲೋ|

ದೇಕಿ ದೇಕಿಕೊಂಡು ಬರುವುದಲ್ಲೋ| ನೋಡಣ್ಣಾ ಕಪ್ಪೆ

ಕಿಡಿಗಣ್ಣನು ಚಿತ್ತಯ್ಯನ ಜಿಟ್ಟಿಡಿದು ಕೊಂಡು ಗಡಸೋದಲ್ಲೋ

ಮೇಲುಚ್ಚೆ ಹುಯ್ಯೋದಲ್ಲೋ। ನೋಡಣ್ಣ

ಚಿತ್ತಯ್ಯನ ಮುಖ ತುಂಬಾ ಉಗಳಾದಂತೋ।

ಕೊನೆಗೆ ಕಾಟಯ್ಯನ ಪ್ರವೇಶದಿಂದ ಕಪ್ಪೆ ಸೋತು ಪ್ರಾಣಭಿಕ್ಷೆ ಬೇಡಿ ಮುಂಗಾರು ಮಳೆಯಲ್ಲಿ ಚಿತ್ತಯ್ಯ, ಕಾಟಯ್ಯನ ಕೀರ್ತನೆ ಮಾಡುವುದಾಗಿ ಪ್ರಾರ್ಥಿಸುತ್ತದೆ. ಇದಾದ ಮೇಲೆ ಒಂದು ಮೊಲ ಚಿತ್ತಯ್ಯನನ್ನು ಅಡ್ಡಗಟ್ಟಿ ಆತನ ನಾಲ್ಕು ಸಾವಿರ ನಾಯಿಗಳನ್ನು ಕೊಂದು ಹಾಕುತ್ತದೆ. ಮೊಲದ ಅಸಾಧಾರಣ ಪರಾಕ್ರಮದಿಂದ ತತ್ತರಿಸಿದ ಚಿತ್ತಯ್ಯ ವ್ಯಸನ ಪೀಡಿತವಾಗಿರುವ ಸಂಗತಿಯನ್ನು ಆತನ ಮಡದಿ ಮಾಳಮ್ಮನಿಗೆ ಚಿತ್ತಯ್ಯನೆ ಪತ್ರ ಬರೆದು ತಿಳಿಸುತ್ತಾನೆ.

ಆನೆ ಆನೆಗೂ ಜಗಳ ಆನೆ ಮರಿಗೆ ಜಗಳ

ಜಾಣಿಗೆ ಜಗಳ ಬಹು ಜಗಳ ಮಾಳಮ್ಮ ನೀನು

ಸಾಕಿದ ಒಂದು ಮೂಳೊಂದು ಯಕ್ಕಲ ಕಳಿಸಬೇಕೆಂತ ಬರೆದಾನಂತೊ

ಒಂಟಿಗರ ಬಹು ಜಗಳ ಮಾಳಮ್ಮ ನೀನು ಸಾಕಿದ ಗಿಡುಗಾನ ಕಳಿಸಬೇಕಂತೋ

ಅಂತೆಂಬ ಹೊತ್ತಿಗೆಲ್ಲೊ ಮಾಳಮ್ಮ ತೂಕದ ಸಕ್ಕರೆ

ಕಲೆಸ್ಯಾಳಲ್ಲೋ : ತೂಕದ ಸಕ್ಕರೆ ತರಿಸ್ಯಾಳಲ್ಲೋ ಮಾಳಮ್ಮ

ಗಿಡುಗಾನೂ ಮೂಳಣ್ಣನಿಗ್ಗೂ ಹಬ್ಬದಡಿಗೆ ನೆಡೆಸಾಳಂತೋ

ಮಾಳಮ್ಮ ಚಿತ್ತರಗಿರಿ ಅರಮನೆಯೊಗೆ ಮಾಳಣ್ಣನಿಗೂ ಗಿಡೂಗಣ್ಣನಿಗೂ

ಹಬ್ಬದಡಿಗೆ ಮಾಡೋಳಂತೋ। ಹಬ್ಬದಡಿಗೆ ಮಾಡೋಳಂತೋ।

ಅಗ್ಗರಣಿ ಕಾಯೋದಲ್ಲೋ। ಹಾಲೂನೆ ಕಾಯೋದಲ್ಲೋ।

ಬಾನಗಳೇ ಇಳಿದಾವಲ್ಲೋ। ಜಾಜಿ ಮಲ್ಲಿಗೆ ನೋಡೋ।

ಜೀವತಿಗೆ ಅರಳೊದಂತೋ।

ಆಕೆ ಕೂಡಲೆ ತಾನು ಸಾಕಿದ್ದ 'ಮೂಳಣ್ಣ' ಎಂಬ ನಾಯನ್ನು 'ಗಿಡುಗ' ಎಂಬ ಪಕ್ಷಿಯನ್ನು ಚಿತ್ತಯ್ಯನ ಸಹಾಯಕ್ಕೆ ಕಳುಹಿಸುತ್ತಾಳೆ. ಪರಾಕ್ರಮಿ ಮೊಲದ ಮೇಲೆ ಗಿಡುಗಣ್ಣ ಮೂಳಣ್ಣರಿಬ್ಬರೂ ಹೋರಾಡಿ ಮೊಲವನ್ನು ಕೊಲ್ಲುತ್ತದೆ. ಇದರಿಂದ ಚಿತ್ತಯ್ಯನಿಗೆ ಸಮಾಧಾನವಾಗುವ ಬದಲು 'ಅವಮಾನ' ಎಂದೇ ಭಾವಿಸುತ್ತಾನೆ. ತಾನು ಮಹಾ ಪರಾಕ್ರಮಿ ಎಂದು ಪ್ರಸಿದ್ಧವಾದರೂ ನನ್ನ ಹೆಂಡತಿ ಅರ್ಥಾತ್ ಹೆಣ್ಣೆಂಗಸೊಬ್ಬಳು ನನಗೆ ಸಹಾಯ ಮಾಡಬೇಕಾಯಿತಲ್ಲಾ ಎಂದು

ಕ್ರೋಧಗೊಂಡು ಪಕ್ಕದಲ್ಲೇ ಇದ್ದ ಗಿಡುಗ ಮತ್ತು ನಾಯಿಗೆ ಚೆನ್ನಾಗಿ ಬಾರಿಸುತ್ತಾನೆ. ನಾಯಿ, ಗಿಡುಗರ ದುಃಖ ಅರಮನೆಯಲ್ಲಿದ್ದ ಗಂಗೆ ಮಾಳಮ್ಮನಿಗೆ ತಿಳಿಯುತ್ತದೆ. ಆಗ ವಿಷಯ ತಿಳಿದ ಗಂಗೆಮಾಳಿ ಕೆರಳಿ ಕೆಂಡವಾಗುತ್ತಾಳೆ. ರಣಾಗ್ರಕ್ಕೆ ಓಡೋಡಿ ಬರುತ್ತಾಳೆ. ವಾಗ್ವಾದಕ್ಕಿಳಿಯುತ್ತಾಳೆ. ಕೊನೆಗೆ ನಿನ್ನಂತಹ ವಿಶ್ವಾಸ ಘಾತುಕನೊಂದಿಗೆ ಜೀವನ ನಡೆಸುವುದರಲ್ಲಿ ಅರ್ಥವಿಲ್ಲ ಎಂದು ತನ್ನ ಗಂಡನ ಮೂಗುತಿಯನ್ನು ತೆಗೆದು ಬಿಸಾಕಿ ದೇಶಾಂತರ ಹೊರಡುತ್ತಾಳೆ. ಚಿತ್ರಯ್ಯ, ಕಾಟಯ್ಯ, ನರಸಿಂಹ ಇವರುಗಳು ಗೊಡಗಿನೊಂದಿಗೆ ಚಿತ್ರಗಿರಿಯಲ್ಲಿ ನೆಲೆನಿಲ್ಲುತ್ತಾರೆ.[೨೬]

**ಪುರ್ಲಹಳ್ಳಿ ಬೂತಪ್ಪ :**

ಜುಂಜಪ್ಪನ ಸಮಕಾಲೀನನಾಗಿ, ಜುಂಜಪ್ಪನಿಗಿಂತಲೂ ದೊಡ್ಡವನಾಗಿ ಜುಂಜಪ್ಪನ ಕಾವ್ಯದಲ್ಲಿ ಬರುವ 'ಪುರಲೇಹಳ್ಳಿ ಬೂತ' ವಿಷ್ಣುವಿನ ಒಂದು ಅವತಾರ. ಜುಂಜಪ್ಪನ ತಂದೆ ಕೆಂಗರುಮಲ್ಲೇಗೌಡನ ಮದುವೆ ಸಂದರ್ಭದಲ್ಲಿ, ಜುಂಜಪ್ಪನ ಮಾವಂದಿರು ತಂಗಿ ಸಿನ್ನಮ್ಮನನ್ನು ಕೆಂಗರು ಮಲ್ಲೇಗೌಡನಿಗೆ ಮದುವೆ ಮಾಡಿಕೊಡಬೇಕಾದರೆ ಗಂಡಿನ ಜೊತೆಗೆ ಇಪ್ಪತ್ತನಾಲ್ಕು ಪಲ್ಲ ಅಕ್ಕಿಯ ಅನ್ನ ಊಟ ಮಾಡುವ ಜನ ಬಂದರೆ ಮಾತ್ರ ಮದುವೆ ಮಾಡಿಕೊಡುವುದಾಗಿ ಶರತ್ತು ಹಾಕುತ್ತಾರೆ. ಆಗ ವಿಷ್ಣುವು ಭೂಲೋಕಕ್ಕೆ ಧುಮುಕಿ ತಳುಕಿನ ಗುಡ್ಡದೊಬ್ಬೆನೆಯೊಳಗೆ ಭೂಮಿಯ ಹೊಟ್ಟೆಯೊಳಗಿಂದ ಏಳೆತ್ತಿನ ಕಣದಗಲ 'ಭೂತಪ್ಪ'ನಾಗಿ ಅವತಾರವೆತ್ತುತ್ತಾನೆ.

ಜುಂಜಪ್ಪನಿಗೆ ನೆರವಾಗಲೆಂದೇ ಜಲ್ಮವೆತ್ತಿದವನು ಪುರಲಹಳ್ಳಿ ಬೂತಪ್ಪ. ಜುಂಜಪ್ಪನ ತಾಯಿ ಜುಂಜಪ್ಪ ಒಡ್ಡಿದ ಸತ್ವ ಪರೀಕ್ಷೆಯಲ್ಲಿ ಗೆದ್ದಾಗ, ಜುಂಜಪ್ಪ ಹಾಲಡಿಗೆ ಮಾಡಿಸಿ ದೇವಾನು ದೇವತೆಗಳಿಗೆ ಊಟಕ್ಕೆ ಆಹ್ವಾನಿಸುತ್ತಾನೆ. ಜುಂಜಪ್ಪನ ಸ್ನೇಹಿತರಾದ ಒಂಬತ್ತು ಜನ ರಂಗಪ್ಪಗಳೂ ಆಹ್ವಾನಿಸಲ್ಪಡುತ್ತಾರೆ. ಆದರೆ ಜುಂಜಪ್ಪ ಪುರ್ಲಹಳ್ಳಿ ಬೂತಪ್ಪನನ್ನು ಕರೆಯಲು ಮರೆತಾಗ ಬೂತಪ್ಪ ಜುಂಜಪ್ಪನ ಮೇಲೆ ಸಿಟ್ಟಾಗುತ್ತಾನೆ. ಜುಂಜಪ್ಪನ ಮಾವಂದಿರಿಂದ ಚಿತಾವಣೆಗೊಂಡ ತಾಳೇದುರ್ಗಿ ಜುಂಜಪ್ಪನನ್ನು ನುಂಗಲು 'ತನ್ನ ಕಾವಲಿಗೆ ಬಂದು ನಿನ್ನ ಸಾಮರ್ಥ್ಯವನ್ನು ತೋರಿಸು ಎಂದು ಸವಾಲು ಪತ್ರ ಕಳುಹಿಸುತ್ತಾಳೆ. ಜುಂಜಪ್ಪ ತಾಳೇದುರ್ಗಿಯನ್ನು ಸಂಹರಿಸುವಂತಿಲ್ಲ, ಹಾಗೆ ಮಾಡಿದರೆ ಸ್ತ್ರೀಹತ್ಯಾ ದೋಷಕ್ಕೆ ಗುರಿಯಾಗಬೇಕಾಗುತ್ತದೆ. ಜುಂಜಪ್ಪ ಇಕ್ಕಟ್ಟಿಗೆ ಸಿಲುಕಿದಾಗ ಅವನಿಗೆ ಯಾರೂ ನೆರವಿಗೆ ಬರುವುದಿಲ್ಲ. ಸ್ನೇಹಿತರಾದ ಒಂಬತ್ತುಜನ ರಂಗಪ್ಪಗಳೂ ಮಾತುಕೊಟ್ಟು, ತಾಳೇದುರ್ಗಿಗೆ ಹೆದರಿ ಕೈಕೊಡುತ್ತಾರೆ. ಪುರ್ಲಹಳ್ಳಿ ಬೂತಪ್ಪ ಜುಂಜಪ್ಪನ ಮೇಲಿನ ದ್ವೇಷ ಮರೆತು

ಏಳು ನಾಮದ ಒಡೆಯ

ಪಟೆ ಪಟೆ ನಾಮಗಳನ್ನ ಧರಿಸಿ

ಇಟ್ಟಗೇರಿ ಜಯಗಳ ಜಾಗಂಟೆ

ತುಂಬುಗಾತ್ರ ಭವನಾಸಿ

ಮೂಡೆಗಾತ್ರ ಶಂಕು

ಬಲಮುರಿ ದೊಣ್ಣೆ ಹೆಗಲಮೇಲೆ

ಕೈನಲ್ಲಿ ಗರುಡುಗಂಬ ಇಡಕೊಂಡು

ತಾಳೇದುರ್ಗಿಯನ್ನು ಸಂಹರಿಸುತ್ತಾನೆ. ಜುಂಜಪ್ಪನಿಗೆ ಭಾಷೆಕೊಟ್ಟು ಆಪತ್ತಿನಲ್ಲಿ ಸಹಾಯಕ್ಕೆ ಬರದ ಜುಂಜಪ್ಪನ ಸ್ನೇಹಿತರನ್ನು ಶಿಕ್ಷಿಸಲು ಬೂತಪ್ಪ ರಥದ ಗಾಲಿಯ ಅಚ್ಚನ್ನು ತೆಗೆದುಕೊಂಡು ಕಾಯಿಸಿ ಬರೆ ಎಳೆಯಲು, ಅವರಿಗೆ ಬುದ್ದಿ ಕಲಿಸಲು ಮುಂದಾಗುತ್ತಾನೆ. ಅವರು ರಕ್ಷಣೆಗಾಗಿ ಜುಂಜಪ್ಪನಲ್ಲಿಗೇ ಓಡಿಬರುತ್ತಾರೆ. ಸ್ನೇಹಿತರ ತಪ್ಪನ್ನು ಕ್ಷಮಿಸಿದ ಜುಂಜಪ್ಪ ಅವರಿಂದ ಬೂತಪ್ಪನಿಗೆ ಕ್ಷಮೆ ಕೇಳುವಂತೆ ಸ್ನೇಹಿತರಿಗೆ ಹೇಳುತ್ತಾನೆ. ಅವರೆಲ್ಲರೂ ಒಂದೊಂದು ಅಡಕೆ, ಎಲೆ, ಮೂರು ದುಡ್ಡು ತಪ್ಪುಕಾಣಿಕೆ ಕೊಟ್ಟು, ತಾವು ಎಲ್ಲೆಲ್ಲಿ ನೆಲೆಸಿರುವರೋ ಅಲ್ಲೆಲ್ಲಾ ತಮ್ಮ ಮುಂಭಾಗದಲ್ಲಿ ಬೂತಪ್ಪನಿಗೆ ಸ್ಥಾನಕೊಟ್ಟು ತಮಗಿಂತ ಮೊದಲು ಬೂತಪ್ಪನಿಗೆ ಅಗ್ರ ಪೂಜೆ ನೆಡೆಸುವಂತೆ ಮಾತು ಕೊಡುತ್ತಾರೆ. ಜುಂಜಪ್ಪ ಬೂತಪ್ಪನನ್ನು ಪುರ್ಲಹಳ್ಳಿಯಲ್ಲಿ ಪ್ರತಿಷ್ಠಾಪಿಸಿ ಗುಡಿಕಟ್ಟಿಸಿದನು. ಪ್ರತೀ ಯುಗಾದಿ ಹಬ್ಬದ ಮಾರನೆಯ ದಿನ ಜಾತ್ರೆಯಾಗಲಿ ಎಂದು ಆಶೀರ್ವದಿಸಿದನು. 'ನನಗಿಂತ ಮೊದಲು ನಿನಗೆ ಮೊದಲ ಪೂಜೆಯಾಗಲಿ, ನೀನು ರಗುತ ಶಾಂತಿಯವನು, ನಾನು ಸೋಕು ಬೋಜನದವನು ನಾನು ನಿನಗಿಂತ ಒಂದು ಮೈಲು ದೂರದಲ್ಲಿ ನೆಲೆಗೊಳ್ಳುತೇನೆ ಎಂದು ಆಶೀರ್ವದಿಸಿದನು'[೭೭]

**ಬೇವಿನಹಳ್ಳಿ ಕರಿಯಮ್ಮ :**

ಬೇವಿನಹಳ್ಳಿ ಕರಿಯಮ್ಮ ಸಿರಾ ತಾಲ್ಲೂಕಿನ ಪ್ರಮುಖ ಗ್ರಾಮದೇವತೆ. ಈಕೆಯ ಮೂಲ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನಿಂದ ೨೯ ಕಿ.ಮೀ ದೂರದ ತಳಕು ಗ್ರಾಮ. ನವ ಶಕ್ತಿಯರಲ್ಲಿ ಈಕೆ 'ಮಾರಿ' ಇತರರು ಆದಿಶಕ್ತಿ, ಅಂಕಾಳಮ್ಮ, ಪೀಠಾರಿ, ಭದ್ರಕಾಳಿ, ದುರ್ಗ, ಚಾಮುಂಡಿ, ಪೂರ್ಣಾ ಮತ್ತು ಪುಷ್ಕಲಾ, 'ಗೌರಸಂದ್ರದ ಮಾರಮ್ಮ'ನೇ ತನ್ನ ಮುಂದಿನ ಜನ್ಮದಲ್ಲಿ ಬೇವಿನಹಳ್ಳಿ ಕರಿಯಮ್ಮಳಾಗಿದ್ದು, ಅಂಬೇರಾಯ, ತುಂಬೇರಾಯರ ದನಗಳನ್ನು ಕಾಯಲು ಎತ್ತಯ್ಯ, ಜುಂಜಪ್ಪರ ಕಥೆ ಕಾವ್ಯಗಳಲ್ಲಿ ಅಲೌಕಿಕ ಶಕ್ತಿ ಪಡೆದ ಉಗ್ರದೇವತೆಯಂತೆ ಕಾಣಿಸಿಕೊಳ್ಳುವ ಕರಿಯಮ್ಮ ಅವತರಿಸಿ ಬಂದ ಬಗೆಗೆ ಸ್ಥಳೀಯ ಪುರಾಣವಿದೆ. ಅದರಂತೆ ಎತ್ತಪ್ಪನ ಗೋವುಗಳಿಗೆ ಜಾಡ್ಯ ಬರದಂತೆ ಹಾಗೂ ರಾಕ್ಷಸರ ಕಿರುಕುಳದಿಂದ ರಕ್ಷಣೆ ಪಡೆಯಲು ಎತ್ತಪ್ಪ ವಿಷ್ಣುವನ್ನು ಪ್ರಾರ್ಥಿಸಿ ಕರಿಯಮ್ಮಳನ್ನು ಬೇವಿನಹಳ್ಳಿಯಲ್ಲಿ ಪ್ರತಿಷ್ಠಾಪಿಸಿದ. ಎತ್ತಪ್ಪ, ಜುಂಜಪ್ಪ ಯಾವುದಾದರೂ ಸಂಕಷ್ಟಗಳಿಗೆ ಸಿಲುಕಿದಾಗ ಅವರ ರಕ್ಷಣಾ ದೇವತೆಯಾಗಿ ಬಂದು

ಸಹಾಯಕ್ಕೆ ನಿಲ್ಲುತ್ತಾಳೆ. ತನಗೆ ಬೇಕೆನಿಸಿದಾಗ ಬೇಕಾದ ರೂಪ ಪಡೆಯುವ ಕರಿಯಮ್ಮ ಕಾಡುಗೊಲ್ಲರ ಕಾವ್ಯಗಳಲ್ಲಿ ಚಿಕ್ಕ ಬಾಲಕಿಯಂತೆ, ಕಣಿ ಹೇಳುವ ಕೊರವಂಜಿಯಂತೆ ಕಾಣಿಸಿಕೊಳ್ಳುತ್ತಾಳೆ. ಕಾಡುಗೊಲ್ಲ ಬೇಡ ಜನಾಂಗಗಳ ಕುಲದೇವತೆಯಾಗಿ ಈ ಜನಾಂಗದ ಕಥೆ, ಕಾವ್ಯಗಳಲ್ಲಿ ಹಲವು ಪಾಳೇಗಾರರ ಇತಿಹಾಸದಲ್ಲಿ ಬೇವಿನಹಳ್ಳಿ ಕರಿಯಮ್ಮನ ಪಾತ್ರ ಪ್ರಮುಖವಾಗಿ ಕಾಣಿಸಿಕೊಳ್ಳುತ್ತದೆ. ಈಕೆಯ ವಿಚಾರವಾಗಿ ಹಲವು ಕಡೆ ಹಲವಾರು ಕಥೆಗಳು ಪ್ರಚಲಿತವಾಗಿವೆ. ಕಷ್ಟ ನಷ್ಟಕ್ಕೆ ಒಳಗಾದ ಭಕ್ತಾದಿಗಳಿಗೆ ಅಮ್ಮನಾಗಿ ಹರಸಿ ಆರ್ಶೀವಾದಿಸಿದ ದಂತಕಥೆಗಳೂ ಈ ಪ್ರದೇಶದಲ್ಲಿ ನೂರಾರು ಕೇಳಿಬರುತ್ತವೆ.

ಕಂಡುಗದ ಕರಿಯಮ್ಮನ ಬಗೆಗಿರುವ ದಂತ ಕತೆಯೊಂದು ಹೀಗಿದೆ.[೨೧] ಕಂಡುಗದ ಕರಿಯಮ್ಮ ಎಮ್ಮೇರಹಳ್ಳಿ ಹಾಗೂ ಸುತ್ತಮುತ್ತಲಿನ ಏಳೂರು ಗ್ರಾಮದೇವತೆ. ಇಂದು ಕರಿಯಮ್ಮ ನೆಲೆಗೊಂಡಿರುವ ಜಾಗದಲ್ಲಿ ಹಿಂದೆ ಗೊಲ್ಲರ ಉದ್ದಂಡೇಗೌಡ ಕುರಿ ರೊಪ್ಪ ಹಾಕಿಕೊಂಡಿದ್ದರು. ಅವರು ಮಜ್ಜಿಗೆ ಕಡೆಯುವ ಜಾಗದಲ್ಲಿ ಒಂದು ಕಲ್ಲುಗುಂಡು ಮೇಲಕ್ಕೆ ಉದ್ಭವಗೊಳ್ಳುತ್ತಿತ್ತು. ಅದನ್ನು ಅವರು ಒಳಕ್ಕೆ ಕುಟ್ಟುತ್ತಿದ್ದರು. ಒಂದು ದಿನ ಕುರಿಗಳೆಲ್ಲಾ ಮೇಲೇಳದೆ ಮಲಗಿಬಿಟ್ಟವು. ಕಣಿ ಕೇಳಿದಾಗ ಕರಿಯಮ್ಮ ಉದ್ಭವಗೊಳ್ಳುತ್ತಿದ್ದಾಳೆ, ಅವಳಿಗೆ ನೀವು ಒಂದು ಗುಡಿ ಕಟ್ಟಿಸಿದರೆ ಕುರಿಗಳು ಮೇಲೇಳುತ್ತವೆ ಎಂದು ಹೇಳಿದರು. ಅದರಂತೆ ಗೊಲ್ಲಗೌಡ ಹಾಲು ತುಪ್ಪದಲ್ಲಿ ಮಣ್ಣು ಕಲೆಸಿ ದೇವಸ್ಥಾನ ಕಟ್ಟಿಸಿ ಕಂಚಿನ ಅರೆ, ಕಳಸ, ವಿಗ್ರಹ ಮಾಡಿಸಿದರು. ಆಗ ದೇವತೆ ತನಗೆ ಎದರು ರೋಮದ ಕುರಿಯನ್ನು ಬಲಿಕೊಡಬೇಕೆಂದು ಕೇಳಿತು. ಎದುರು ರೋಮದ ಕುರಿಗಾಗಿ ಎಲ್ಲೊಲ್ಲೂ ಹುಡುಕಿದಾಗ ಎಲ್ಲಿಯೂ ಸಿಗದೆ ದಣಿದ ಉದ್ದಂಡೇಗೌಡ ಒಮ್ಮೆ ನೀರು ಕುಡಿಯಲು ಒಂದು ಬಾವಿಯಲ್ಲಿ ಇಳಿದಾಗ ನೀರಿನಲ್ಲಿ ತನ್ನ ಪ್ರತಿಬಿಂಬ ಕಂಡು ಎದುರು ರೋಮದ ಕುರಿ ಎಂದರೆ ತಾನೇ ಎಂದು ಭಾವಿಸಿ, ದೇವತೆ ತನ್ನನ್ನೇ ಬಲಿ ಕೇಳಿರಬಹುದೆಂದು ತಿಳಿದು ತಾನೇ ಬಲಿಯಾಗಲು ಮುಂದಾಗುತ್ತಾನೆ. ಕರಿಯಮ್ಮ ಕೊರವಂಜಿ ರೂಪದಲ್ಲಿ ಬಂದು ಈ ರೀತಿ ಹೇಳಿದಳು. ಸಿರಾ ಕ್ವಾರೆಯ ಏರಿಯ ಮೇಲೆ ಏಳುಜನ ನೀರಗಂಟೆಯರು ಮಲಗಿದ್ದಾರೆ. ಅವರಲ್ಲಿ ಮಧ್ಯಭಾಗ ಮಲಗಿದವನ ತಲೆ ಕಡಿದು ತರಬೇಕೆಂದು ಕಣಿ ಹೇಳಿದಳು. ಅದರಂತೆ ಉದ್ದಂಡೇಗೌಡ ಛಲವಾದಿ ಮಲ್ಲಯ್ಯ, ಮಡುವಾಳಿ ತಿಮ್ಮಯ್ಯರೊಂದಿಗೆ ಪಂಜು ಹಚ್ಚಿಕೊಂಡು ಹೋಗಿ ಆ ನೀರಗಂಟಿಯ ತಲೆ ಕಡಿದು ತಂದಾಗ ಉಳಿದ ನೀರಗಂಟಿಗಳು ಪಾಳೇಗಾರ ರಂಗಪ್ಪನಾಯಕನಿಗೆ ದೂರಿತ್ತರು. ರಂಗಪ್ಪನಾಯಕ ತಲೆ ಕಡಿದವರನ್ನು ಪತ್ತೆ ಹಚ್ಚಲು ಸೈನಿಕರನ್ನು ಕಳುಹಿಸಿದನು. ಅವರು ರಕ್ತದ ಕಲೆಯ ಜಾಡು ಹಿಡಿದು ದೇವಸ್ಥಾನದ ಹತ್ತಿರ ಬಂದರು. ಅಲ್ಲಿ ತಲೆಯನ್ನು ಒಂದು ಗೋಡೆಯಿಂದ ಮುಚ್ಚಲಾಗಿತ್ತು. ಗೂಡೆ ತೆಗೆದು ನೋಡಿದಾಗ ಕುರಿಯ ತಲೆ ಕಂಡಿತು. ಸೈನಿಕರು ವಾಪಸ್ಸಾದರು. ಕರಿಯಮ್ಮ ಪವಾಡದಿಂದ ತಮ್ಮನ್ನು ರಕ್ಷಿಸಿದ್ದರಿಂದ ಹನ್ನೆರಡು ದವಣಿ

ಕುರಿ ಕಡಿದು, ಕಂಡುಗದ ಅಕ್ಕಿ ಅನ್ನ ಬಸಿದು ಕರಿಯಮ್ಮಳ ಉತ್ಸವ ಮಾಡಿದರು. ಆಗ ಕರಿಯಮ್ಮ ಸೋಮನ ಮುಖವಾಡ ಧರಿಸಿದ್ದ ಕೊಮಾರನ ಮೈಮೇಲೆ ಬಂದು ಅಷ್ಟೂ ಅನ್ನವನ್ನು ತಿಂದು ಹಾಕಿದಳು. ಕಂಡುಗದ ಅನ್ನ ತಿಂದುದ್ದರಿಂದ 'ಕಂಡುಗದ ಕರಿಯಮ್ಮ' ಎಂದು ಕರೆಯತೊಡಗಿದರು. ಈಕೆಯ ಮಹಿಮೆಯನ್ನು ನಂಬಿದ ಪಾಳೇಗಾರ ರಂಗಪ್ಪನಾಯಕ ಕರಿಯಮ್ಮಳ ಭಕ್ತನಾದ. ಇದೇ ಬಗೆಯ ದಂತ ಕತೆಗಳನ್ನು ಅಲ್ಪ ಸ್ವಲ್ಪ ಬದಲಾವಣೆಯಲ್ಲಿ ಅರೆಹಳ್ಳಿ ಕರಿಯಮ್ಮ, ಸೋರೆಕುಂಟೆ ಕರಿಯಮ್ಮ, ಕಡವಿಗೆರೆ ಕರಿಯಮ್ಮರ ಬಗೆಗೂ ಹೇಳುತ್ತಾರೆ.

ಕರಿಯಮ್ಮನ ಪವಾಡದ ಬಗೆಗೆ ಒಂದು ದಂತಕತೆ ಹೇಳುವಂತೆ ಈ ದೇವತೆಯ ಸತ್ಯಾಸತ್ಯತೆಯನ್ನು ಪ್ರಶ್ನಿಸಿದ ಮುಸ್ಲಿಂ ವ್ಯಕ್ತಿಯೊಬ್ಬ ಕರಿಯಮ್ಮನ ಜಾತ್ರೆಯ ಅಗ್ನಿಕೊಂಡದ ಸಂದರ್ಭದಲ್ಲಿ ಜನರು ಕೆಂಡದ ಮೇಲೆ ನಡೆಯುವುದನ್ನು ಕಂಡು ಈ ಕರಿಯಮ್ಮಳಲ್ಲಿ ಸತ್ಯವಿದ್ದರೆ ತನ್ನ ಟೋಪಿ ಸುಡದಿರಲಿ ಎಂದು ತಲೆಯ ಮೇಲಿನ ಟೋಪಿಯನ್ನು ತೆಗೆದು ಕೆಂಡದ ಮೇಲೆಸೆದು ಪಕ್ಕದ ಹಾಲೇನಹಳ್ಳಿಗೆ ಹೋಗಿ ವಾಪಸ್ ಬಂದಾಗಲೂ ಟೋಪಿ ಸುಡದೆ ಮೊದಲಿನಂತೆಯೇ ಇರುತ್ತದೆ. ದೇವತೆಯ ಸತ್ಯವನ್ನು ಪ್ರಶ್ನಿಸಿದ್ದರಿಂದ ಆತ ಮುಂದೆ ಸ್ವಲ್ಪ ದೂರ ಹೋಗುವುದರೊಳಗೆ ಕುದುರೆ ಮೇಲಿಂದ ಬಿದ್ದು ಸಾವನ್ನಪ್ಪುತ್ತಾನೆ. ಈ ಸ್ಥಳವನ್ನು ಇಂದಿಗೂ 'ತುರುಕನಕಟ್ಟೆ' ಎಂದು ಕರೆಯುತ್ತಿದ್ದಾರೆ. ಇಂತಹ ವಿವಿಧ ಬಗೆಯ ಕತೆಗಳನ್ನು ಕರಿಯಮ್ಮಳ ಬಗೆಗೆ ಕಟ್ಟಿದ್ದಾರೆ. ಕರಿಯಮ್ಮಳ ಪವಾಡಗಳನ್ನು ಕುರಿತು ಪದಗಳನ್ನು ಹಾಡುತ್ತಾರೆ.

**ರಂಗನಾಥ :**

ಸಿರಾ ಸೀಮೆಯಲ್ಲಿ ಕಂಡುಬರುವ ರಂಗನಾಥ ಪ್ರಾದೇಶಿಕನಾಗಿ ಬೇರೆ ಬೇರೆ ಊರುಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಗುರ್ತಿಸಲ್ಪಡುತ್ತಾನೆ. ಅವನ ಕಾರ್ಯಕ್ಷೇತ್ರ, ಕತೆ, ಐತಿಹ್ಯ, ಪವಾಡಗಳೂ ಬೇರೆ ಬೇರೆಯಾಗಿ ಗುರ್ತಿಸಲ್ಪಡುತ್ತವೆ. ರಂಗನಾಥನ ಮೂಲ ನೆಲೆ ಬಹುಪಾಲು ಎತ್ತರವಾದ ಗುಡ್ಡಗಾಡು ಪ್ರದೇಶದಲ್ಲಿ ಬೆನವಗಳ ರೂಪದಲ್ಲಿ ಕಂಡು ಬರುತ್ತಾನೆ. ಮರಡಿಗುಡ್ಡದ ರಂಗನಾಥ, ಮಾಗೋಡು ರಂಗ, ತಾವರೇಕೆರೆ ರಂಗ, ಬುಕ್ಕಾಪಟ್ಟಣದ ಕಾಲುವೆ ರಂಗ, ಮೂರುಗುಡ್ಡದ ರಂಗನಾಥ, ಗುಡ್ಡದಹಟ್ಟಿ ರಂಗನಾಥ, ಯಾದಲಡಕಿನ ರಂಗನಾಥ, ಗಿಡಗನಹಳ್ಳಿ ರಂಗನಾಥ, ಕ್ಯಾದಿಕುಂಟೆ ರಂಗನಾಥ, ಓಜಗುಂಟೆ ರಂಗನಾಥ ಈ ಮೊದಲಾಗಿ ಪ್ರಾದೇಶಿಕವಾಗಿ ಬೇರೆ ಬೇರೆಯಾಗಿ ಗುರ್ತಿಸಲ್ಪಡುವ ರಂಗನಾಥನ ಮೂಲದ ಬಗ್ಗೆಯೂ ವಿವಿಧ ಸ್ಥಳ ಪುರಾಣ, ಕತೆ, ಐತಿಹ್ಯ ಹುಟ್ಟಿಕೊಂಡಿವೆ. ಜುಂಜಪ್ಪನ ಕಾವ್ಯದಲ್ಲಿ ಪ್ರಸ್ತಾಪವಾಗಿರುವಂತೆ ಈ ರಂಗನಾಥರು ಒಟ್ಟು ಒಂಬತ್ತು ಜನ ಅಣ್ಣ ತಮ್ಮಂದಿರು. ಗುಡ್ಡದ ರಂಗಪ್ಪ, ತಾವರೆಗೆರೆ ರಂಗಪ್ಪ, ಗಿಡುಗನಹಳ್ಳಿ ರಂಗಪ್ಪ, ಸಿರೇಮ ರಂಗಪ್ಪ, ಸಂದಿಹಳ್ಳಿ ರಂಗಪ್ಪ, ಮಾಗೋಡು ರಂಗಪ್ಪ,

ಮಲ್ಲೆರಂಗಪ್ಪ, ಸಿನುಗುದ ರಂಗಪ್ಪ, ಅಂಬಲಗೆರೆ ರಂಗಪ್ಪ ಎಂದು.[೧೮] ಇವರು ಸಿನುಗದ ಬೆಟ್ಟದಿಂದ ಒಡೆದು ಬಂದವರು ದೇವಮಾನವರು. ಒಬ್ಬೊಬ್ಬರ ಕತೆ, ಪವಾಡ, ಐತಿಹ್ಯಗಳೂ ಬೇರೆ ಬೇರೆ. ಮರಡಿ ಗುಡ್ಡದ ರಂಗನಾಥ ಜುಂಜಪ್ಪನ ಅತೀ ಪ್ರೇಮದ ಗೆಳಕಾರ. ಇವರಿಬ್ಬರೂ ಜೂಜಾಡಿ ತಮ್ಮ ಆಯುಧಗಳನ್ನು ಬದಲಿಸಿಕೊಂಡಿರುವ ಐತಿಹ್ಯಗಳಿವೆ. ಪುರುಸಕ್ಕನ ಕೆರೆಗೆ ಮಾಟಶೂನ್ಯ ಮಾಡಿ ಜುಂಜಪ್ಪನ ಗೋವುಗಳನ್ನು ಕೊಲ್ಲಲು ಜುಂಜಪ್ಪನ ಮಾವಂದಿರುಗಳು ಉಪಾಯ ಹೂಡಿದಾಗ ಮರಡಿ ಗ್ುಡ್ಡದ ರಂಗನಾಥ ಈ ಎಲ್ಲಾ ವಿಷಯವನ್ನು ಜುಂಜಪ್ಪನಿಗೆ ತಿಳಿಸಿ ರಕ್ಷಿಸುತ್ತಾನೆ. ಮಾಗೋಡು ರಂಗನಾಥನ ಬಗ್ಗೆ ಒಂದು ಪ್ರತ್ಯೇಕ ಕಾವ್ಯವೇ ಬಂದಿದೆ.[೧೯] ಬುಕ್ಕಾಪಟ್ಟಣದ ಕಾಲುವೆರಂಗ, ತಾವರೇಕೆರೆ ರಂಗ, ಮೂರುಗುಡ್ಡದ ರಂಗ ಹೀಗೆ ಒಬ್ಬೊಬ್ಬರಿಗೂ ಪ್ರತ್ಯೇಕ ಸ್ಥಳ ಪುರಾಣಗಳು ಹುಟ್ಟಿಕೊಂಡಿವೆ.

ರಂಗನಾಥನ ಮೂಲ ಬಹು ಪಾಲು ಜನಪದ ನಂಬಿಕೆ, ಐತಿಹ್ಯಗಳ ಪ್ರಕಾರ ೧೨-೧೩ನೇ ಶತಮಾನಕ್ಕೆ ಹೋಗುತ್ತದೆ. ಶ್ರೀ ಮರಡಿ ರಂಗನಾಥನ ಐತಿಹ್ಯದಲ್ಲಿ ಬರುವ ಕಥೆ ಹೀಗಿದೆ "ಶ್ರೀ ವಿಜಯಾಬ್ಯುದಯ ಶಾಲಿವಾಹನಶಕ ವರುಷಂಗಳು ೧೨೧೨ರ ಬಾವ ಸಂವತ್ಸರ ಚೈತ್ರ ಪಂಚಮಿಯಲ್ಲಿ ಪಂಪಾನದಿ ತೀರದಿಂದ ಶ್ರೀ ರಂಗನಾಥ ಸ್ವಾಮಿಯು ಹರಳಪ್ಪ ಶೆಟ್ಟಿ ಮತ್ತು ಶಿವಪ್ಪ ಶೆಟ್ಟಿ ಎಂಬ ವ್ಯಾಪಾರಗಾರರ ಸಂಗಡ ಬಂದು ಹುಯಿಲ ದೊರೆ ಮುಜರಾಯಿಯಲ್ಲಿ ಕಂಬಳಿ ಗೋಣಿಯಲ್ಲಿ ಪ್ರತ್ಯಕ್ಷನಾಗಿ ನಿಜ್ಜ ರೂಪ ತೋರಿಸಿ ಇಲ್ಲಿಯೇ ನೆಲೆಗೊಂಡನು" ಎಂದು ಹೇಳುತ್ತದೆ.

ತಾವರೇಕೆರೆಯ ಶ್ರೀ ಬಂಡಿರಂಗನಾಥ ಸ್ವಾಮಿ ದೇವಾಲಯ ಇತಿಹಾಸ ಮಹಿಮೆ' ಎಂಬ ಲೇಖನದಲ್ಲಿ ದಿವಂಗತ ಟಿ.ತಾರೇಗೌಡರವರು ಒಂದು ಸ್ಥಳ ಪುರಾಣ ಉಲ್ಲೇಕಿಸಿದ್ದಾರೆ. ಸುಮಾರು ೫೦೦ ವರ್ಷಗಳ ಹಿಂದೆ ಎತ್ತುಗಳ ಮೇಲೆ ಸರಕುಗಳನ್ನು ಸಾಗಿಸಿ ವ್ಯಾಪಾರ ಮಾಡುತ್ತಿದ್ದ ತಾವರೆಕೆರೆಯ ಯಾಗಟಿ ಮಲ್ಲಯ್ಯನವರ ಪೂರ್ವಿಕರು ವ್ಯಾಪಾರ ಮಾಡಿಕೊಂಡು ಬರುವಾಗ್ಗೆ ಈ ತಾವರೆಕೆರೆ ಗುಡ್ಡದ ದೇವಾಸ್ಥಾನದ ಹತ್ತಿರ ಬಂದು ಬೀಡು ಬಿಟ್ಟರು. ಅಲ್ಲಿ ಅವರು ಊಟಕ್ಕೆ ವ್ಯವಸ್ಥೆ ಮಾಡಿಕೊಳ್ಳುವಾಗ ಒಂದು ಸಣ್ಣ ಗುಂಡಾಕಾರದ ಕಲ್ಲನ್ನು ಸಾಂಬಾರು ಪದಾರ್ಥವನ್ನು ಅರೆಯಲು ಬಳಸಿದರು.ಊಟವಾದ ನಂತರ ಅಲ್ಲಿಂದ ಹೊರಡುವಾಗ್ಗೆ ಅವರು ಹೊಡೆದು ತಂದ ಎತ್ತುಗಳು ಮೇಲೆಳಲಿಲ್ಲ, ಒಂದು ಹೆಜ್ಜೆ ಮುಂದಿಡಲಿಲ್ಲ ಆಗ ಅವರು ಆಶ್ಚರ್ಯ ಪಟ್ಟರು. ಇದೇ ಸಂದರ್ಭದಲ್ಲಿ ಅವರು ಬೀಡುಬಿಟ್ಟ ಸ್ವಲ್ಪ ದೂರದಲ್ಲಿ ಒಂದು ಹಸು ಹುತ್ತದಲ್ಲಿ ಹಾಲನ್ನು ಕರೆಯುತ್ತಿತ್ತು. ಇದನ್ನು ಕಂಡು ಆ ಹುತ್ತವನ್ನು ಅಗೆದು ನೋಡಿದಾಗ ಅದರಲ್ಲಿ ಒಂದು ಸಾಲಿಗ್ರಾಮವು ಸಿಕ್ಕಿತು. ಅದೇ ದಿನ ರಾತ್ರಿ ಆ ವ್ಯಾಪಾರಗಾರರ ಕನಸಿನಲ್ಲಿ ನಾನು ಬೇರೆಯಲ್ಲ ತಿರುಪತಿ ವೆಂಕಟಸ್ವಾಮಿ ಬೇರೆಯಲ್ಲ ಇಲ್ಲಿ ನನ್ನನ್ನು ಗುಡ್ಡದ ರಂಗಪ್ಪ ಎಂದು ಕರೆದು

ದೇವಸ್ಥಾನವನ್ನು ಕಟ್ಟಿಸಿ ನಿಮಗೆ ಒಳ್ಳೆಯದಾಗುತ್ತದೆ. ಎಂದು ಹೇಳಿತು. ಅದರಂತೆ ಅವರು ದೇವಸ್ಥಾನ ನಿರ್ಮಿಸಿದರು.

ಗುಡ್ಡದ ಹಟ್ಟಿ ರಂಗನಾಥನ ಮೂಲದ ಬಗ್ಗೆ ಗಜಮಾರಹಳ್ಳಿಯ ಪೂಜಾರಾದ ಎಲ್.ರಾಮಲಿಂಗಯ್ಯನವರು ಸಹ ಇದೇ ರೀತಿಯಲ್ಲಿ ಮುತ್ತು ರತ್ನ ವ್ಯಾಪಾರಸ್ಥರ ಮೂಲಕ ರಂಗನಾಥ ಇಲ್ಲಿ ಸ್ಥಾಪಿತವಾದನೆಂದು ಹೇಳುತ್ತಾರೆ. ಮಾಗೋಡು ರಂಗನಾಥನ ಬಗೆಗೆ ಬೇರೆಯದೇ ಆದ ರೀತಿಯಲ್ಲಿ ಕಾವ್ಯ ಪ್ರಚಲಿತದಲ್ಲಿದೆ. ಹೀಗೆ ರಂಗನಾಥ ಕಾಲಾಂತರದಲ್ಲಿ ವಿವಿಧ ಪವಾಡಗಳನ್ನು ಮೆರೆಯುತ್ತಾ, ಭಕ್ತಾಧಿಗಳನ್ನು ಹೆಚ್ಚಿಸಿಕೊಳ್ಳುತ್ತಾ ಈ ಭಾಗ ಅಲೌಕಿಕ ನೆಲೆಯಲ್ಲಿ, ದೈವೀ ಶಕ್ತಿಯ ರೂಪದಲ್ಲಿ ಬೆಳೆದುಬಂದವನು.

**ಮಾಗೋಡು ಕಂಬದರಂಗ :**

ಸಿರಾ ಸೀಮೆಯಲ್ಲಿ ಕಂಡುಬರುವ ಪ್ರಮುಖ ಸಾಂಸ್ಕೃತಿಕ ನಾಯಕರಲ್ಲಿ ಕಂಬದರಂಗನ ಪಾತ್ರ ಹಿರಿದಾದುದು. ರಂಗನಾಥನನ್ನು ಮಾಗೋಡಪ್ಪ, ಕಂಬದಪ್ಪ, ಬಬ್ಬೂರ ರಂಗ, ಕಂಬದರಂಗ, ಕಂಬದರಾಯ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. "ಧರೆಗೆ ದೊಡ್ಡವರು" ಕಥೆಯಲ್ಲಿ ಮಂಟೇಸ್ವಾಮಿ ಹೇಗೆ ಒತ್ತಾಯ ಪೂರ್ವಕವಾಗಿ ಜನರನ್ನು ತನ್ನ ಭಕ್ತರನ್ನಾಗಿಸಿಕೊಳ್ಳುತ್ತಾನೋ ಅದೇ ರೀತಿ ಮಾಗೋಡುರಂಗನಾಥ ತನ್ನ ಅಲೌಕಿಕ ಶಕ್ತಿಯಿಂದ ಭಕ್ತರಿಂದ ಸೇವೆಯನ್ನು ಮಾಡಿಸಿಕೊಳ್ಳುತ್ತಾನೆ. ಈ ಮಾಗೋಡುರಂಗನ ಭಕ್ತರು ಕರ್ನಾಟಕ, ಆಂದ್ರ ಪ್ರದೇಶ, ತಮಿಳುನಾಡುಗಳಲೆಲ್ಲಾ ಹಬ್ಬಿದ್ದಾರೆ. ಈ ಮಾಗೋಡುರಂಗನ ಕಾವ್ಯ ಈ ರೀತಿ ಆರಂಭವಾಗುತ್ತದೆ.

ಚಿಟ್ಟಾಲದ ಮರದ ಮೇಲೆ ಮಲಗಿದ್ದ ಶ್ರೀಹರಿ ಮುಂಗಾರು ಸಿಡಿಲುಬಡಿದು ಉಕ್ಕಿನ ಪಾಳಿನ ಕಂಬದ ರೂಪದಲ್ಲಿ ಭೂಮಿಯ್ಲಲ್ಲಿ ನೆಲೆಸುತ್ತಾನೆ.[೨೦] ಶ್ರೀಹರಿಗೆ ಭೂಮಿಯನ್ನು ಬಿಟ್ಟು ಹೊರಬರಬೇಕೆಂಬ ಬಯಕೆ ಉಂಟಾಗುತ್ತದೆ. ಇಂತಹ ಸಂದರ್ಭದಲ್ಲಿ ಬಬ್ಬೂರಗೌಡ ಆತನಿಗೆ ಏಳುಜನ ತಮ್ಮಂದಿರು. ಶ್ರೀಮಂತ ಕುಳ. ಎಲ್ಲಾ ತಮ್ಮಂದಿರಿಗೂ ಲಗ್ನವಾಗಿದೆ. ಬಬ್ಬೂರ ಗೌಡನ ಹೆಂಡತಿಯೂ ರೂಪವಂತೆ ಆದರೆ ಬಬ್ಬೂರಗೌಡ ಸೂಳೆ ಸಹವಾಸದಿಂದ ಹಿರಿಯೂರು ಪಟ್ಟಣ ಸೇರಿದ. ಮುಂಗಾರು ಮಳೆ ಬಿದ್ದಿತು. ಹೊನ್ನಾರು ಹೂಡುವ ಸಮಯ ಗೌಡನ ಏಳೂ ಜನ ಸೋದರರು ಏಳುಜೊತೆ ನೇಗಿಲುಗಳನ್ನು ಹೂಡಿ ಹೊಲಕ್ಕೆ ಬಂದು ಹೊನ್ನಾರು ಪೂಜೆ ನೆಡೆಸಿ ಹೊಲ ಉಳುವುದಕ್ಕೆ ಆರಂಭಿಸುತ್ತಾರೆ. ನೇಗಿಲು ಒಂದೆರಡು ಸುತ್ತು ಬರುತ್ತದೆ ಅದರಲ್ಲಿ ಮುಂದಿದ್ದ ಎತ್ತುಗಳಿಂದ ಚಿಕ್ಕಬೆಳ್ಳಿ, ದೊಡ್ಡಬೆಳ್ಳಿ ಎಂಬ ಎತ್ತುಗಳ ನೇಗಿಲಿಗೆ ನೆಲದಲ್ಲಿದ್ದ ಶ್ರೀಹರಿಯ ಉಕ್ಕಿನ ಪಾಳು ಸಿಕ್ಕಿಕೊಳ್ಳುತ್ತದೆ. ಆಗ ಏಳೂಜನ ಅಣ್ಣ ತಮ್ಮಗಳೂ, ಅವರ ಮಡದಿಯರೂ, ಎತ್ತಗಳೂ ಸಾಯುತ್ತವೆ. ಸುದ್ದಿ ತಿಳಿದು ಬಂದು ನೋಡಿದ ಬಬ್ಬೂರ ಗೌಡನ ಹೆಂಡತಿಯೂ ಸಾಯುತ್ತಾಳೆ.

ಆಗ ನೋಡ ಭಗವಂತ ದೊಡ್ಡವನ ದೂರದೃಷ್ಟಿಯಿಂದ

ಏಳುಜನ ಅಣ್ಣ ತಮ್ಮಂದಿರು ಯಂಗೆ ನಿಂತಿದ್ದರೋ

ಹಂಗೇನೆ ಪ್ರಾಣಾನೆ ಬಿಡುತಾರಣ್ಣ| ರೈತನೇ ಕಾರುತಾರಣ್ಣ

ಅರಮನೆವೊಳಗೆ ಹಿರಿಯಣ್ಣನ ಹೆಂಡರು ಬಸುರಿ ನೋಡ

ಮಂಚದ ಮೇಗಡೆ ಮಕಾಡೆ ಮಲಗಿಕೊಂಡು ರೈತಾನೆ ಕಾರಿಕಂಡು

ಪ್ರಾಣಾನೆ ಬಿಡುತಾಳೆ ವೊಳಗೆ|

ಅರಮನೆ ವೊಳಗೆ ಕ್ವಾಣೆ ಬಾಗಿಲಾಗೆ| ಸ್ಥಾನಿಕರ ದೊಡ್ಡಣ್ಣ

ಒಲಗದ ತಿಪ್ಪಣ್ಣ ಪರಿವಾರದವರಿಗೆ ಅನ್ನನೇ ಕೊಡರಿಲ್ಲ

ಎಂಗಪ್ಪ ಕಾಲಾಹರಣ ಮಾಡಬೇಕು ಬಾಳನೇ ಸಂಸಾರಿ ಬಾರಿನೇ ವಜಾನು ದಾರ.

ಗೌಡನ ಕುಟುಂಬದ ಪರಿವಾರದವರೆಲ್ಲಾ ಸತ್ತು ಬಿದ್ದಿರುವ ಸುದ್ದಿ ಹಿರಿಯೂರು ಸೂಳೆ ಮನೆಯಲ್ಲಿದ್ದ ಬಬ್ಬೂರ ಗೌಡನಿಗೆ ತಿಳಿದು ಓಡೋಡಿ ಬರುತ್ತಾನೆ. ತೀವ್ರ ದುಃಖಿತಪ್ತನಾಗಿ ನೆಂಟರಿಷ್ಟರನ್ನೆಲ್ಲಾ ಕರೆಸಿ ಶವ ಸಂಸ್ಕಾರ ಮಾಡಿ ಸಿದ್ಧನಾದಾಗ ಅಶರೀರವಾಣಿಯಾಗುತ್ತದೆ. ಭೂಮಿಯಲ್ಲಿ ಉಕ್ಕಿನ ಪಾಳಿನ ರೂಪದಲ್ಲಿ ಶ್ರೀಹರಿ ಇರುವುದಾಗಿಯೂ, ಅದನ್ನು ತೆಗೆಸಿ ಗರುಡುಗಂಬ ಮಾಡಿಸಿದರೆ ಎಲ್ಲರೂ ಬದುಕುವುದಾಗಿ ನುಡಿಯುತ್ತದೆ. ಈ ಅಶರೀರವಾಣಿಯನ್ನು ನಂಬದ ಗೌಡ ಶವಸಂಸ್ಕಾರ ಮಾಡಲು ಗುಂಡಿ ಒಂದು ಅಂಗುಲವೂ ಇಳಿಯುವುದಿಲ್ಲ.

ಗುದ್ದಲಿ ಪಿಕಾಸಿ ತಕ್ಕೊಂಡು ಹನ್ನೆರಡು ಜನನ ನೋಡೋ|

ಸುಡುಗಾಡು ಬಯಲಿಗೆ ಹೋಗಿ ಒಂದನೇ ಗುದ್ದರ ತೆಗೆಯಾಕೆ

ಗುದ್ದಲಿ ಪಿಕಾಸಿ ಹಾಕುತಾರೋ|

ದೇವರು ಕರುಣೆಯಿಂದ ಹಾಕಿದ ಗುದ್ದಲಿ ಹಾಕಿದಂಗೆ

ಗುದ್ದಲಿ ನೆಲ ನಾಟಲ್ಲ| ಕಂಡ ಬುದ್ಧಿ ಖರ್ಚು ಮಾಡಿದರೂ

ಸುಡುಗಾಡು ಭೂಮಿಲಿ ಮೂರು ಕಾಸಿನ ಮಣ್ಣು ಅರಿಯಲಿಲ್ಲ

ಸಮಾಧಿ ಗುದ್ದರ ಇಳಿಯಲಿಲ್ಲ|

ಗುಂಡಿ ತೆಗೆಯಲು ಹೋದವರೆಲ್ಲಾ ಪ್ರಾಣ ಬಿಡುತ್ತಾರೆ. ಆಗ ಬೊಬ್ಬೂರ ಗೌಡನಿಗೆ ಆತಂಕವಾಗುತ್ತದೆ. ಗೌಡ ಶಾಸ್ತ್ರ ಕೇಳಲು ಕೊರವಂಜಿಯ ಬಳಿಗೆ ಬರುತ್ತಾನೆ. ಕೊರವಂಜಿ "ನಿನ್ನ ಒಂದು ಹಿಂಡು ಹೊಸ್ನು ತೆಗೆದುಕೊಂಡು ಹೋಗಿ ಹಿರಿಯೂರು ಪೇಟೆಯಿಂದ ಒಂದು ಓಪಿ

ಮಣ್ಣು ತಂದು ಇವರಿಗೆ ಮುಟ್ಟಿಸಿದರೆ ಏಳುತ್ತಾರೆ. ನಂತರ ಭೂಮಿಯಲ್ಲಿರುವ ಉಕ್ಕಿನ ಪಾಳಿಸಿಂದ ಗರುಡುಗಂಬ ಮಾಡಿಸಿ ಪ್ರತಿಷ್ಠಾಪಿಸಬೇಕು" ಎಂದು ಹೇಳುತ್ತದೆ. ಗೌಡ ಅದೆ ರೀತಿ ಮಾಡಿ ಎಲ್ಲರನ್ನೂ ಎಚ್ಚರಿಸುತ್ತಾನೆ. ಈಗ ಉಕ್ಕಿನ ಪಾಳಿನಿಂದ ಗರುಡುಗಂಬ ಮಾಡಿಸುವುದು ಗೌಡನಿಗೆ ಸವಾಲಾಗುತ್ತದೆ. ಯಾವ ಬಡಗಿಯೂ ಒಲ್ಲೆ ಎನ್ನುತ್ತಾನೆ. ಕೊನೆಗೆ ವಾಸರ ಚನ್ನನ ಬಡಗಿ ಹಾಗೂ ಹನುಮಂತನ ಮಡದಿ ಮಕ್ಕಳು ಸಾಯುತ್ತಾರೆ. ಕೊನೆಗೆ ಬಡಗಿ ತಾನು ಕಲಿತ ವಿದ್ಯೆಯನ್ನೆಲ್ಲಾ ಬಳಸಿ ಗರುಡುಗಂಬ ಮಾಡುತ್ತಾನೆ. ಹೊಸದಾಗಿ ತಯಾರದ ಗರುಡುಗಂಬಕ್ಕೆ ಪುಣ್ಯಭಜನೆ ಮಾಡಿಸಿ ಬಡಗಿ ಹನುಮಂತನಿಂದ ಕಂಬದರಾಯ ಉಕ್ಕಿನ ಉರಿಬಾಣ ಬಿಟ್ಟು ಮೊದಲ ಬಲಿ ತೆಗೆದುಕೊಳ್ಳುತ್ತಾನೆ.

ಜಲದಿಶಾಸ್ತ್ರ ಮುಗಿಸಿದ ಮೇಲೆ ಬಬ್ಬೂರಗೌಡ ದೇವರನ್ನು ಎತ್ತಿಕೊಂಡು ಬಬ್ಬೂರ ಕಡೆ ಬಂದು ಕೆರೆಯ ಏರಿಯ ಮೇಲೆ ಬ್ಯಾಟೆ ಮರದ ಬುಡದಲ್ಲಿ ಕಂಬಳಿ ಹಾಸಿ ಗದ್ದಿಗೆ ಮಾಡುತ್ತಾನೆ. ಮಾಗೋಡು ರಂಗನ ಕಾವ್ಯದಲ್ಲಿ ದಾಸರ ಚನ್ನಪ್ಪನ ಪಾತ್ರ ಪ್ರಮುಖವಾದದ್ದು. ಬಬ್ಬೂರ ಗೌಡನ ನಂತರ ಚನ್ನಪ್ಪ ರಂಗನಾಥನ ಭಕ್ತನಾಗುತ್ತಾನೆ. ದಾಸರ ಚನ್ನಪ್ಪ ಕರಡೇರ ಗೊಲ್ಲರ ಹುಡುಗ. ಏಳುಜನ ಅಣ್ಣ ತಮ್ಮಂದಿರಲ್ಲಿ ಮೊದಲವನೇ ಈತ. ಕುಟುಂಬ ಕಲಹದಿಂದ ಹೊರಬಂದು ಅಲೆಮಾರಿಯಂತೆ ದಾರಿಯಲ್ಲಿ ಬರುವಾಗ ರಂಗನಾಥ ಈತನನ್ನು ಮಾತನಾಡಿಸುತ್ತಾನೆ. ದಾಸಣ್ಣ ದೆವ್ವಬೂತದ ಚೇಷ್ಟೆ ಇರಬೇಕೆಂದು ಭಾವಿಸಿ ಮುಂದೆ ಹೊರಟಾಗ ಕಂಬದ ರಂಗ ನಿನಗೆ ಕೇಡು ಬಗೆಯುವುದಿಲ್ಲವೆಂದು ಆಶ್ವಾಸನೆ ನೀಡುತ್ತಾನೆ. ಆಗ ದಾಸಣ್ಣ ಕಂಬದ ರಾಯನಿಗೆ ಭಕ್ತನಾಗಿ, ಸಖನಾಗಿ, ಮಗನಾಗಿ ಜೊತೆಯಾಗುತ್ತಾನೆ. ದಾಸಣ್ಣನಿಗೆ ನೆಂಟರಹಟ್ಟಿಯ 'ಗೂರು ಪಾತಮ್ಮ' ಎಂಬ ಹೆಳವ ಹುಡುಗಿಯೊಂದಿಗೆ ಮದುವೆಯಾಗುತ್ತದೆ. ದಾಸಣ್ಣ ಕಂಬದ ರಾಯನ ಅಪ್ಪಣೆಯಂತೆ ರಂಗನಾಥನನ್ನು ಕರೆದುಕೊಂಡು ಸಿರಾದ ಮೇಲುಕುಂಟೆ ಏಣಿಗೆ ಬಂದು ನೆಲೆಸುತ್ತಾನೆ.

ಕಂಬದ ರಂಗನ ಪವಾಡಗಳು ಹಲವು. ಅವುಗಳಲ್ಲಿ ಸತ್ತ ಶವವನ್ನು ಬದುಕಿಸಿದ್ದು ವಿಶೇಷ. ಸೀರ್ಯಾ ಸೀಮೆಗೆ ಭೀಕರ ಕ್ಷಾಮ ಆವರಿಸಿದಾಗ ಜೀವರಾಶಿಗಳೆಲ್ಲವೂ ಸಾವು ಬದುಕಿನ ಹೋರಾಟದಿಂದ ತತ್ತರಿಸುತ್ತದೆ. ಜನರನ್ನು ಕಷ್ಟದಿಂದ ಪಾರುಮಾಡಲು ಆಡಳಿತ ಯಂತ್ರವು ತತ್ತರಿಸುತ್ತವೆ. ದೇವಾದಿ ದೇವತೆಗಳಿಗೆ ಮೊರೆಹೋದರೂ ಪ್ರಯೋಜನವಾಗುವುದಿಲ್ಲ. ಆಗ ಸಿರಾದ ದೊರೆಗಳು ಟಾಮು ಹೊಡೆಸಿ ಧರ್ಮದವರು, ದೇವರಿನವರು ಯಾರಾದರು ಇದ್ದರೆ ಇದಕ್ಕೆ ಪರಿಹಾರ ತೋರಿಸಬಹುದೆಂದು ಸಾರಿಸುತ್ತಾನೆ.

ಇಂತಹ ಸಂದರ್ಭಕ್ಕೆ ಏನೂ ಅರಿಯದ ದಾಸಣ್ಣ ನಾಮ ಹಾಕಿಕೊಂಡು ಭಿಕ್ಷೆಗಾಗಿ ಸಿರಾ ಪಟ್ಟಣಕ್ಕೆ ಬಂದು ರಂಗನಾಥ ಪವಾಡ ಎತ್ತುವುದಾಗಿ ಸರ್ಕಾರದವರಿಗೆ ಮಾತುಕೊಟ್ಟು, ಕಂಬದ

ರಾಯನ ಮಾತಿನಂತೆ ಮೇಲುಕುಂಟೆ ಪಣಿನಾಗೆ ಪವಾಡ ಎತ್ತುತ್ತಾನೆ. ಆಗ ಕಂಬದ ರಂಗನ ಆದೇಶ ಹೀಗೆ ಪ್ರಕಟವಾಗುತ್ತದೆ.

ಕೇಳಮ್ಮ ದಾಸರ ಚನ್ನೋಜಿ ಬ್ಯಾಟೆ ಪತ್ರೆ ತಂದು
ಎರಡು ಶವಕೂ ಸಮನಾಗಿ ಮುಡಿಸಬೇಕಣ್ಣ
ಕೇಳಮ್ಮ ದಾಸರ ಚನ್ನೋಜಿ ಇಷ್ಟು ಜನರ ಮುಂದೆ
ನಮ್ಮ ಸತ್ಯವೇ ಉಳಿಯಬೇಕು| ಸಾಹಸ ತೋರಬೇಕು|
ಅಂಜಬೇಡ ಅಳುಕಬೇಡಪ್ಪ ಚನ್ನಪ್ಪ
ಸೂರಿ ತಕ್ಕೊಂಡು ನಿನ್ನ ಬಲಗಡೆ ಒಳದೊಡೆ ಸೀಳಬೇಕಪ್ಪ|
ಬಲಗಡೆ ಒಳದೊಡೆ ಸೀಳಿ| ಒಂದು ತೊಟ್ಟು ರಕ್ತ
ಭೂಮಿಯೊಳಗಡೆ ಬಿಡದಂತೆ| ಮೂರು ಬೊಗಸೆ ರಕ್ತ
ತಕ್ಕೊಂಡು ಎರಡು ಶವಕ್ಕೂ ಸಮನಾಗಿ ಚೆಲ್ಲಬೇಕಣ್ಣ||

ಭೀಕರ ಕ್ಷಾಮವನ್ನು ಪರಿಹರಿಸಿ ಅಲ್ಲಿಂದ ಮುಂದೆ ಹೋಗಿ ಮಾಗೋಡು ಗ್ರಾಮದ ಸಮೀಪವಿರುವ ಸಿಳ್ಳೆಕ್ಯಾತರ ಬಂಡೆಯ ಮೇಲೆ ಸ್ವಲ್ಪ ದಿನ ಇದ್ದು ನಂತರ ಕೆರೆಯಾಗಲ ಹಳ್ಳಿ, ಬೋರಸಂದ್ರ ಚಿಕ್ಕನಹಳ್ಳಿ ಮುಂತಾದ ಕಡೆಗಳಲ್ಲಿ ನೆಲೆಸುತ್ತಾನೆ.

ದಾಸರ ಚನ್ನಪ್ಪ ಹಾಗೂ ಅವನ ಪರಿವಾರದವರು "ಸ್ವಾಮಿ ತಿರುಗೀ ತಿರುಗಿ ಸಾಕಾಗಿದೆ ಎಲ್ಲಿಯಾದರೂ ಒಂದು ಕಡೆ ಸ್ಥಿರವಾಗಿ ನೆಲೆಸು" ಎಂದು ಪ್ರಾರ್ಥಿಸಿ ಸುತ್ತಲ ಏಳೂರು ದಾರಿಗೆ ನಡೆಮಡಿಯನ್ನು ಹಾಸುತ್ತಾರೆ. ರಂಗನಾಥ ಯಾವ ಊರಿಗೆ ಬೇಕಾದರೂ ಹೋಗಬಹುದು ಎಂದು ಕೇಳಿಕೊಳ್ಳುತ್ತಾರೆ. ಆಗ ಕಂಬದ ರಂಗ ಮೂಡುಗಡೆ ಮುಖವಾಗಿ ಮಾಗೋಡು ತಿಮ್ಮೇಗೌಡನ ನೇತೃತ್ವದಲ್ಲಿ ಹಾಕಿದ್ದ ನಡೆಮಡಿಯ ಮೇಲೆ ನಡೆದು ಮಾಗೋಡಿನ ಹೊರಹೊಲಯದಲ್ಲಿ ಹುಲ್ಲು ಗುಡುಸಿಲಿನಲ್ಲಿ ನೆಲಸಿದ.

**ಅಡಿಟಿಪ್ಪಣಿ**

೧. ಗುಮ್ಮನಹಳ್ಳಿ ಕದನ : ನಂ ಎಚ್,ವಿ. ವೀರನಾಯಕ. ಸಾಹಿತ್ಯ ಪರಿಷತ್ ಪ್ರಕಾಶನ ೧೯೮೩

೨. ಲೇಖನ : ಎಂ.ವಿ. ಚಿತ್ರಲಿಂಗಯ್ಯ-ಹರತಿಯ ಪಾಳೇಗಾರರ ಮೂಲ ವಂಶಾವಳಿ. ಪು.೩೧೫

೩. ಲೇಖನ ಎಂ.ಎಸ್. ಪ್ರಭಾಕರನ್ ಸಿರಾ ಪಾಳೇಗಾರರು ಕಲ್ಪಸಿರಿ. ಪು ೩೬೯

೪. ಗುಮ್ಮನಹಳ್ಳಿ ಕದನ, ಲಾವಣಿ ಹೆಚ್.ವಿ ವೀರನಾಯಕ.

೫. ಇತಿಹಾಸ ದರ್ಶನ; ಯೋಗೀಶ್ವರಪ್ಪ ಪು. ೨೭೪

೬. ಜುಂಜಪ್ಪನ ಕಾವ್ಯ; ಸಂ. ಚೆಲುವರಾಜು. ಪು.೧೫೧

೭. ವಡ್ನಗೆರೆ ವೀರನಾಗಮ್ಮನ ಚರಿತೆ; ಎನ್.ನಾರಾಯಣರಾವ್ ಪು ೬೧

೮. ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ; ಎಂ.ಹೆಚ್.ನಾಗರಾಜು. ಪು ೫೬

೯. ಲೇಖನ 'ಜಲದಿ ಬೊಪ್ಪರಾಯ ಕುಂಚಿಟಿಗರ ಸಾಂಸ್ಕೃತಿಕವೀರ'; ಮೀರಾಸಾಬಿಹಳ್ಳಿ ಶಿವಣ್ಣ.

೧೦. ಜುಂಜಪ್ಪನ ಕಾವ್ಯ; ಡಾ.ಚೆಲುವರಾಜು. ಪು ೨೨೭-೨೨೮

೧೧. ತುಮಕೂರು ಜಿಲ್ಲಾ ಜನಪದೀಯ ಅಧ್ಯಯನ; ಡಾ. ಚಿಕ್ಕಣ್ಣ ಯಣ್ಣೆಕಟ್ಟೆ ಪು ೨೦೨

೧೨. ವಕ್ತೃ. ಬರಗೂರು ಚಂದ್ರಾಚಾರ್‌ರವರು ನೀಡಿದ ಮಾಹಿತಿ.

೧೩. ಜುಂಜಪ್ಪನ ಕಾವ್ಯ; ಡಾ.ಚೆಲುವರಾಜು.

೧೪. ಸಿರಾ ತಾಲ್ಲೂಕಿನ ಪ್ರಮುಖ ಧಾರ್ಮಿಕ ಸ್ಥಳ.

೧೫. ಎತ್ತಯ್ಯ ಕಾವ್ಯ; ಸಂ.ಡಾ.ಮೀರಾಸಾಬಿಹಳ್ಳಿ ಶಿವಣ್ಣ ಪು ೪

೧೬. ಚಿತ್ರದೇವರ ಕಾವ್ಯ; ಸಂ.ಡಾ.ಚಿಕ್ಕಣ್ಣ ಯಣ್ಣೆಕಟ್ಟೆ.

೧೭. ಜುಂಜಪ್ಪನ ಕಾವ್ಯ; ಸಂ ಡಾ.ಚಲುವರಾಜು.

೧೮. ಜುಂಜಪ್ಪನ ಕಾವ್ಯ; ಡಾ.ಚಲುವರಾಜು. ಪು.೫೮೬-೮೭

೧೯. ಮಾಗೋಡು ರಂಗನಕಾವ್ಯ; ಡಾ.ಚಿಕ್ಕಣ್ಣ ಯಣ್ಣೆಕಟ್ಟೆ

೨೦. ಮಾಗೋಡು ರಂಗನಾಥ ಸ್ವಾಮಿಯ ಕಥೆ; ಸಂ. ಡಾ.ಚಿಕ್ಕಣ್ಣ ಯಣ್ಣೆಕಟ್ಟೆ.

ಅಧ್ಯಾಯ ೫

## ಸಾಂಸ್ಕೃತಿಕ ವೀರ-ನಾಯಕರು ಹಾಗೂ ಆರಾಧನಾ ಕ್ಷೇತ್ರಗಳು

| ಸಾಂಸ್ಕೃತಿಕ ವೀರರು | | ಆರಾಧನಾ ಕ್ಷೇತ್ರಗಳು |
|---|---|---|
| ೧. ರಂಗಪ್ಪ ನಾಯಕ | : | ಸಿರಾ |
| ೨. ಬೆಜ್ಜಿಹಳ್ಳಿ ಬೊಪ್ಪರಾಯ | : | ಬೆಜ್ಜಿಹಳ್ಳಿ |
| ೩. ಬರಗೂರು ವೀರಮ್ಮ | : | ಬರಗೂರು |
| ೪. ಗುರುಗುಂಡ ಬ್ರಹ್ಮೇಶ್ವರ | : | ಪಟ್ಟನಾಯಕನಹಳ್ಳಿ |
| ೫. ರಂಗನಾಥ | : | ಮರಡಿಗುಡ್ಡ, ಮಾಗೋಡು |
| ೬. ಜುಂಜಪ್ಪ | : | ಕಳುವೋರಹಳ್ಳಿ, ಪುರುಸಮ್ಮನಕೆರೆ, ಬಿಜ್ಜಂಬೆಳ್ಳ ಹಾಗಲವಾಡಿ, ಓಜಗುಂಟೆ. |
| ೭. ಎತ್ತಪ್ಪ | : | ಎತ್ತಪ್ಪನ ಕಟ್ಟೆ, ಚದುರಂಗದ ಕಾವಲು, ತಳಕಿನ ಗುಡ್ಡ, ವೇಣು ಕಲ್ಲುಗುಡ್ಡ, |
| ೮. ಬೂತಪ್ಪ | : | ಪುರ್ಲೇಹಳ್ಳಿ, ಬೂತಪ್ಪನಗುಡಿ |
| ೯. ವೀರಬೊಮ್ಮಣ್ಣ | : | ದಿಬ್ಬದ ವೀರ ಬೊಮ್ಮನಹಳ್ಳಿ |
| ೧೦. ಚಿತ್ರದೇವರು | : | ಚಿತ್ರದೇವರ ಪೌಳಿ |
| ೧೧. ಕರಿಯಮ್ಮ | | ಬೇವಿನಹಳ್ಳಿ, |

# ಸಾಂಸ್ಕೃತಿಕ ವೀರ-ನಾಯಕ ಆರಾಧನಾ ಕ್ಷೇತ್ರಗಳು



ಅಧ್ಯಾಯ ೫

## ಸಾಂಸ್ಕೃತಿಕ ವೀರ-ನಾಯಕರು ಹಾಗೂ ಆರಾಧನಾ ಕ್ಷೇತ್ರಗಳು

ಸಾಂಸ್ಕೃತಿಕ ನಾಯಕರ ಆರಾಧ್ಯ ಕ್ಷೇತ್ರಗಳು ಸಾಮಾನ್ಯವಾಗಿ ವೀರರು ಹುಟ್ಟಿ ಬೆಳೆದ ಸ್ಥಳಗಳೋ, ಹೋರಾಡಿದ, ಪವಾಡ ಮೆರೆದ, ಸಮಾದಿಯಾದ ಸ್ಥಳಗಳೋ ಆಗಿದ್ದು ಸಾಂಸ್ಕೃತಿಕ ಇತಿಹಾಸದ ಹಿನ್ನೆಲೆಯನ್ನು ಹೊಂದಿರುತ್ತವೆ. ಕೆಲವು ವೇಳೆ ಆ ವೀರರ, ಭಕ್ತರ ಸ್ಥಳ, ಸಮಾದಿಗಳೂ ಆರಾಧನಾ ಕ್ಷೇತ್ರಗಳಾಗುತ್ತವೆ.

ಈ ಆರಾಧನಾ ಕ್ಷೇತ್ರಗಳು ಭೌಗೋಳಿಕವಾಗಿ ನದಿ, ಬೆಟ್ಟ, ಗುಡ್ಡ ಸುಂದರವಾದ ಪರಿಸರದಲ್ಲಿ ನಿರ್ಮಾಣವಾಗಿರುತ್ತವೆ. ಒಂದು ಸ್ಥಳ 'ಕ್ಷೇತ್ರ' ವೆಂದು ಕರೆಸಿಕೊಳ್ಳುವಲ್ಲಿ ಅಲ್ಲಿ ನಡೆದ ಚಾರಿತ್ರಿಕ, ಸಾಂಸ್ಕೃತಿಕ ಘಟನೆಗಳ ಪ್ರಭಾವ ಪ್ರಮುಖವಾಗಿರುತ್ತದೆ. ಭೌಗೋಳಿಕವಾಗಿ ಈ ಕ್ಷೇತ್ರಗಳು ಪ್ರಶಾಂತವಾಗಿರುತ್ತವೆ. ಉದಾಹರಣೆಗೆ ಕಳುವೋರಹಳ್ಳಿ ಜುಂಜಪ್ಪನಗುಡ್ಡೆ ಊರ ಹೊರಭಾಗದ ಪ್ರಶಸ್ತ ಸ್ಥಳದಲ್ಲಿದೆ. ಗುಡ್ಡದ ರಂಗಪ್ಪ, ಮರಡಿಗುಡ್ಡದ ರಂಗ, ತಾವರೇಕೆರೆ ರಂಗಪ್ಪಗಳ ನೆಲೆ ಎತ್ತರವಾದ ಗುಡ್ಡ ಪ್ರದೇಶವಾಗಿದೆ. ಬರಗೂರು ವೀರಮ್ಮಳ ನೆಲೆ ಊರ ಹೊರಭಾಗದಲ್ಲಿದೆ. ಹೀಗಾಗಿ ಈ ಪ್ರಶಾಂತ ಭೌಗೋಳಿಕ ವಾತಾವರಣವೇ ಜನರ ಮನಸ್ಸಿಗೆ ನೆಮ್ಮದಿ ಕೊಡಬಲ್ಲದು. ಇಂತಹ ಪರಿಸರಕ್ಕೆ ಸಾಂಸ್ಕೃತಿಕ ನಾಯಕರ ಪ್ರಭಾವವೂ ಸೇರಿ ಮಾನಸಿಕ ನೆಮ್ಮದಿ ಸಹಜವಾಗಿಯೇ ಸಿಗುತ್ತದೆ. ಇಂತಹ ಸ್ಥಳಗಳನ್ನು ಪುಣ್ಯಕ್ಷೇತ್ರಗಳೆಂದು ಕರೆದು ಅಲ್ಲಿ ಉತ್ಸವ ಜಾತ್ರೆಗಳು ನೆಡೆಯುತ್ತವೆ. ಜನರು ತಾವು ಬದುಕಿನಲ್ಲಿ ಮಾಡಿದ ತಪ್ಪುಗಳನ್ನು ತಿದ್ದಿಕೊಳ್ಳಲು, ಪಾಪ ಪರಿಹಾರ ಮಾಡಿಕೊಳ್ಳಲು, ಮಾನಸಿಕ ಪರಿವರ್ತನೆ ಪಡೆಯಲು ತೀರ್ಥಕ್ಷೇತ್ರಗಳಿಗೆ ಪ್ರವಾಸ ಹೋಗುವುದು ಪುರಾತನ ಕಾಲದಿಂದಲೂ ಸಹಜವಾಗಿಯೇ ನಡೆದುಕೊಂಡು ಬರುತ್ತಿದೆ. ಈ ಕ್ಷೇತ್ರಗಳ ಕತೆ ಪುರಾಣ, ಪ್ರತೀತಿ, ಆಧ್ಯಾತ್ಮಿಕ ನಂಬಿಕೆಗಳಿಂದ ಮಾನ್ಯವಾಗಿರುವುದುಂಟು. ಇಲ್ಲಿ ನಡೆವ ಸಂಪ್ರದಾಯ ಆಚರಣೆಗಳು ಸಾಂಸ್ಕೃತಿಕ ವೀರರ ಮೆರುಗನ್ನು ಹೆಚ್ಚಿಸುತ್ತವೆ. ಈ ಕ್ಷೇತ್ರಗಳು ದೇವಾಲಯ, ಮಠ, ಮಸೀದಿ, ಮಂದಿರ, ಸಮಾದಿ, ಗದ್ದುಗೆಗಳ ರೂಪದಲ್ಲಿರುತ್ತವೆ.

ಕೆಲವು ಕ್ಷೇತ್ರಗಳು ಸಾಂಸ್ಕೃತಿಕ ವೀರರು ಪವಾಡ ಮೆರೆದ ಸ್ಥಳಗಳಾಗಿವೆ. ಉದಾಹರಣೆಗೆ ಚಂಗಾವರದ ಚದುರಂಗದ ಕಾವಲು ಎತ್ತಪ್ಪ ತನ್ನ ಗಬ್ಬವಾದ ಚಿಕ್ಕರಂಬೆ ಎಂಬ ಹಸುವನ್ನು ಅರವತ್ತು ಅಡಿ ಎತ್ತರದ ಬೇವಿನ ಮರವನ್ನು ಜೂಜಿನಲ್ಲಿ ಹಾರಿಸಿದ ಸ್ಥಳವಾಗಿದೆ. ಪುರುಸಪ್ಪನ

ಕೆರೆ ನೀರಿಗೆ ಜುಂಜಪ್ಪನ ಮಾವಂದಿರು ಮಾಟ ಮಾಡಿಸಿ ಆ ನೀರನ್ನು ಕುಡಿದ ಜುಂಜಪ್ಪನ ಹಸುಗಳು ಹಸುನೀಗುವಂತೆ ಮಾಡಿದಾಗ ಜುಂಜಪ್ಪ ಆ ನೀರಿನಲ್ಲಿರುವ ವಿಷವನ್ನೆಲ್ಲಾ ತೆಗೆದು ಅಮೃತವನ್ನಾಗಿ ಮಾಡಿದ ಪವಾಡ ಕ್ಷೇತ್ರ ಹೀಗಾಗಿ ಆ ಕೆರೆಯ ನೀರು ಇಂದಿಗೂ ಪವಿತ್ರ. ಅಂದಿನ 'ಸೀರ್‍ಯ' ಇಂದು ಸಿರ ಆಗಿದೆ. ಇಲ್ಲಿಗೆ ಬೇಟೆಯಾಡಲು ಬಂದ ಪಾಳೇಗಾರನ ಬೇಟೆ ನಾಯಿಗಳನ್ನು ಮೊಲವೊಂದು ಅಟ್ಟಿಸಿಕೊಂಡು ಬಂದ ಗಂಡು ಭೂಮಿ.

ಸಾಂಸ್ಕೃತಿಕ ವೀರರ ಹೋದೆಡೆಯಲ್ಲೆಲ್ಲಾ ಒಂದೊಂದು ಆರಾಧನಾ ಕ್ಷೇತ್ರ ಸ್ಥಾಪಿಸಲ್ಪಟ್ಟಿವೆ. ಉದಾಹರಣೆಗೆ ಜುಂಜಪ್ಪ ತನ್ನ ಗೋವುಗಳ ಹುಲ್ಲು ನೀರಿಗಾಗಿ ಹೊರಟ ಬಿಜ್ಜಂಬೆಳ್ಳ, ಗುಬ್ಬಿ ತಾಲ್ಲೂಕಿನ ಹಾಗಲವಾಡಿ, ಎತ್ತಪ್ಪನು ಗೋವುಗಳನ್ನು ಮೇಯಿಸಲು ಹೋದ ತಳಕಿನಗುಡ್ಡ ಮೊದಲಾದವು.

ಹೀಗೆ ಸಾಂಸ್ಕೃತಿಕ ಪರಂಪರೆ ಪಡೆದ ಸಾಂಸ್ಕೃತಿಕ ವೀರರ ಸ್ಥಳೀಯ ಅಥವಾ ಪ್ರಾದೇಶಿಕ ಕ್ಷೇತ್ರಗಳು ಜನ ಮನ್ನಣೆ ಪಡೆದರೂ ಚಾರಿತ್ರಿಕ ಮಹತ್ವ ಕಳೆದುಕೊಂಡಿವೆ. ಎಂದರೆ ಕೇವಲ ಜನಪದ ಕತೆ ಕಾವ್ಯಗಳಲ್ಲಿಯೇ ರಂಜನೀಯಗೊಳುತ್ತಿವೆ. ಶಿಷ್ಟ ಇತಿಹಾಸಕ್ಕೆ ಇವುಗಳ ಪ್ರಾಮುಖ್ಯತೆ ಇಲ್ಲದಿರುವುದು ವಿಪರ್ಯಾಸ. ಇಂತಹ ಆರಾಧ್ಯ ಕ್ಷೇತ್ರಗಳ ಸಂಕ್ಷಿಪ್ತ ಪರಿಚಯವನ್ನು ಇಲ್ಲಿ ಮಾಡಲಾಗಿದೆ.

**ಸಿರಾ :**

ಸಿರಾ ತುಮಕೂರು ಜಿಲ್ಲಾ ಕೇಂದ್ರದಿಂದ ಮೂವತ್ತು ಮೈಲು ದೂರದಲ್ಲಿ ಚಿತ್ರದುರ್ಗಕ್ಕೆ ಹೋಗುವ ರಾಷ್ಟ್ರೀಯ ಹೆದ್ದಾರಿ ೪ ರಲ್ಲಿದೆ. ಇದು ಒಂದು ತಾಲ್ಲೂಕು ಕೇಂದ್ರವಾಗಿದ್ದು ೧.೫೪೪ ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. ಸಿರಾದ ಪೂರ್ವಕ್ಕೆ ಮಧುಗಿರಿ, ಕೊರಟಗೆರೆ, ಪಶ್ಚಿಮಕ್ಕೆ ಗುಬ್ಬಿ, ಆಗ್ನೇಯಕ್ಕೆ ತುಮಕೂರು ಈಶಾನ್ಯಕ್ಕೆ ಆಂಧ್ರ ಪ್ರದೇಶದ ಗಡಿನಾಡನ್ನು ಒಳಗೊಂಡಿದೆ. ಕಳ್ಳಂಬೆಳ್ಳ, ಹುಲಿಕುಂಟೆ, ಬುಕ್ಕಾಪಟ್ಟಣ, ಸಿರಾ, ಗೌಡಗೆರೆ, ಎಂಬ ಐದು ಹೋಬಳಿ ಕೇಂದ್ರಗಳನ್ನು ಹೊಂದಿದೆ. ರಾಷ್ಟ್ರಕೂಟರು, ಪಲ್ಲವ, ನೊಳಂಬ, ವಿಜಯನಗರದ ಅರಸರು, ಪಾಳೇಗಾರರು, ಹೈದರಾಬಾದಿನ ನವಾಬರು, ಬಿಜಾಪುರದ ಸುಲ್ತಾನರು, ಮೈಸೂರು ಅರಸರು, ಹೈದರ್, ಟಿಪ್ಪು ಸುಲ್ತಾನ್, ಔರಂಗಜೇಬ್, ರತ್ನಗಿರಿ ಪಾಳೇಗಾರರು ಮೊದಲಾದವರು ಸಿರಾ ಸೀಮೆಯ ಸಾಂಸ್ಕೃತಿಕ ಬದುಕನ್ನು ಕಟ್ಟಿ ಬೆಳೆಸಿದರು. ಸಿರಾದ ಉತ್ತರ ಭಾಗದಲ್ಲಿರುವ ಹೆಂಜೇರು ನೊಳಂಬರ ರಾಜಧಾನಿಯಾಗಿತ್ತು. ಇದರ ಇಂದಿನ ಹೆಸರು ಹೇಮಾವತಿ. ಸಿರಾ ತಾಲ್ಲೂಕಿನ ಬರಗೂರು, ನಾದೂರು, ತಡಕಲೂರು, ಓಜಗುಂಟೆ, ನೊಳಂಬರ ಪ್ರಮುಖ ನೆಲೆಗಳಾಗಿದ್ದವು. ಇಂದಿಗೂ ಈ ಭಾಗಗಳಲ್ಲಿ ನೊಳಂಬರ ಕಾಲದ ಶಿವದೇವಾಲಯಗಳನ್ನು ಕಾಣಬಹುದು. ಹಿಂದೂ ಮುಸ್ಲಿಂ

ಕೂಡು ಸಂಸ್ಕೃತಿಯ ಪ್ರತೀಕವಾಗಿ ಮಲ್ಲಿಕ್ ರೆಹಮಾನನ ದರ್ಗಾ, ಜಾಮಾ ಮಸೀದಿಗಳನ್ನು ಕಾಣಬಹುದು. ಸಿರಾದ ಖಾನ್‌ಬಾಗ್ ತೋಟ ಬೆಂಗಳೂರಿನ ಲಾಲ್‌ಬಾಗ್ ತೋಟದ ನಿರ್ಮಿತಿಗೆ ಪ್ರೇರಣೆಯಾಯಿತು ಎಂದು ಹೇಳಲಾಗುತ್ತದೆ. ಈ ತೋಟದ ಉಸ್ತುವಾರಿಯನ್ನು ಟಿಪ್ಪು ಸುಲ್ತಾನ್ ವಹಿಸಿಕೊಂಡಿದ್ದನೆಂಬ ಐತಿಹ್ಯವಿದ್ದೆ. ಸಿರಾದ ರೇವಣ್ಣಸಿದ್ದೇಶ್ವರ ದೇವಾಲಯದ ಬಿತ್ತಿ ಚಿತ್ರಗಳು ರಾಮಾಯಣ, ಮಾಹಾಭಾರತ ಪ್ರಸಂಗಗಳನ್ನು ಒಳಗೊಂಡಿದ್ದು ಪ್ರಸಿದ್ದಮಾನವಾಗಿವೆ.

ಪಾಳೇಗಾರ ರಂಗಪ್ಪನಾಯಕ ಕಟ್ಟಿಸಿದ ಸಿರಾದ ನೆಲಕೋಟೆ ಕರ್ನಾಟಕದ ಅಪರೂಪದ ನೆಲೆಕೋಟೆಗಳಲ್ಲಿ ಒಂದು. ಇದು ಸು ೨೦ ಎಕರೆಯಷ್ಟು ವಿಶಾಲವಾಗಿದ್ದು ಸುತ್ತಲು ಕಂದಕವನ್ನು ಹೊಂದಿದೆ. ಕೋಟೆಯ ಪಕ್ಕದಲ್ಲಿಯೇ ಕೆರೆಯಿದ್ದು ಕೆರೆಯ ನೀರು ಕಂದಕಕ್ಕೆ ಬರಲು ವ್ಯವಸ್ಥೆ ಮಾಡಲಾಗಿದೆ. ರಂಗಪ್ಪ ನಾಯಕನ ಆಡಳಿತ ಕೇಂದ್ರವಾಗಿ, ಸಿರಾ ನಗರ ಗುಮ್ಮನಹಳ್ಳಿ ಕದನದಿಂದ ಇತಿಹಾಸ ಪ್ರಸಿದ್ದವಾಗಿದೆ. ಗುಮ್ಮನಹಳ್ಳಿ ಕದನದ ನಂತರ ರಂಗಪ್ಪನಾಯಕ ಒಬ್ಬ ಸಾಂಸ್ಕೃತಿಕ ನಾಯಕನಾಗಿ ಬಿಂಬಿತವಾದ. ರಂಗಪ್ಪ ನಾಯಕನ ಅವನತಿಯ ನಂತರ ಸಿರಾ ಪ್ರಾಂತ್ಯ ಮೊಘಲರ ವಶವಾಯಿತು. ಸಿರಾ ಕೋಟೆ ನೋಡುಗರ ಕಣ್ಣಿಗೆ ಅವನ ಶಕ್ತಿ, ಸಾಮರ್ಥ್ಯವನ್ನು ನೆನಪು ಮಾಡಿಕೊಡುತ್ತದೆ. ರಂಗಪ್ಪ ನ್ಾಯಕ ಕಟ್ಟಿಸಿದ ಕೆರೆ ಇಂದಿಗೂ ಕುಡಿಯುವ ನೀರಿಗಾಗಿ ಬಳಕೆಯಾಗುತ್ತದೆ. ರಂಗಪ್ಪನಾಯಕ ಶತೃಗಳೊಡನೆ ದಿಟ್ಟತನದಿಂದ ಹೋರಾಡಿದ ಸ್ವರೂಪವನ್ನು ಜನರು ಲಾವಣಿಯಲ್ಲಿ ಹಾಡಿ ಹೊಗಳುತ್ತಾರೆ.

ಕತ್ತಿಯಾ| ಹಿಡಿದು| ತಾ| ನಿಂತಾನೆ| ರಂಗಯ್ಯ|
ಲೆಕ್ಕ| ವಿಲ್ಲವು ಬಿದ್ದ| ತಲೆಗಾಳು|
ಲೆಕ್ಕ| ವಿಲ್ಲವು ಬಿದ್ದ| ತಲೆಗಾಳು| ಕತ್ತಿಯಾ ಮೇಲೆತ್ತಿ| ಮತ್ತೆ| ಹಿಡಿದಾನೆ||

ಕತ್ತಿಯಾ| ತಿರುವಾನೆ| ತುರುಕರ್‍ನ| ಎಸೆದಾನೆ|
ಒತ್ತಿ ತಿರ್ವಿ| ಮೀಸೆ| ರಣಸರ್ಜ|
ಒತ್ತಿ ತಿರ್ವಿ| ಮೀಸೆ| ರಣಸರ್ಜ| ಸಿರ್‍ಯಾದ| ಗುತ್ತಿಗೆ| ತನಗೇ| ಇಲ್ಲೆಂದ||

ಕಣ್ಣು| ಕೆಂಪಾದಾವು| ದುಂಡನ್ನ| ಮುಖದಲ್ಲಿ
ಕುಣಿದೆದ್ದು| ನಿಂತಾವೆ| ಮೀಸೆಗಳು|
ಕುಣಿದೆದ್ದು| ನಿಂತಾವೆ| ಮೀಸೆಗಳು| ರಂಗೈನ| ಅವುಡೇ ಕಚ್ಚಾವು| ಹಲ್ಲುಗಳೂ||

ಕತ್ತಿಯಾ| ತಿರುವೂತ| ತಲೆಗಳನು| ತರಿಯುತ|

ಮತ್ತೆಲ್ಲಿ| ಲೆಖ್ಖವೋ| ರಣಸರ್ಜ|

ಮತ್ತೆಲ್ಲಿ| ಲೆಖ್ಖವೋ| ರಣಸರ್ಜ| ತೊತ್ತಿಗರ| ಮುತ್ತೆದೆ| ತನಕೆ| ಉಳಿವಿಲ್ಲ||

ಇಂದಿಗೂ ಜನತೆ ತಮ್ಮ ಧಾರ್ಮಿಕ ಉತ್ಸವ, ಹಬ್ಬ, ಹರಿದಿನಗಳಲ್ಲಿ ರಂಗಪ್ಪ ನಾಯಕನ ವೇಷಹಾಕಿ ರಂಗಪ್ಪ ನಾಯಕನ ಕೆಚ್ಚೆದೆ ಹೋರಾಟಗಳನ್ನು ತಮಗೆ ಆರೋಪಿಸಿಕೊಳ್ಳುತ್ತಾ ಅವನನ್ನು ತಮ್ಮ ಬದುಕಿಗೆ ಆದರ್ಶವಾಗಿ ಸ್ವೀಕರಿಸಿದ್ದಾರೆ. ಕೋಟೆಯ ಒಳಭಾಗದಲ್ಲಿ ಅರಮನೆ, ರಾಣಿಯರ ಅಂತಃಪುರ, ಕಲ್ಯಾಣಿಗಳು ಅರಮನೆಗೆ ನೀರಿಗಾಗಿ ಮಾಡಲಾಗಿದ್ದ ಕೊಳಾಯಿ ವ್ಯವಸ್ಥೆ ಹುಲಿ ಮುಖದ ದ್ವಾರಬಾಗಿಲು ಮೊದಲಾದವುಗಳನ್ನು ಕಾಣಬಹುದು. ಡಾ. ಎಂ.ವಿ. ವಸು ಅಭಿಪ್ರಾಯ ಪಡುವಂತೆ ಚಿತ್ರದುರ್ಗದ ಮದಕರಿ ನಾಯಕನಂತೆ ಶಿರಾದ ಪಾಳೇಗಾರ ರಂಗಪ್ಪನಾಯಕನೂ ಜನಪದರ ಬಾಯಿಯಲ್ಲಿ ಜನಪ್ರಿಯತೆ ಮೆರೆದಿದ್ದಾನೆ. ಹರತಿಯ ಬಯಲಿನ ವೀರಗೀತೆಗಳಲ್ಲಿ ಸಿರಾದ ರಂಗಣ್ಣನಾಯಕನ ಪ್ರಸ್ತಾಪವಿದೆ. ಹಿರಿಯೂರು ಮದನಕುಂಟೆ ಗ್ರಾಮದಲ್ಲಿ ಪ್ರಚಲಿತವಿರುವ ವೀರಮ್ಮನ ಗೀತೆಗಳಲ್ಲಿ ವೀರಮ್ಮನ ಗಂಡ ನಾಗಣ್ಣ ಸಿರಾದ ರಂಗಪ್ಪ ನಾಯಕನಿಂದ ಪುರಸ್ಕೃತನಾದನೆಂದು ಉಲ್ಲೇಖವಾಗಿದೆ.[೧]

ತರಿಕೆರೆಯ ಪಾಳೆಗಾರ ಪುವ್ವಲ ಗೋತ್ರದ ಕೆಂಗಣ್ಣ ನಾಯಕನ ಕಾರಣದಿಂದ 'ಗುಮ್ಮನಹಳ್ಳಿ' ಕದನ ನಡೆದ ಸ್ಥಳ ಗುಮ್ಮನಹಳ್ಳಿ ಇಂದು ಪಾಳುಬಿದ್ದು, ಗ್ರಾಮ ಬೇರೊಂದು ಸ್ಥಳಕ್ಕೆ ಸ್ಥಳಾಂತರಿಸಲ್ಪಟ್ಟಿದೆ. ಗ್ರಾಮವಿತ್ತು ಎಂದು ಹೇಳುವ ಪಾಳು ಬಿದ್ದ ಮನೆಗಳ ಅವಶೇಷಗಳು ಅಗೇವು ವಳಕಲ್ಲುಗಳನ್ನು ಕಾಣಬಹುದು. ಇದು ಸಿರಾ ಮಧುಗಿರಿ ರಸ್ತೆಯಲ್ಲಿ ಸಿರಾದಿಂದ ಸು ೩ ಕಿ.ಮಿ. ದೂರದಲ್ಲಿದೆ. ಗುಮ್ಮನಾಯಕ ಆ ಗ್ರಾಮವನ್ನು ಆಳುತ್ತಿದ್ದುದರಿಂದ 'ಗುಮ್ಮನಹಳ್ಳಿ' ಎಂದು ಹೆಸರಾಗಿದೆ ಎಂದು ಸ್ಥಳೀಯ ನಂಬಿಕೆ ಇದೆ.

**ಬೆಜ್ಜಿಹಳ್ಳಿ :**

ಸಿರಾ ಧರ್ಮಪುರ ರಸ್ತೆಯಲ್ಲಿ ೩೫ ಕಿ.ಮಿ ದೂರದ ಲಕ್ಕನ ಹಳ್ಳಿಯಿಂದ ಎಡ ೨ ಕಿ.ಮಿ ದೂರದಲ್ಲಿ ಬೆಜ್ಜಿಹಳ್ಳಿ ಗ್ರಾಮವಿದೆ. ಇದು ಸು ೨೫೦ ಮನೆಗಳ ಗ್ರಾಮ. ಕುಂಚಿಟಿಗ ಜನಾಂಗದವರೇ ಹೆಚ್ಚಾಗಿ ವಾಸಿಸುವ ಈ ಗ್ರಾಮದಿಂದ ಒಂದು ಫರ್ಲಾಂಗ್ ದೂರದಲ್ಲಿ ಬೊಪ್ಪರಾಯನ ದೇವಾಲಯವಿದೆ. ಕುಂಚಿಟಿಗ ಜನಾಂಗದ ವಲಸೆ ಪುರಾಣ ಹೇಳುವ ಪ್ರಕಾರ ಈ ಜನಾಂಗದ ವಲಸೆಯ ಸಂದರ್ಭದಲ್ಲಿ ನದಿಯೊಂದು ಅಡ್ಡಬಂದಿತು. ಬೊಪ್ಪರಾಯ ಗಂಗಾಭವಾನಿಗೆ ಶಿರವನ್ನು ಅರ್ಪಿಸಿ ದಾರಿ ಬಿಡಿಸಿದ. ನಂತರ ಆತನ ಮುಂಡ ಬೆಜ್ಜಿಹಳ್ಳಿಯವರೆಗೂ ನೆಡೆದು ಬಂದು ಈ ಸ್ಥಳದಲ್ಲಿ ಸಮಾದಿಯಾದನೆಂಬ ಪ್ರತೀತಿ ಇದೆ.[೨] ಮೊದಲು ಊರಿನಿಂದ

ಹೊರಭಾಗದ ಪ್ರಶಸ್ತ ಸ್ಥಳದಲ್ಲಿದ್ದ ಈ ದೇವಾಲಯ ಕಾಲ ಕ್ರಮೇಣ ಸುತ್ತಲೂ ಮನೆಗಳು ನಿರ್ಮಾಣಗೊಳ್ಳುತ್ತಿವೆ. ಇಲ್ಲಿ ಬೊಪ್ಪರಾಯನ ವೀರಗಲ್ಲು ಕಾಣಬಹುದು. ವೀರ ಬಿಲ್ಲು ಬಾಣವನ್ನು ಹೆಗಲಲ್ಲಿ ನೇತು ಹಾಕಿಕೊಂಡಿರುವ ಚಿತ್ರವಿದೆ. ವೀರನಕಾಲ ಬಳಿಯಲ್ಲಿ ಹಸು, ಕರುವಿನ ಚಿತ್ರ, ಮೇಲ್ಭಾಗದಲ್ಲಿ ಕ್ರಮವಾಗಿ ಸೂರ್ಯ ಚಂದ್ರ ಮಧ್ಯಭಾಗದಲ್ಲಿ ಲಿಂಗದ ಚಿತ್ರ, ಅದನ್ನು ಒಬ್ಬ ವ್ಯಕ್ತಿ ಪೂಜಿಸುತ್ತಿದ್ದಾನೆ. ಈ ವ್ಯಕ್ತಿ ಬೊಪ್ಪರಾಯನ ಗುರು ಬೀರಲಿಂಗೇಶ್ವರನೆಂದು ಸ್ಥಳೀಯ ನಂಬಿಕೆ. ಕುಂಚಿಟಿಗ ಜನಾಂಗದ ಜಲ್ದೇನೋರು ಗೋತ್ರದ ಕುಲದೇವತೆಯಾದ ಈ ಬೊಪ್ಪರಾಯನಿಗೆ ಹಿಂದಿನ ಕಾಲದಲ್ಲಿ ಬೃಹತ್ ಜಾತ್ರೆಯೇ ನಡೆಯುತ್ತಿದ್ದಿತು. ಕರ್ನಾಟಕ ಹಾಗೂ ಸುತ್ತಮುತ್ತಲಿನ ರಾಜ್ಯಗಳಿಂದ ಆಂಧ್ರ ಪ್ರದೇಶ, ತಮಿಳುನಾಡು ಮೊದಲಾದ ಭಾಗಗಳಿಂದ ಭಕ್ತಾದಿಗಳು ಬರುತ್ತಿದ್ದರು. ಆದರೆ ಇಂದು ಜಾತ್ರಾ ಮಹೋತ್ಸವಗಳು ನಿಂತುಹೋಗಿವೆ. ಕಾರಣ ಉತ್ಸವದ ಸಂದರ್ಭದಲ್ಲಿ ನರಬಲಿಯಾಗಬೇಕು. ಆದರೆ ಇಂದು ನರಬಲಿ ಕೊಡುವುದು ಕಾನೂನಿನ ಪ್ರಕಾರ ಅಪರಾಧವಾಗಿದೆ. ಹೀಗಾಗಿ ನಿತ್ಯ ಪೂಜಾ ಕಾರ್ಯಕ್ರಮಗಳು ಮಾತ್ರ ನಡೆಯುತ್ತವೆ. ಕುಂಚಿಟಿಗ ಜನಾಂಗದ ೩೩ ಅಮಾವಾಸೆಯ ಭಕ್ತರಿದ್ದಾರೆ.[೩]

**ಬರಗೂರು :**

ಸಿರಾ ಅಮರಾವತಿ ಮಾರ್ಗದಲ್ಲಿ ೨೦ ಕಿ.ಮಿ ದೂರದಲ್ಲಿ ಬರಗೂರು ಗ್ರಾಮವಿದೆ. ಇದು ವಕ್ಕಲಿಗರ ಒಂದು ಪ್ರಮುಖ ಪಂಗಡವಾದ ಕುಂಚಿಟಿಗ ಜನಾಂಗದ ಸಾಂಸ್ಕೃತಿಕ ವೀರ ಮಹಿಳೆ ವೀರಮ್ಮ ಸತಿಯಾದ ಸ್ಥಳ. ಇದು ನೊಳಂಬ ಅರಸರ ಕಾಲದಲ್ಲಿ ಪ್ರಸಿದ್ಧ ಶಿಕ್ಷಣ ಕೇಂದ್ರವಾಗಿತ್ತು.[೪] ಹೇಮಾವತಿಯಲ್ಲಿ ಆಳ್ವಿಕೆ ಮಾಡುತ್ತಿದ್ದ ನೊಳಂಬ ಅರಸರ ಕುದುರೆಗಳಿಗೆ ಬರಗು ಎಂಬ ಒಂದು ಜಾತಿಯ ಹುಲ್ಲನ್ನು ಬೆಳೆಸುತ್ತಿದ್ದರಿಂದ ಬರಗೂರು ಆಯಿತೆಂದು ಸ್ಥಳೀಯ ಜನಪದ ನಂಬಿಕೆ ಹೇಳುತ್ತದೆ. ಇಲ್ಲಿನ ಗ್ರಾಮ ದೇವತೆ ಎನಿಸಿದ ವೀರಮ್ಮ ಕೆಂಡ ಕೊಂಡವಾದ ಸ್ಥಳ ಗ್ರಾಮದಿಂದ ಎರಡು ಫರ್ಲಾಂಗ್ ದೂರದಲ್ಲಿದೆ. ಕುಂಚಿಟಿಗ ಆವಿನ ಗೋತ್ರದವರ ಕುಲದೇವತೆಯಾಗಿ ಸುತ್ತ ಮುತ್ತಲಿನ ಗ್ರಾಮಗಳಲ್ಲಿ ಜಾತಿ ಮತ ಬೇದವಿಲ್ಲದೆ ಪೂಜಿಸಲ್ಪಡುತ್ತಾಳೆ. ವರ್ಷಕ್ಕೊಮ್ಮೆ ವಿಜೃಂಭಣೆಯ ಉತ್ಸವ ನಡೆಯುತ್ತದೆ. ಕರ್ನಾಟಕದ ನಾನಾ ಭಾಗಗಳಿಂದ ಅಪಾರಜನ ಬರುತ್ತಾರೆ. ವೀರಮ್ಮ ಸತಿಯಾದ ಸ್ಥಳದಲ್ಲಿ ವೀರಮ್ಮಳ ಸತಿಕಲ್ಲುಗಳು ಹಾಗೂ ವೀರಗಲ್ಲುಗಳನ್ನು ನೆಡಲಾಗಿದೆ. ಈ ವೀರಗಲ್ಲುಗಳು ಗ್ರಾಮದ ಸುತ್ತಮುತ್ತಲೂ ಇದ್ದವುಗಳನ್ನು ಇಲ್ಲಿ ತಂದು ಒಟ್ಟಿಗೆ ನೆಟ್ಟು ಸುತ್ತಲೂ ಕಾಂಪೌಂಡ್ ಕಟ್ಟಿ ರಕ್ಷಿಸಲಾಗಿದೆ.

ಊರಿನ ಒಳಭಾಗದಲ್ಲಿ ವೀರಮ್ಮಳ ಮೆರವಣಿಗೆ ದೇವರನ್ನು ಮಾಡಿಕೊಂಡಿದ್ದು ಇಲ್ಲಿ ವಿವಾಹ, ನಾಮಕರಣ, ಚೌರ ಮೊದಲಾದ ಧಾರ್ಮಿಕ ಕಾರ್ಯಗಳು ನೆಡೆಯುತ್ತವೆ, ಪ್ರತೀ ಸೋಮವಾರ ವಿಶೇಷ ಪೂಜೆ ನೆಡೆಯುತ್ತದೆ.

**ಪಟ್ಟನಾಯಕನ ಹಳ್ಳಿ :**

ಇದು ಸಿರಾ ಸೀಮೆಯ ಒಂದು ಪ್ರಮುಖ ಮಠವಾಗಿದ್ದು ಧಾರ್ಮಿಕ ತಾಣವಾಗಿದೆ. ಸಿರಾ ಅಮರಾಪುರ ರಸ್ತೆಯಲ್ಲಿ ೧೪ ಕಿ.ಮಿ ದೂರದಲ್ಲಿ ಪಟ್ಟನಾಯಕನಹಳ್ಳಿ ಗೇಟ್ ಹತ್ತಿರ ಎಡಕ್ಕೆ ತಿರುಗಿ ಎರಡು ಕಿ.ಮಿ ಚಲಿಸಿದರೆ ಗುರುಗುಂಡ ಬ್ರಹ್ಮೇಶ್ವರ ಮಠ ಸಿಗುತ್ತದೆ. ಇತಿಹಾಸ ಪ್ರಸಿದ್ಧ ಮಠವಾದ ಇದು ಸಿರಾ ಸೀಮೆಯ ಒಂದು ಸಾಂಸ್ಕೃತಿಕ ಕೇಂದ್ರ ಸುಮಾರು ಒಂದು ಸಾವಿರ ಮನೆಗಳ ಗ್ರಾಮವಾಗಿದ್ದು ವ್ಯಾಪಾರ ಹಾಗೂ ಭಾರಿ ಜನಗಳ ಹಾಗೂ ಪ್ರಮುಖ ವಿದ್ಯಾ ಕೇಂದ್ರವಾಗಿದೆ. ಸು.೧೫ ದಿನಗಳ ಕಾಲ ಭಾರಿ ದನಗಳ ಜಾತ್ರೆ ನಡೆಯುತ್ತದೆ.

ಹದಿನೇಳನೇ ಶತಮಾನದ ಕೊನೆಯ ಭಾಗದಲ್ಲಿ ಸ್ಪಟಿಕ ನಾಯಕ ಎನ್ನುವ ಮಾಂಡಲಿಕನ ಅಧಿಪತ್ಯಕ್ಕೆ ಈ ಪ್ರದೇಶ ಒಳಪಟ್ಟಿತ್ತು. ಎನ್ನುವುದರೊಂದಿಗೆ ಗುರುಗುಂಡ ಬ್ರಹ್ಮೇಶ್ವರ ಮಠದ ಇತಿಹಾಸ ಪ್ರಾರಂಭವಾಗುತ್ತದೆ. ಸ್ಪಟಿಕ ನಾಯಕ ಆಳುತ್ತಿದ್ದುದರಿಂದ ಆ ಪ್ರದೇಶ ಸ್ಪಟಿಕಪುರಿ ಎನಿಸಿಕೊಂಡಿತು. ಅನಂತರ ಜನರ ಬಾಯಲ್ಲಿ ಸ್ಪಟಿಕ ನಾಯಕನಪುರ, ಪಟ್ಟಿಕನಪುರ, ಕೊನೆಗೆ ಪಟ್ಟನಾಯಕನ ಹಳ್ಳಿ ಆಯಿತು ಎನ್ನಲಾಗಿದೆ. ಇಲ್ಲಿನ ಮಠವನ್ನು ಗುರುಗುಂಡರ ಶಿಷ್ಯ ನಂಜಾವಧೂತರು ಗುರುವಿನ ಆಶೀರ್ವಾದದಿಂದ ನಿರ್ಮಿಸಿದರು. ಮಠದಲ್ಲಿ ಒಂದು ಬೃಹತ್ ಗಾತ್ರದ ಶಿವಲಿಂಗವಿದೆ. ಚೌಕಾಕಾರದಲ್ಲಿ ಕಲ್ಲಿನಿಂದ ನಿರ್ಮಿಸಿರುವ ದೇವಾಲಯ ಸುಖನಾಸಿ, ಪ್ರಾಗಂಣ, ಗರ್ಭಗುಡಿಯನ್ನು ಒಳಗೊಂಡಿದೆ. ಆಕರ್ಷಕ ದ್ರಾವಿಡ ವಾಸ್ತು ಶೈಲಿಯ ಈ ದೇಗುಲದಲ್ಲಿ ಭಾರಿ ಗಾತ್ರದ ನಗಾರಿ, ಗಂಧ ತೇಯುವ ಕಲ್ಲು, ಅಮೃತಶಿಲೆಯ ದತ್ತಾತ್ರೆಯ ಮೂರ್ತಿಯನ್ನು ಒಳಗೊಂಡಿದೆ. ಈ ದೇವಾಲಯ ನಿರ್ಮಾಣಕ್ಕೆ ಬಳಸಿದ ಎಲ್ಲಾ ಕಲ್ಲುಗಳು ಮದ್ದಕನಹಳ್ಳಿಯ ಗ್ರಾನೈಟ್ ಗಣಿಯಿಂದ ಬಂದಿವೆ. ಚಂದ್ರಕಾಂತದ ಶಿಲೆಯಿಂದ ರೂಪಿಸಿರುವ ನಾಲ್ಕು ಚಕ್ರಗಳ ಮೂವತ್ತು ಅಡಿ ಎತ್ತರದ ಕಲ್ಲು, ಗಾಲಿ ತೇರು ಪ್ರಮುಖ ಆಕರ್ಷಣೆಯಾಗಿದೆ. ಇದನ್ನು ನಂಜಾವಧೂತರು ತಮ್ಮ ಗುರುಗಳ ನೆನಪಿಗಾಗಿ ನಿರ್ಮಿಸಿದರಂತೆ. ಎಂಟು ಅಡಿ ಎತ್ತರದ ಬೃಹತ್ ಶಿವಲಿಂಗುವಿನ ಮುಂದೆ ದೊಡ್ಡದಾದ ಬಸವನ ವಿಗ್ರಹವಿದೆ. ನವಗ್ರಹ, ನಂದಿ, ಬ್ರಹ್ಮ, ಮೊದಲಾದ ದೇವಾಲಯಗಳು, ವಿಶಾಲವಾದ ಭೋಜನಶಾಲೆ, ವಿದ್ಯಾರ್ಥಿಗಳ ವಸತಿ ಗೃಹ, ನಂಜಾವಧೂತರ ಗದ್ದುಗೆ, ಪ್ರಾಣಿ, ಪಕ್ಷಿ ಸಂರಕ್ಷಣಾ ಕೊಠಡಿಗಳು ಕಂಡು ಬರುತ್ತವೆ. ಪ್ರತೀ ಸೋಮವಾರ ವಿಶೇಷ ಪೂಜೆ ನೆಡೆಯುತ್ತದೆ. ಐವತ್ತನಾಲ್ಕು ಎಕರೆ ವಿಶಾಲವಾದ ಕಾಂಪೌಂಡಿನ ಸುತ್ತ ಹೊಂಗೆ, ಹುಣಸೆ, ಬೇವಿನ ಮರಗಳು ಬೆಳೆದಿದ್ದು ಮಠಕ್ಕೆ ಹೊಂದಿಕೊಂಡಂತೆ ಕೆರೆ ಇದೆ. ಈ ಮಠದ ಲಾಂಛನ ಲಿಂಗಮುದ್ರೆಯಾಗಿದ್ದು ನಂಜಾವಧೂತ ಮಠಕ್ಕೆ ಪೀಠಾದಿಪತಿಗಳ ಪರಂಪರೆಯೂ ಇದೆ. ನಂಜಾವಧೂತ ಸ್ವಾಮಿ, ಶ್ರೀ ರಂಗಾವಧೂತ ಸ್ವಾಮಿಗಳು, ಶ್ರೀ ಶ್ರೀ ರಂಗಾವಧೂತರು, ಮುದ್ದು ರಂಗಾವಧೂತ ಸ್ವಾಮಿ, ಪರಮದಾಸ ಅವಧೂತ ಸ್ವಾಮಿ,

ಗುರುಕುಮಾರ ಅವಧೂತರು ಹಾಗೂ ಶ್ರೀ ನಂಜಾವಧೂತರು. ಕಂಬಗಳಿಂದ ಕಟ್ಟಲಾದ ಮಠದ ದೇವಾಲಯ, ಕಂಬದ ನಾಲ್ಕು ದಿಕ್ಕುಗಳಲ್ಲಿ ದಿಗ್‌ದೇವತೆಗಳು ವಿಷ್ಣುವಿನ ಅವತಾರಗಳು, ಆಂಜನೇಯ ಮೊದಲಾದ ಪ್ರತಿಮೆಗಳನ್ನು ಕಡೆಯಲಾಗಿದೆ. ಹೀಗೆ ಈ ಅವಧೂತ ಮಠ ಶೈವ ಮತ್ತು ವೈಷ್ಣವ ಪಂಥದ ಸಂಮ್ಮಿಲನವಾಗಿದೆ.

**ಮರಡಿಗುಡ್ಡ :**

ಸಿರಾ ಬುಕ್ಕಾಪಟ್ಟಣ ಮಾರ್ಗದಲ್ಲಿ ೨೦ ಕಿ.ಮಿ. ದೂರದಲ್ಲಿ ಎಡಭಾಗಕ್ಕೆ ರಂಗನಾಥಪುರವಿದೆ. ಈ ಗ್ರಾಮದ ಹತ್ತಿರ ಇರುವ ಗುಡ್ಡವೇ ಮರಡಿ ಗುಡ್ಡ. ಈ ಗುಡ್ಡದ ಸುತ್ತಲೂ ಹತ್ತಾರು ಗುಡ್ಡಗಳು ಸಾಲು ಸಾಲಾಗಿ ಕಂಡುಬಂದರೂ ಮರಡಿ ಗುಡ್ಡಕ್ಕೆ ಒಂದು ವಿಶೇಷತೆ ಇದೆ. ಇದು ಸಿರಾ ಸೀಮೆಯ ಧಾರ್ಮಿಕ ಪ್ರಸಿದ್ಧ ಪ್ರವಾಸಿ ಸ್ಥಳ. ಗುಡ್ಡದ ಮೇಲ್ಭಾಗದಲ್ಲಿ ಪಂಪಾ ಕ್ಷೇತ್ರದಿಂದ ಕಂಬಳಿ ಗೋಣಿಯಲ್ಲಿ ವ್ಯಾಪಾರಗಾರರ ಮೂಲಕ ಬಂದನೆಂದು ಹೇಳಲಾಗುವ ರಂಗನಾಥನ ದೇಗುಲವಿದೆ. ಈ ಮರಡಿಗುಡ್ಡದ ರಂಗಪ್ಪ, ಜುಂಜಪ್ಪನ ಸಮಕಾಲೀನ ಪ್ರೇಮದ ಗೆಳೆಯ, ಜುಂಜಪ್ಪನಂತೆ ಅಲೌಕಿಕ ನೆಲೆಯವನು. ಈ ಗುಡ್ಡದ ಮೇಲೆ ಮರಡಿಯ ಗಿಡಗಳು ಹೆಚ್ಚಾಗಿ ಬೆಳೆಯುತ್ತಿದ್ದುದರಿಂದ ಮರಡಿಗುಡ್ಡವೆಂದೇ ಹೆಸರಾಗಿದೆ. ಕುಂಚಿಟಗ ಜನಾಂಗದ ಅಲ್ವೇನವರ ಗೋತ್ರದವರಿಗೆ ಮನೆ ದೇವರಾದ ರಂಗನಾಥನ ದೇವಾಲಯ ಗುಡ್ಡದ ಮೇಲ್ಭಾಗದಲ್ಲಿ ಗ್ರಾನೈಟ್, ಮಜಾಕ್ ಕಲ್ಲುಗಳಿಂದ ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದ್ದು ರಂಗನಾಥನ ಅಕ್ಕ ಪಕ್ಕ ಆತನ ಮಡದಿಯರಾದ ಲೋಕಾಂಬಿಕ ಹಾಗೂ ತೋಣಚಮ್ಮನ ವಿಗ್ರಹಗಳಿವೆ. ರಂಗಪ್ಪನ ಗುಡಿಯ ಮುಂಭಾಗದಲ್ಲಿ ಬೂತಪ್ಪನ ಗುಡಿ ಇದೆ. ಗುಡ್ಡದ ಮೇಲ್ಭಾಗದವರೆಗೂ ವಾಹನ ಸಂಚಾರಕ್ಕೆ ರಸ್ತೆ ಮಾಡಲಾಗಿದೆ. ನೀರು ವಿದ್ಯುತ್ ವ್ಯವಸ್ಥೆಯೂ ಇದೆ. ಗುಡ್ಡದ ಕೆಳಭಾಗದಲ್ಲಿ ಪರಸಮ್ಮನ ಕೆರೆ ಇದೆ. ಸಿರಾ ಪಾಳೇಗಾರ ರಂಗಪ್ಪ ನಾಯಕ ಈ ಗುಡ್ಡದ ರಂಗನಾಥನ ಭಕ್ತನಾಗಿದ್ದ.

ಗುಡ್ಡದ ರಂಗನಾಥನ ಬಗ್ಗೆ ಒಂದು ಐತಿಹ್ಯವಿದೆ. ರಂಗನಾಥನ ರಥದ ಗಾಲಿಗಳು ತಾವರೇಕೆರೆ ಗ್ರಾಮದ ರಂಗನಾಥ ದೇವಾಲಯದ ಬಳಿ ಇದ್ದವು. ಸು.೩೦೦ ವರ್ಷಗಳ ಹಿಂದೆ ಮರಾಠ, ಮೈಸೂರು, ಮೊಘಲರ ಯುದ್ಧ ಕಾಲದಲ್ಲಿ ಒಂದು ದಿನ ಮರಾಠ ಸೈನ್ಯ ತಾವರೇಕೆರೆಯಲ್ಲಿ ಬೀಡುಬಿಟ್ಟಿತ್ತು. ಸೈನಿಕರ ಆಹಾರಕ್ಕಾಗಿ ಅಡಿಗೆ ಮಾಡಲು ಸೌದೆ ಬೇಕಾಯಿತು ಆಗ ರಂಗನಾಥನ ರಥದ ಮರದ ಗಾಲಿಗಳನ್ನು ಕೊಡಲಿಯಿಂದ ಸೀಳತೊಡಗಿದರು. ಸೌದೆ ಒಡೆಯುತ್ತಿದ್ದವನು ಹಾಗೆಯೇ ಮುರ್ಛೆಹೋದನು. ಭಯಗೊಂಡ ಉಳಿದ ಸೈನಿಕರು ಬೇರೆ ಸೌದೆಯನ್ನು ತಂದು ಅಡಿಗೆ ಮಾಡಿ ಊಟಮಾಡಿದರು. ರಾತ್ರಿ ಮಲಗಿದಾಗ ಸೈನ್ಯಾಧಿಪತಿಯ ಕನಸಿನಲ್ಲಿ ರಂಗನಾಥ ಕಾಣಿಸಿಕೊಂಡನು. ಆ ಸೈನ್ಯಾಧಿಪತಿ ದೈವಭಕ್ತನಾದ್ದರಿಂದ ಅಲ್ಲಿ ಒಂದು

ಚಿಕ್ಕ ದೇವಾಲಯ ಕಟ್ಟಿಸಿದ. ನಿತ್ಯ ಪೂಜೆಗಾಗಿ ಉತ್ಸವ ಮೂರ್ತಿಯನ್ನು ತನ್ನೊಡನೆ ತೆಗೆದುಕೊಂಡು ಹೋದನು. ಮರಾಠರಿಗೆ ಯುದ್ಧದಲ್ಲಿ ಜಯವಾಯಿತು. ಸಿರಾದಲ್ಲಿ ಅಬ್ದುಲಾಖಿ ಹಾಗೂ ಮಲ್ಲಿಕ್ ಖಾನರಿಗೆ ಸೋಲಾಯಿತು.[೧೩] ಮರಾಠರ ಬಾಜಿರಾವ್ ಬಾಬೂರಾವ್ ಎಂಬುವವರು ಈ ಗ್ರಾಮದಲ್ಲಿ ಒಂದು ಛತ್ರ ಕಲ್ಯಾಣಿ, ಸ್ನಾನದ ಘಟ್ಟ ಹಾಗೂ ಮಂಟಪಗಳನ್ನು ಕಟ್ಟಿಸಿ ಒಂದು ತೋಪನ್ನು ಬೆಳೆಸಿದರು. ಇವುಗಳನ್ನು ಇಂದಿಗೂ ಕಾಣಬಹುದಾಗಿದೆ.

**ಮಾಗೋಡು :**

ಸಿರಾದಿಂದ ಮಧುಗಿರಿ ಮಾರ್ಗವಾಗಿ ೮ ಕಿ.ಮಿ ದೂರದಲ್ಲಿ ಎಡಭಾಗಕ್ಕೆ ತಿರುಗಿ ಒಂದು ಕಿ.ಮಿ ಮುಂದೆ ಸಾಗಿದರೆ ಸಿಗುವ ಗ್ರಾಮವೇ ಮಾಗೋಡು. ಡಾ.ಚಿಕ್ಕಣ್ಣಯಣ್ಣೆಕಟ್ಟೆಯವರು ಸಂಗ್ರಹಿಸಿರುವ 'ಮಾಗೋಡು ರಂಗನಕಥೆ 'ಎನ್ನುವ ಜಾನಪದ ಪುಸ್ತಕ ಈ ರಂಗನಾಥನಿಗೆ ಸಂಬಂದಿಸಿದುದಾಗಿದೆ. ಮಾಗೋಡು ರಂಗನಾಥನನ್ನು ಕಂಬದ ರಂಗ, ಕಂಬದ ರಾಯ, ಕಂಬದಯ್ಯ, ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈ ರಂಗನಾಥನಿಗೆ ವರ್ಷಕ್ಕೊಮ್ಮೆ ಬೃಹತ್ ಜಾತ್ರೆ ನೆಡೆಯುತ್ತದೆ. ಕರ್ನಾಟಕದ ನಾನಾ ಭಾಗಗಳಿಂದ ಈ ದೇವರ ಹೂವಿನ ತೇರಿಗೆ ಬರುತ್ತಾರೆ. ಈ ರಂಗನಾಥ ಸಿರಾ ಸೀಮೆಯ ಇತರ ಸಾಂಸ್ಕೃತಿಕ ನಾಯಕರಾದ ಎತ್ತಪ್ಪ, ಜುಂಜಪ್ಪ, ಗುಡ್ಡದ ರಂಗ ಮೊದಲಾದವರ ಸಂಪರ್ಕ ಪಡೆದು ಕೊಂಡಿದ್ದಾನೆ. ಈತನ ಮೇಲೆ ಹೇಳುವ ಪದಗಳನ್ನು ಕ್ಯಾಸೆಟ್ ಮಾಡಿ ಮಾರಲಾಗುತ್ತದೆ.

ಹಳೆಯ ದೇವಸ್ಥಾನ ಜೀರ್ಣೋಧಾರಗೊಂಡು ಸಂಪೂರ್ಣ ಹೊಸತನ ಪಡೆದುಕೊಂಡಿದೆ. ದೇವಾಲಯದ ಬಾಗಲವಾಡ, ವಿಗ್ರಹಗಳು ಎಲ್ಲವೂ ತಾಮ್ರದ ತಗಡಿನಿಂದ ಹೊದಿಸಲ್ಪಟ್ಟಿವೆ. ರಂಗನಾಥನ ಅಕ್ಕ ಪಕ್ಕ ಚಿತ್ರದೇವರು ಹಾಗೂ ಎಲ್ಲಮ್ಮರ ದೇವಾಲಯಗಳಿವೆ. ದೇವಾಲಯದ ಮುಂದೆ ಎತ್ತರವಾದ ದೀಪಸ್ಥಂಬವಿದೆ. ಜುಂಜಪ್ಪನ ಗುಡಿ ಮುಂಭಾಗದ ಎಡಭಾಗದಲ್ಲಿ ಸೋಮನ ದೇವಾಲಯವಿದೆ. ಪ್ರತೀ ವರ್ಷ ಫೆಬ್ರವರಿ ತಿಂಗಳಲ್ಲಿ ನಡೆಯುವ ಹೂವಿನ ತೇರು ಸಹಸ್ರಾರು ಜನರನ್ನು ಆಕರ್ಷಿಸುತ್ತದೆ. ಆ ಸಮಯದಲ್ಲಿ ಈ ಗ್ರಾಮದ ಸುತ್ತಮುತ್ತ ಎತೇಚ್ಚವಾಗಿ ಹೂ ಹಣ್ಣು, ಕಾಯಿ, ಮೊದಲಾದವುಗಳಿಂದ ದೇವರಿಗೆ ಭಕ್ತಿಪೂರ್ಣವಾಗಿ ಹರಕೆಯನ್ನು ತೀರಿಸುತ್ತಾರೆ. ವಿಶೇಷವಾಗಿ ಕಾಡುಗೊಲ್ಲರಿಗೆ ಆರಾಧ್ಯ ದೈವವಾಗಿ ಅವರೇ ಪೂಜೆ, ಪುರಸ್ಕಾರಗಳನ್ನು ನೆಡೆಸಿಕೊಂಡು ಬರುತ್ತಿದ್ದಾರೆ. ಜೋಗೇರ ದಾಸಣ್ಣ ಈ ರಂಗನಾಥನ ಕಾವ್ಯವನ್ನು ಗಂಟೆಗಟ್ಟಲೆ ಹಾಡುತ್ತಾನೆ.

ರಂಗನಾಥನ ಆರಾಧನಾ ಸ್ಥಳಗಳು ಸಿರಾ ಸೀಮೆಯ ನೂರಾರು ಹಳ್ಳಿಗಳಲ್ಲಿ ಕಂಡುಬರುತ್ತವೆ. ಕೆಲವು ಹಳ್ಳಿಗಳಲ್ಲಿ ದೊಡ್ಡ ದೊಡ್ಡ ಜಾತ್ರೆಯೇ ನೆಡೆಯುತ್ತವೆ. ಅಂತಹವುಗಳಲ್ಲಿ ಪ್ರಮುಖವಾಗಿ

ಕ್ಯಾದಿಕುಂಟೆ, ಯಾದಲಡಕು, ಗಿಡಗನಹಳ್ಳಿ, ಗುಡ್ಡದ ಹಟ್ಟಿ ರಂಗನಾಥ, ತಾವರೇಕೆರೆ, ಬುಕ್ಕಾ ಪಟ್ಟಣದ ಕಾಲುವೆ ರಂಗನಾಥ ಮೊದಲಾದ ಕ್ಷೇತ್ರಗಳು ಪ್ರಮುಖವಾಗಿವೆ.

**ಕಳುವೋರಹಳ್ಳಿ :**

ಕಳುವೋರಹಳ್ಳಿ ಸಿರಾ ತಾಲ್ಲೂಕಿನ ಒಂದು ಪುಟ್ಟ ಗ್ರಾಮ. ಕಾಡುಗೊಲ್ಲರ ಪವಿತ್ರ ಧಾರ್ಮಿಕ ಕ್ಷೇತ್ರ. ಸಿರಾ ಚಂಗಾವರ ಮಾರ್ಗದಲ್ಲಿ ೨೪ ಕಿ.ಮಿ ದೂರದಲ್ಲಿದೆ. ಜುಂಜಪ್ಪನ ಹುಟ್ಟೂರು ಕಳುವೋರಹಳ್ಳಿಯಾಗಿದ್ದು ಈತನ ಬಾಲ್ಯವೂ ಇಲ್ಲಿಯೇ ಕಳೆಯುತ್ತದೆ. ಜುಂಜಪ್ಪನ ಕಾವ್ಯದಲ್ಲಿ ಈ ಊರಿನ ಪ್ರಸ್ತಾಪ ಜುಂಜಪ್ಪನ ಬದುಕಿನೊಂದಿಗೆ ಬೆಸೆದುಕೊಂಡಿದೆ. ಊರಿನಿಂದ ಎರಡೂವರೆ ಕಿಲೋಮೀಟರ್ ದೂರದಲ್ಲಿ ಕುರುಚಲು ಗಿಡಗಳ ಬಯಲಿನಲ್ಲಿ ಎತ್ತರವಾದ ಬೋರೆಯ ಮೇಲೆ ಜುಂಜಪ್ಪನ ದೇವಾಲಯವಿದೆ. ಕಾಡುಗೊಲ್ಲರ ಶ್ರೇಷ್ಠ ಸಾಂಸ್ಕೃತಿಕ ನಾಯಕ ಸಮಾದಿಯಾಗಿರುವ ಈ ಸ್ಥಳವನ್ನು ಜುಂಜಪ್ಪನ ಗುಡ್ಡೆ ಎಂದು ಕರೆಯುತ್ತಾರೆ. ಅದು ಸುತ್ತಲೂ ಪೌಳಿಯಿಂದ ಕೂಡಿದ ಈ ದೇವಾಲಯ ಮುಗಿಲಿಗೆ ತೆರೆದಂತೆಯೇ ಇದೆ. ಇಲ್ಲಿ ನಿಂತು ನೋಡಿದರೆ ಅನತಿ ದೂರದಲ್ಲಿಯೇ ಕಂಬೇರ ಹಟ್ಟಿ ಇದ್ದ ಸ್ಥಳ ಗೋಚರಿಸುತ್ತದೆ. ಆ ಹಟ್ಟಿ ಇದ್ದ ಸ್ಥಳ ಈಗ ಸಂಪೂರ್ಣ ಬಯಲು. ಕಳುವೋರಹಳ್ಳಿ ಒಕ್ಕಲಿಗರು ಆಲೇಗೌಡನ ವಂಶಸ್ತರು ಇಂದಿಗೂ ಜುಂಜಪ್ಪನ ಪೂಜೆ ನಡೆಸಿಕೊಂಡು ಹೋಗುತ್ತಿರುವುದಾಗಿ ಹೇಳುತ್ತಾರೆ. ಇಲ್ಲಿಗೆ ಒಂದೆರಡು ಮೈಲಿಗಳ ದೂರದಲ್ಲಿ ಬೇವಿನಹಳ್ಳಿ ಇದೆ. ಇದು ಕರಡೇ ಗೊಲ್ಲರ ಮುಖ್ಯ ನೆಲೆ. ಇಲ್ಲಿನ ಗೊಲ್ಲರು ಜುಂಜಪ್ಪನ ಗುಡಿಗೆ ನಡೆದುಕೊಳ್ಳುತ್ತಾರೆ. ಈ ಗ್ರಾಮದ ದೇವತೆ ಬೇವಿನಾಳಮ್ಮ ಜುಂಜಪ್ಪನ ಕಷ್ಟಗಳಿಗೆ ಸ್ಪಂದಿಸಿ ಜುಂಜಪ್ಪನನ್ನು ಅನೇಕ ಸಲ ಕಷ್ಟಗಳಿಂದ ಪಾರುಮಾಡಿದವಳೆಂದು ಜುಂಜಪ್ಪನ ಕಾವ್ಯದಲ್ಲಿ ವ್ಯಕ್ತವಾಗುತ್ತದೆ. ಜುಂಜಪ್ಪನ ಗುಡ್ಡೆಯ ಪಕ್ಕದಲ್ಲೇ ಇರುವ ಕೊಳದಲ್ಲಿ ಸ್ನಾನ ಮಾಡಿದರೆ ಬಂಜೆತನ ನಿವಾರಣೆಯಾಗುತ್ತದೆ ದನ ಕರುಗಳಿಗೆ ಖಾಯಿಲೆ ಆಗಿದ್ದರೆ ವಾಸಿಯಾಗುತ್ತದೆ ಎಂಬ ಪ್ರತೀತಿ ಇದೆ. ಇಲ್ಲಿ ಪ್ರತೀ ಸೋಮವಾರ ವಿಶೇಷ ಪೂಜೆ ನಡೆಯುತ್ತದೆ. ವರ್ಷಕ್ಕೊಮ್ಮೆ ದೀಪಾವಳಿಯ ಮರುದಿನ ಜನಸ್ತೋಮದೊಂದಿಗೆ ಜಾತ್ರೆ ನಡೆಯುತ್ತದೆ. ಅತ್ಯಂತ ಭಯ ಭಕ್ತಿಯಿಂದ ಜಾತಿ ಮತ ಬೇದ ವಿಲ್ಲದೆ ಈ ಭಾಗದ ಎಲ್ಲಾ ಜನರು ಈ ಧಾರ್ಮಿಕ ಕ್ರಿಯೆಯಲ್ಲಿ ಭಾಗವಹಿಸುತ್ತಾರೆ. ಕುಂಚಿಟಿಗ ಹಾಗೂ ಕಾಡುಗೊಲ್ಲ ಎರಡೂ ಜನಾಂಗಗಳ ಮನೆದೇವರೆನಿಸಿದ ಈ ಜುಂಜಪ್ಪನ ಪೂಜೆಯ ವಿಚಾರವಾಗಿ ಎರಡೂ ಜನಾಂಗಗಳ ಮಧ್ಯೆ ಕಲಹವಾಗಿ ಕೋರ್ಟಿನ ಮೆಟ್ಟಿಲು ಹತ್ತಿ ಈಗ ನ್ಯಾಯಲಯದ ತೀರ್ಮಾನದಂತೆ ಕುಂಚಿಟಿಗರ ಅಳುವನವಿರ ಗೋತ್ರದವರು ಮೊದಲ ಪೂಜೆ ಸಲ್ಲಿಸಿದ ಬಳಿಕ ಉಳಿದವರು ಪೂಜಾ ಕಾರ್ಯಗಳನ್ನು ನೆರವೇರಿಸಿಕೊಂಡು ಹೋಗಬೇಕೆಂಬ ತೀರ್ಮಾನವಿತ್ತಿದೆ.

**ಪುರುಷಮ್ಮನ ಕೆರೆ :**

ಸಿರಾ ಹುಯ್ಯಲದೊರೆ ಮಾರ್ಗದಲ್ಲಿ ಹುಯ್ಯಲದೊರೆಯಿಂದ ಪೂರ್ವಕ್ಕೆ ಐದು ಕಿ.ಮಿ ದೂರದಲ್ಲಿ ರಂಗನಾಥಪುರ ಗ್ರಾಮವಿದೆ. ಈ ಗ್ರಾಮದ ಉತ್ತರಕ್ಕೆ ಎತ್ತರವಾದ ಮರಡಿ ಗುಡ್ಡವಿದೆ. ಈ ಗುಡ್ಡದ ಕೆಳಭಾಗದಲ್ಲಿ ಪರಸಮ್ಮನ ಕೆರೆ ಇದೆ. ಕಾಡುಗೊಲ್ಲರಿಗೆ ಈ ಕೆರೆಯ ನೀರು ಅತ್ಯಂತ ಪವಿತ್ರ. ಜುಂಜಪ್ಪನ ಗೋವುಗಳು ಎಲ್ಲಿಯೇ ಹೋಗಿರಲಿ ಕುಡಿಯಲು ನೀರಿಗಾಗಿ ಬರುತ್ತಿದ್ದುದ್ದು ಇಲ್ಲಿಗೇ. ಜುಂಜಪ್ಪನ ಗೋವುಗಳ ಬೆಳವಣಿಗೆಯನ್ನು ಕಂಡು ಸಹಿಸದ ಮಾವಂದಿರು ಜುಂಜಪ್ಪನ ದನಗಳನ್ನು ಕೊಲ್ಲಲು ಈ ಕೆರೆಯ ನೀರಿಗೆ ಮಾಟ ಶೂನ್ಯ ಮಾಡಿಸಿ ಈ ನೀರನ್ನು ಕುಡಿದ ಜುಂಜಪ್ಪನ ದನಗಳು ರಕ್ತ ಕಾರಿಕೊಂಡು ಸಾಯುವಂತೆ ಮಾಡಿರುತ್ತಾರೆ. ಇದನ್ನು ತಿಳಿದ ಜುಂಜಪ್ಪನ ಪ್ರೇಮದ ಗೆಳೆಯ ಮರಡಿ ಗುಡ್ಡದ ರಂಗಪ್ಪ ಈ ವಿಷಯವನ್ನು ಜುಂಜಪ್ಪನಿಗೆ ಕನಸಿನ ರೂಪದಲ್ಲಿ ತಿಳಿಸುತ್ತಾನೆ. ಆಗ ಜುಂಜಪ್ಪ ಆ ಕೆರೆಯ ನೀರಿನ ವಿಷವನ್ನೆಲ್ಲಾ ಕುಡಿದು ಅಮೃತ ಮಾಡಿ ಮತ್ತೆ ಆ ಕೆರೆಯ ನೀರನ್ನು ಪರಿಶುದ್ಧಗೊಳಿಸುತ್ತಾನೆ."

ಈ ಕೆರೆಯ ಬಗ್ಗೆ ಮತ್ತೊಂದು ಐತಿಹ್ಯವಿದೆ. ಜುಂಜಪ್ಪನ ಪರಾಕ್ರಮ, ಸಾಹಸವನ್ನು ಕೇಳಿದ ಮುಸಲ್ಮಾನ ಸೈನ್ಯ ಸಿರಾ ಭಾಗಕ್ಕೆ ಒಂದು ಸೀರ್‍ಯಾಕ್ಕೆ ಮುತ್ತಿಗೆ ಹಾಕುತ್ತದೆ. ಆಗ ಜುಂಜಪ್ಪ ಮರಡಿ ಗುಡ್ಡದ ಹತ್ತಿರ ಚಿಕ್ಕಸಂದ್ರದ ಕಾವಲಿನಲ್ಲಿ ದನ ಮೇಯಿಸುತ್ತಿದ್ದ. ಅಲ್ಲಿಗೆ ಚಿಕ್ಕಚಿತ್ತಯ್ಯ ಎಂಬ ಗೆಳೆಯ ಮುಸ್ಲಿಂಮರ ದಂಡಿನ ವಿಷಯ ಜುಂಜಪ್ಪನಿಗೆ ತಿಳಿಸುತ್ತಾನೆ. ಮುಸ್ಲಿಮರು ನಿನ್ನ ಶೀಲ ಸಂಪ್ರದಾಯಗಳನ್ನು ಕೆಡಿಸುತ್ತಾರೆ ಆದ್ದರಿಂದ ನೀನು ತಪ್ಪಿಸಿಕೊಳ್ಳಬೇಕೆಂದು ತಿಳಿಸುತ್ತಾನೆ. ಆದರೆ ಪರಾಕ್ರಮಿಯಾದ ಜುಂಜಪ್ಪ ಅವನ ಮಾತನ್ನು ತಿರಸ್ಕರಿಸುತ್ತಾನೆ. ಅಂತಹ ದಂಡಿಗಾಗಲಿ, ಕಳ್ಳ ಸಾಬಿಗಾಗಲಿ ಹೆದುರುವವನಲ್ಲ ಎನ್ನುತ್ತಾನೆ. ಕೊನೆಗೆ ಚಿತ್ತಯ್ಯ ಹಾಗೂ ಇತರೆ ಗೆಳೆಯರೆಲ್ಲಾ ಸೇರಿ ಜುಂಜಪ್ಪನನ್ನು ಬಲವಂತವಾಗಿ ಹಿಡಿದುಕೊಂಡು ಈ ಪರುಸವ್ವನ ಕೆರೆಯಲ್ಲಿ ಮುಳುಗಿಸಿಟ್ಟರೆಂದು ಕಾಡುಗೊಲ್ಲರಲ್ಲಿ ನಂಬಿಕೆ. ಹಾಗಾಗಿಯೇ ಈ ಕೆರೆಯ ನೀರು ಅವರಿಗೆ ತೀರ್ಥವಾಗಿ ತಮ್ಮ ಧಾರ್ಮಿಕ ಕಾರ್ಯಕ್ಕೂ ಈ ನೀರು ಬೇಕಾಗುತ್ತದೆ. ಜೊತೆಗೆ ಪ್ರತಿಯೊಂದು ಕಾರ್ಯದ ಪುಣ್ಯಸ್ನಾನ ಇಲ್ಲಿಯೇ ನಡೆಯುವ ಪರಿಪಾಠವಿದೆ. ಕಾಡುಗೊಲ್ಲರಿಗೆ ಸಂಬಂಧಿಸಿದ ಎಲ್ಲಾ ದೇವರುಗಳನ್ನು ಹೊಳೆಗೆ ತಂದು ಪುಣ್ಯಸ್ನಾನ ಮಾಡಿಸುವ ಸಂಪ್ರದಾಯವಿದೆ.

ಮತ್ತೊಂದು ನಂಬಿಕೆ. ಪ್ರಕಾರ ಒಮ್ಮೆ ಜುಂಜಪ್ಪ ಒಡವೆಗಳಿರುವ ಪೆಟ್ಟಿಗೆಯೊಂದನ್ನು ರಂಗನಾಥಪುರದ ಬಿದಿರು ಮೆಳೆ ತಗ್ಗಿನಲ್ಲಿ ಹೂತಿಟ್ಟು, ಆ ಜಾಗದ ಗುರುತಿಗಾಗಿ ಒಂದು ಒಣಗಿದ ಬಿದಿರು ಕೋಲನ್ನು ನೆಟ್ಟನು. ಅದು ಕ್ರಮೇಣ ಚಿಗುರು ಹಾಕಿ ಮೆಳೆಯಾಗಿ ಬೆಳೆಯಿತು. ಎಂತಹ ಬರಗಾಲದಲ್ಲೂ ಒಣಗುತ್ತಿರಲಿಲ್ಲ. ಆದ್ದರಿಂದ ಇದಕ್ಕೆ ಇಂದಿಗೂ ಬಿದಿರು ಮೆಳೆ ತಗ್ಗು

ಎಸ್ಸುತ್ತಾರೆ. ಒಮ್ಮೆ ಇದ್ದಕ್ಕಿದ್ದಂತೆ ಧಾರಾಕಾರವಾಗಿ ಮಳೆ ಸುರಿದು ಆ ಪೆಟ್ಟಿಗೆ ಹಳ್ಳದಲ್ಲಿ ಕೊಚ್ಚಿ ಹೋಗಿ ಅದರಲ್ಲಿನ ಒಡವೆಗಳು ಹಳ್ಳದ ಮೂಲಕ ಪರುಸಪ್ಪನ ಕೆರೆ ಸೇರಿದವು. ಜನರು ಆ ಭಾಗದಲ್ಲಿ ಓಡಾಡುವಾಗ ಕೆಲವು ಒಡವೆಗಳು ಕೆಲವರಿಗೆ ಸಿಗುತ್ತಿದ್ದವು. ಪರಸು ಎಂದರೆ ಚಿನ್ನ. ಚಿನ್ನದ ಒಡವೆಗಳು ಸಿಗುವ ಕೆರೆಗೆ ಕ್ರಮೇಣವಾಗಿ ಪರಸಪ್ಪನ ಕೆರೆ ಎಂದು ಹೆಸರಾಯಿತು.[೬]

ಒಂದು ಜಾನಪದ ನಂಬಿಕೆಯ ಪ್ರಕಾರ ಪರಸಪ್ಪ ಎಂದರೆ ಚಿನ್ನದ ಅಪ್ಪ ಈ ಭಾಗದ ಯಾರೇ ಬಡವರಾಗಲಿ ತಮ್ಮ ವಿವಾಹ ಮೊದಲಾದ ಶುಭಕಾರ್ಯಗಳಿಗೆ ಒಡವೆ ವಸ್ತುಗಳಿಗಾಗಿ ಈ ಕೆರೆಯ ಏರಿಯ ಮೇಲೆ ನಿಂತು ಪರಸಪ್ಪನನ್ನು ಒಡವೆಕೊಡಪ್ಪ ತಾಯಿ ಎಂದು ಭಕ್ತಿಯಿಂದ ಪ್ರಾರ್ಥಿಸಿಕೊಂಡರೆ ಒಡವೆಗಳನ್ನು ಕೊಡುತ್ತಿದ್ದಳು. ತಮ್ಮ ಶುಭಕಾರ್ಯಗಳು ಮುಗಿದ ನಂತರ ಮತ್ತೆ ಅವುಗಳನ್ನು ವಾಪಸ್ ಕೊಡಬೇಕಿತ್ತು. ಬಹಳ ದಿನಗಳವರೆಗೆ ಈ ಸಂಪ್ರದಾಯ ನೆಡೆದುಕೊಂಡು ಬರುತ್ತಿತ್ತು. ಕೊನೆಗೆ ಜನರಲ್ಲಿ ಭಕ್ತಿ ಕಡಿಮೆಯಾಗುತ್ತಾ ಬಂತು. ಅಂಟು ಮುಂಟಿನ ಕಾರಣ ಹಾಗೂ ಒಮ್ಮೆ ಮಣೆಗಾರನೊಬ್ಬ ಪರಸಪ್ಪನನ್ನು ಕೆಟ್ಟದಾಗಿ ನಿಂದಿಸಿದ. ಅಂದಿನಿಂದ ಪರಸಪ್ಪ ನೀರಿನಿಂದ ಈಚೆಗೆ ಬರಲಿಲ್ಲವೆಂದು ನಂಬಲಾಗಿದೆ.[೭]

**ಬಿಜ್ಜಂಬೆಳ್ಳ :**

ಜುಂಜಪ್ಪನ ಪ್ರಮುಖ ಕಾರ್ಯಕ್ಷೇತ್ರಗಳಲ್ಲೊಂದು ಬಿಜ್ಜಂಬೆಳ್ಳ. ಇದು ಸಿರಾ ಮೈಸೂರು ರಸ್ತೆಯಲ್ಲಿ ಸಿರಾದಿಂದ ೨೦ ಕಿ.ಮಿ ದೂರದಲ್ಲಿ ಗೋಪಾಲದೇವರ ಹಳ್ಳಿಯಿಂದ ಬಲಕ್ಕೆ ತಿರುಗಿ ೨ ಕಿ.ಮಿ ದೂರದಲ್ಲಿದೆ. ಜುಂಜಪ್ಪನ ಆರಾಧನೆ ಇಲ್ಲಿನ ಪ್ರಮುಖ ವಿಶೇಷ. ಪ್ರತೀವರ್ಷ ಸಾವಿರಾರು ಜನ ಸೇರಿ ದೀಪ ಏರಿಸುತ್ತಾರೆ.

ಒಮ್ಮೆ ಸಿರಾ ಸೀಮೆಯಲ್ಲಿ ಬರಗಾಲ ಬಂದು ದನ ಕರುಗಳು ಹುಲ್ಲು ನೀರಿಲ್ಲದೆ ಕಂಗಾಲಾದಾಗ ಜುಂಜಪ್ಪ ತನ್ನ ತಮ್ಮಂದಿರಾದ ಮಾರಣ್ಣ, ಮೈಲಣ್ಣರೊಂದಿಗೆ ದನಗಳನ್ನು ಹೊಡೆದುಕೊಂಡು ಹುಲ್ಲು ನೀರಿಗಾಗಿ ಚೇಳೂರು ಬಯಲು ಸೀಮೆಗೆ ಬರುತ್ತಾನೆ ಚೇಳೂರು ಕಾವಲು ರಂಗಣ್ಣನೆಂಬುವನ ವಶದಲ್ಲಿರುತ್ತದೆ. ಆ ಕಾವಲಿನಲ್ಲಿ ಸಮೃದ್ಧವಾದ ಹುಲ್ಲನ್ನು ಮೇದು ಹೆಚ್ಚು ಹೆಚ್ಚು ಹಾಲು ಕೊಡುತ್ತಾ ಜುಂಜಪ್ಪನ ದನಗಳು ಸಂಮೃದ್ದವಾಗಿ ಬೆಳೆದವು. ಇದನ್ನು ಕಂಡ ಜುಂಜಪ್ಪನ ಸೋದರ ಮಾವಂದಿರು ಸಹಿಸದಾದರು.

ಚೇಳೂರು ರಂಗಪ್ಪನ ಬಳಿಬಂದು ಚಿತಾವಣೆ ಮಾಡಿ ಜುಂಜಪ್ಪ ಇಲ್ಲದ ಸಮಯ ಸಾದಿಸಿ ಬಡಮೈಲನೆಂಬ ಜುಂಜಪ್ಪನ ಅಚ್ಚು ಮೆಚ್ಚಿನ ಬಸವನನ್ನು ಅಪಹರಿಸಿಕೊಂಡು ಹೋಗಿ ಚೇಳೂರಿನ ಕೋಟೆ ಒಳಗೆ ಕಲ್ಲುಕಂಬಕ್ಕೆ ಕಟ್ಟಿಹಾಕಿ ಹೊಡೆಯುತ್ತಾರೆ. ಈ ವಿಷಯ ಜುಂಜಪ್ಪನಿಗೆ ತಿಳಿದು ಅವನು ತನ್ನ ಪಿಳ್ಳಂಗೋವಿಯನ್ನು ತೆಗೆದುಕೊಂಡು ಬಡಮೈಲನಿಗೆ ಹೀಗೆ ಹೇಳುತ್ತಾನೆ.

ಕಲ್ಲು ಕಂಬ ಮುರಿಯೊ। ಕಬ್ಬಿಣದ ಸರ ಮುರಿಯೊ

ಮುದ್ದು ಚೇಳೂರ ತೆನೆ ಮುರಿಯೊ। ಬಡಮ್ಮೆಲ

ಗೆದ್ದು ಬಾರೋ ಚೇಳೂರ ಬಯಲೀಗೆ॥"

ಈ ಶಬ್ದ ಕೇಳಿದ ತಕ್ಷಣ ಜುಂಜಪ್ಪನ ಬಡಮ್ಮೆಲ ಕಲ್ಲು ಕಂಬ ಮುರಿದು, ಒಂದೇ ನೆಗೆತಕ್ಕೆ ಚೇಳೂರು ಸಮೀಪದ ಸಣ್ಣಮ್ಮನಹಳ್ಳಿ ಬಂಡೆಯ ಮೇಲೆ ಒಂದು ಪಾದ ಊರಿ ಅಲ್ಲಿಂದ ಬಿಜ್ಜಂಬೆಳ್ಳಕ್ಕೆ ನೆಗೆಯಿತು ಎಂದು ಕಾವ್ಯದಲ್ಲಿ ಪ್ರಸ್ತಾಪವಾಗಿದೆ. ಹೀಗಾಗಿ ಪ್ರತೀ ಕಾರ್ತೀಕ ಮಾಸದಲ್ಲಿ ವಿಶೇಷ ಪೂಜೆ, ಜಾತ್ರೆ ನೆಡೆಯುತ್ತದೆ. ಸಹಸ್ರಾರು ಜನ ಸೇರುತ್ತಾರೆ. ರೈತರು ತಾವು ಬೆಳೆದ ಶೇಂಗ, ಅರಳು ಮೊದಲಾದ ಎಣ್ಣೆ ಬೀಜಗಳನ್ನು ದೀಪಕ್ಕೆ ಸುರಿಯುತ್ತಾರೆ. ಈ ರೀತಿ ಹಾಕುವುದರಿಂದ ಹೊಲದಲ್ಲಿ ಬೆಳೆಗೆ ಹತ್ತಿದ ಎಲ್ಲಾ ಕ್ರಿಮಿ ಕೀಟಗಳು ನಾಶವಾಗಿ ಸಮೃದ್ಧಿಯ ಬೆಳೆಯಾಗುತ್ತದೆಂದು ನಂಬಲಾಗಿದೆ. ಯುಗಾದಿ ಹಬ್ಬದ ಮರುದಿನ ಜುಂಜಪ್ಪನ ಪಾದವಿರುವ ಮಾರನಹಳ್ಳಿ ಬಯಲಿನಲ್ಲಿಯೂ ಜಾತ್ರೆ ನೆಡೆಯುತ್ತದೆ. ಹಳೇ ಬಿಜ್ಜಂಬೆಳ್ಳದಲ್ಲಿ ಜುಂಜಪ್ಪನ ಬಸವನ ಸಮಾದಿ ಇದೆ.

**ಹಾಗಲವಾಡಿ :**

ಗುಬ್ಬಿ ತಾಲ್ಲೂಕಿನ ಹಾಗಲವಾಡಿ ಕಳವೋರ ಹಳ್ಳಿಯಂತೆ ಜುಂಜಪ್ಪನ ಪ್ರಮುಖ ಸಾಂಸ್ಕೃತಿಕ ನೆಲೆ. ಗುಬ್ಬಿಯಿಂದ ಸು. ೪೦ ಕಿ.ಮಿ ದೂರದಲ್ಲಿದೆ. ಜುಂಜಪ್ಪ ಸಮಾದಿಯಾಗಿರುವುದು ಇಲ್ಲಿಯೇ ಎಂದು ಜುಂಜಪ್ಪನ ಕಾವ್ಯ ಹಾಡುವ ಉತ್ತರ ಸಂಪ್ರದಾಯದವರಾದ ಚಿಕ್ಕನಾಯಕನಹಳ್ಳಿ, ಗುಬ್ಬಿ ಭಾಗದ ಜನರು ನಂಬುತ್ತಾರೆ. ಹಾಗಲವಾಡಿಯ ಜುಂಜಪ್ಪನ ಕ್ಷೇತ್ರ ಪ್ರಸಿದ್ಧವಾದರೂ ಜುಂಜಪ್ಪ ಅಲ್ಲಿ ಎಂದೂ ಇದ್ದವನಲ್ಲ ಎಂಬುದು ದಕ್ಷಿಣ ಸಂಪ್ರದಾಯದವರ ವಾದವಾಗಿದೆ.

"ಹಾಗಲವಾಡಿ ಅಂಡೇನಹಳ್ಳಿ

ತಾವರಿಗೆರೆ ತಳಮನೆ

ಒಳ್ಳೆ ಕಳವರಹಳ್ಳಿ ಆಲಪ್ಪನಗುಡ್ಡೆ

ಆಲವರ್ತಿ ಬಯಲು ಕಂಬೇರ ಹಟ್ಟಿ ಬಡಗೂಡೆ

ಜುಂಜಪ್ಪನ ಗುಡ್ಡೆ ನಡುವಂತ್ರ

ಪುರ್ಲಹಳ್ಳಿ ಬೂತಪ್ಪನ ಗುಡ್ಡೆ

ಜುಂಜಪ್ಪ ಮುರಿದು ಪ್ರತ್ಯಕ್ಷವಾಗಿ

ಅವರಪ್ಪ ಅವರಪ್ಪ ಆಳಿದ್ದು ಬಾಳಿದ್ದು

ಚಿನ್ನಮ್ಮ ಮೊಸರು ಕಡೆದಿದ್ದು

ಕಂಬೇರಹಟ್ಟಿ ಕಳುವೋರಹಳ್ಳಿ

ಜುಂಜಪ್ಪನ ಸಮಾದಿ ಮೂಲಾಧಾರ

ಎಂಬುದು ದಕ್ಷಿಣ ಸಂಪ್ರದಾಯದವರ ವಾದ. ಹಾಗಲವಾಡಿಯಲ್ಲಿ ಜುಂಜಪ್ಪನ ಗುಬ್ಬಿ ಒಂದು ತೋರುಗದ್ದುಗೆ ಎಂಬುದು ಇವರ ವಾದ. ಮದಗದ ಕಾವಲಿನಲ್ಲಿ ದನಗಳನ್ನು ಬಿಟ್ಟುಕೊಂಡಿದ್ದಾಗ ಜುಂಜಪ್ಪ ತನ್ನ ಚಿನ್ನದ ಸುಣ್ಣಗಾಯನ್ನು ಅಲ್ಲಿ ಮರೆತುಹೋದ. ಅದನ್ನು ತೆಗೆದಿಟ್ಟುಕೊಂಡ ಹಾಗಲವಾಡಿಯ ಗೊಲ್ಲರು ಅದನ್ನೇ ಸ್ಥಾಪಿಸಿ ಜುಂಜಪ್ಪ ಇಲ್ಲಿ ಸಮಾದಿಗೊಂಡ ಎಂದು ಹೇಳಿ ಪೂಜಿಸುವರು ಎಂದು ಹೇಳಲಾಗಿದೆ". ಎಂಬ ಮಾತನ್ನು ಜಿ.ಶಂ. ಪರಮಶಿವಯ್ಯರವರು ತಮ್ಮ ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.[೧೦]

ಹಾಗಲವಾಡಿಯಲ್ಲಿ ಜುಂಜಪ್ಪನ ಜೊತೆಗೆ ಚಿತ್ರಲಿಂಗ, ಎತ್ತಪ್ಪ, ಮಾರಮುತ್ತಪ್ಪ, ಪುರ್ಲಹಳ್ಳಿ ಬೂತಪ್ಪ, ಬೇವಿನಹಳ್ಳಿ ಕರಿಯಮ್ಮರನ್ನು ಪ್ರತಿಷ್ಠಾಪಿಸಿದ್ದಾರೆ. ಜಾತ್ರೆಯ ಸಂದರ್ಭದಲ್ಲಿ ದೀಪ ಏರಿಸುತ್ತಾರೆ. ಇಲ್ಲಿ ಏರಿಸುವ ದೀಪ ತಾಮ್ರದಿಂದ ಮಾಡಿದ ಪಂಚಕಲಶ ದೀಪ. ಒಂದು ವಾರದ ನಂತರ ನಾಲ್ಕು ಕಲಶ ತೆಗೆದು ಮಧ್ಯದಲ್ಲಿರುವ ಒಂದು ಕಲಶದಲ್ಲಿ ಮಾತ್ರ ಉರಿಯುತ್ತದೆ. ದೀಪಾವಳಿ ತಿಂಗಳಲ್ಲಿ ಪ್ರತೀ ಸೋಮವಾರ ಕಲಶ ಕೆಳಗಿಳಿಸಿ ಜುಂಜಪ್ಪನ ಮುಂದೆ ಇಟ್ಟು ಪೂಜೆಮಾಡಿ ಎಲ್ಲಾ ದೇವರುಗಳಿಗೆ ಬೆಳಗಿ ಮತ್ತೆ ಏರಿಸುತ್ತಾರೆ.

**ಓಜಗುಂಟೆ :**

ಸಿರಾ ನಗರದ ಪಕ್ಕ ಸು.೨ ಕಿ.ಮೀ. ದೂರವಿರುವ ಓಜಗುಂಟೆ ಒಂದು ಚಿಕ್ಕ ಹಳ್ಳಿ. ಈ ಗ್ರಾಮದ ಹೊರಭಾಗದಲ್ಲಿ ಗೊಲ್ಲರ ಹಟ್ಟಿ ಇದೆ. ಸಿರಾ ಪಟ್ಟನಾಯಕನಹಳ್ಳಿ ಮಾರ್ಗದಲ್ಲಿ ಲಿಂಗದಹಳ್ಳಿ ಗೇಟ್‌ನಲ್ಲಿ ಇಳಿದು ಒಂದು ಪರ್ಲಾಂಗ್ ದೂರ ಬಲಕ್ಕೆ ನೆಡೆದರೆ ಅಲ್ಲಿ ಒಂದು ಜುಂಜಪ್ಪ ನೆಲೆಯಾದ ಪೌಳಿ ಸಿಗುತ್ತದೆ. ಒಂದು ಬೇವಿನ ಮರದ ಕೆಳಗೆ ಚಿಕ್ಕದಾದ ಕಲ್ಲು ಬಂಡೆಯಿಂದ ಕಟ್ಟಿದ ಗುಡಿ ಇದೆ. ಗುಡಿಯ ಒಳಭಾಗದಲ್ಲಿ ಜುಂಜಪ್ಪ ಎಂದು ಕರೆಯಲಾಗುವ ಮೂರು ಬೆನವಗಳನ್ನು ಇಟ್ಟಿದ್ದಾರೆ. ಇಲ್ಲಿ ವರ್ಷಕ್ಕೊಮ್ಮೆ ಯುಗಾದಿ ಹಬ್ಬ ಆದ ಮಾರನೇ ದಿನ ಮಧ್ಯಾಹ್ನದಿಂದ ಸಂಜೆಯವರೆಗೆ ಸಹಸ್ರಾರು ಜನ ಕಲೆಯುವ ಜಾತ್ರೆ ನಡೆಯುತ್ತದೆ. ಸುತ್ತಲಗ್ರಾಮಸ್ತರು ಹತ್ತಾರು ಹಳ್ಳಿಯ ಜನ ಜಾತಿ ಬೇಧವಿಲ್ಲದೆ ಸೇರುತ್ತಾರೆ. ಕಾಡುಗೊಲ್ಲರ ಪರಮ ದೈವ ಎನಿಸಿದ ಜುಂಜಪ್ಪ ಇಲ್ಲಿ ಎಲ್ಲಾ ಮತ ಬೇದವನ್ನು ಮೀರಿ ಬೆಳೆದಿದ್ದಾನೆ. ಸಸ್ಯಹಾರಿ ದೇವರಾದ ಈ ಜುಂಜಪ್ಪನಿಗೆ ಆ ದಿನ ಮದ್ಯಾಹ್ನದಿಂದ ಪೂಜೆ ಮಾಡಿಸಿಕೊಂಡು ಹೋಗಲು ಶುರುಮಾಡುತ್ತಾರೆ. ಸಂಜೆಯಾದಂತೆ ಜನದಟ್ಟಣೆ ಹೆಚ್ಚಾಗುತ್ತದೆ. ಓಜಗುಂಟೆಯಲ್ಲಿರುವ ಜುಜಪ್ಪನ

ಮೆರವಣಿಗೆ ವಿಗ್ರಹಗಳನ್ನು ಅದಿನ ಇಲ್ಲಿಗೆ ತಂದು ಪ್ರತಿಷ್ಠಾಪಿಸುತ್ತಾರೆ. ಹಣ್ಣು ಕಾಯಿಯ ಪೂಜೆ, ಕುರಿ ಕರೆಯುವುದು. ಮಣೇವು ಸೇವೆ ಮೊದಲಾಗ ಧಾರ್ಮಿಕ ಕಾರ್ಯಗಳು ನಡೆಯುತ್ತವೆ. ಮೆರವಣಿಗೆ ದೇವರನ್ನು ಹೊತ್ತ ಗೊಲ್ಲ ಜನಾಂಗದ ಭಕ್ತರು ಚಾಟಿಯಿಂದ ತಮಗೆ ತಾವೇ ತೀಡಿಕೊಳ್ಳುತ್ತಾ ಒಬ್ಬರು ಮತ್ತೊಬ್ಬರಿಗೆ ತೀಡುತ್ತಾ ಮಣೇವಿನ ಸುತ್ತ ಅರೆಯ ಶಬ್ದಕ್ಕೆ ಹೆಜ್ಜೆ ಹಾಕಿ ಕುಣಿಯುತ್ತಾ ತಮ್ಮ ಮುಗ್ಧ ಭಕ್ತಿಯನ್ನು ಶ್ರದ್ಧೆಯಿಂದ ಮುಕ್ತವಾಗಿ ಪ್ರದರ್ಶಿಸುತ್ತಾರೆ. ಕುರಿ, ಮೇಕೆ ಇರುವವರು ಪೌಳಿಯ ಸುತ್ತಿಸುವುದರಿಂದ ಕುರಿ, ಮೇಕೆಗಳಿಗೆ ಯಾವುದೇ ಖಾಯಿಲೆ ಖಸಾಲೆ ಬರುವುದಿಲ್ಲವೆಂಬ ನಂಬಿಗೆ ಇದೆ. ಹಾವು ಚೇಳಿನ ಒಡೆಯ ಜುಂಜಪ್ಪನಿಗೆ ಪೂಜೆ ಸಲ್ಲಿಸಿದರೆ ಹಾವು ಚೇಳುಗಳು ಮುಟ್ಟುವುದಿಲ್ಲ ಎಂಬ ನಂಬುಗೆ ಇದೆ. ಹೀಗಾಗಿ ಹಾವು ಚೇಳಿನ ತಗಡುಗಳನ್ನು ಅಲ್ಲಿಯೇ ಕೊಂಡು ಮಾರುವ ಸಂಪ್ರದಾಯವಿದೆ.

ಸಿರಾ ತಾಲ್ಲೂಕಿನಾದ್ಯಾಂತ ಇರುವ ನೂರಾರು ಜುಂಜಪ್ಪನ ನೆಲೆಗಳಲ್ಲಿ ಇದೂ ಒಂದು. ಜುಂಜಪ್ಪ ಹುಟ್ಟಿ ಬೆಳೆದು ಸಮಾದಿಯಾದ ಕಳುವೋರಹಳ್ಳಿಯಲ್ಲಿ ದೀಪಾವಳಿಯಲ್ಲಿ ಜಾತ್ರೆ ನಡೆದರೆ ಇಲ್ಲಿ ಯುಗಾದಿಯ ಮಾರನೇ ದಿನ ನೆಡೆಯುತ್ತದೆ. ಓಜಗುಂಟೆಯ ಗೊಲ್ಲರಹಟ್ಟಿಯ ಕೆಲವು ಜನ ಹಿರಿಯರು ಗಣೆವಾದ್ಯ ನುಡಿಸುತ್ತಾ ಜುಂಜಪ್ಪ, ಎತ್ತಪ್ಪ, ಚಿತ್ರದೇವರ ಪದಗಳನ್ನು ಹಾಡುತ್ತಾರೆ. ಸಮಗ್ರವಾಗಿ ಹಾಡದಿದ್ದರೂ ಗೊತ್ತಿರುವ ಮುಖ್ಯ ಮುಖ್ಯವಾದ ಭಾಗಗಳನ್ನು ಹಾಡುತ್ತಾರೆ.

**ಎತ್ತಪ್ಪನ ಕಟ್ಟೆ :**

ಸಿರಾ ಧರ್ಮಪುರ ರಸ್ತೆಯಲ್ಲಿ ಲಕ್ಕವ್ವನ ಹಳ್ಳಿಯಿಂದ ಒಂದು ಮೈಲು ದೂರದಲ್ಲಿ ಕುರುಚಲು ಕಾಡಿನಲ್ಲಿ ಎತ್ತಪ್ಪನ ಕಟ್ಟೆ ಇದೆ. ಕಾಡುಗೊಲ್ಲರ ಮೊದಲ ಸಾಂಸ್ಕೃತಿಕ ವೀರ ಎತ್ತಪ್ಪನ ಕಾರ್ಯಕ್ಷೇತ್ರವಾದ ಇದು ಆ ಜನಾಂಗದ ಧಾರ್ಮಿಕ ಪವಿತ್ರ ಕ್ಷೇತ್ರ. ಎತ್ತಪ್ಪ ತನ್ನ ದನಗಳಿಗೆ ನೀರು ಕುಡಿಸಲು, ಮೈತೊಳೆಯಲು, ಚಿಲುಮೆ ತೋಡಿ ಕಟ್ಟಿ ಹಾಕಿಸಿದನೆಂದು ನಂಬಲಾಗಿದೆ. ಕಟ್ಟೆಯ ಒಳಭಾಗದಲ್ಲಿ ಒಂದು ಕೊಳವಿದೆ. ಬೇಸಿಗೆ ಮಳೆಗಾಲ ಎಲ್ಲಾ ಕಾಲದಲ್ಲೂ ಇಲ್ಲಿ ನೀರಿರುತ್ತದೆ. ಆರು ಅಡಿ ಉದ್ದ ನಾಲ್ಕು ಅಡಿ ಅಗಲದ ಚೌಕಾಕಾರದ ಕಲ್ಲು ಕಟ್ಟಿನ ಈ ಕಟ್ಟೆಯ ಬಳಿ ವರ್ಷಕ್ಕೊಮ್ಮೆ ಭಾರಿ ಜಾತ್ರೆ ನೆಡೆಯುತ್ತದೆ. ಈ ಭಾಗದ ಚಿತ್ತಯ್ಯ, ಎತ್ತಪ್ಪ, ಜುಂಜಪ್ಪ, ಕಾಟಂಲಿಂಗ, ಮೊದಲಾದ ಎಲ್ಲಾ ದೇವರುಗಳನ್ನು ತಂದು ಕಟ್ಟೆಯ ಮೇಲೆ ಗದ್ದಿಗೆ ಮಾಡಿ ಕಾವ್ಯಗಳನ್ನು ಹಾಡುತ್ತಾರೆ. ಗಣೆ ಕೋಲು, ನಂದಿಧ್ವಜ, ಮೊದಲಾದ ಜಾನಪದ ನೃತ್ಯ ಪ್ರದರ್ಶನಗಳಿರುತ್ತವೆ. ಪ್ರತೀವರ್ಷದ ಡಿಸೆಂಬರ್ ತಿಂಗಳಲ್ಲಿ ಆಚರಿಸುವ ಎತ್ತಯ್ಯನ ಹಬ್ಬವನ್ನು ಮ್ಯಾಸಬೇಡ, ಕುಂಚಿಟಿಗ, ಕಾಡುಗೊಲ್ಲ, ಕುರುಬ ಮೊದಲಾದ ಎಲ್ಲಾ ಜಾತಿಯವರು ಆಚರಿಸುತ್ತಾರೆ.

ಸಿರಾ ಸೀಮೆಯ ಬೇವಿನಹಳ್ಳಿ, ದ್ವಾರನಕುಂಟೆ, ಗೌಡಗೆರೆ, ಹುಲಿಕುಂಟೆ, ಮೊದಲಾದ ಹಳ್ಳಿಗಳಲ್ಲಿ ವಿಶೇಷವಾಗಿ ಆಚರಿಸುತ್ತಾರೆ.

**ಚದುರಂಗದ ಕಾವಲು :**

ಎತ್ತಪ್ಪ ಪವಾಡ ಮೆರೆದ ಪ್ರಮುಖ ಸಾಂಸ್ಕೃತಿಕ ಕ್ಷೇತ್ರ ಚದುರಂಗದ ಕಾವಲು. ಇದು ಸಿರಾದಿಂದ ೨೪ ಕಿ.ಮಿ ದೂರದಲ್ಲಿ ಚಂಗಾವರ ಗ್ರಾಮದ ಹೊರಭಾಗದಲ್ಲಿ ಎರಡು ಫರ್ಲಾಂಗ್ ದೂರದಲ್ಲಿದೆ. ಚಂಗಾವರ ಹದಿನೈದು ಹದಿನಾರನೇ ಶತಮಾನದಲ್ಲಿ ಪಾಳೇಗಾರರ ಪ್ರಮುಖ ನೆಲೆಯಾಗಿದ್ದು ತನ್ನದೇ ಆದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಕ್ರಿ.ಶ.ಸು.೧೮೦೦ ರಲ್ಲಿ ತುಂಬಾ ವೈಭವವಾಗಿ ಮೆರೆದ ರಾಜ್ಯ. ಈ ಗ್ರಾಮಕ್ಕೆ ಮೂಲ ಪುರುಷ ಹಾಗೂ ನಾಯಕನಾಗಿದ್ದವನು ಸಂಗಪ್ಪಗೌಡ. ಈ ನಗರ ರಾಜ್ಯವು ಸಿರಾ ಪಾಳೇಗಾರ ರಂಗಪ್ಪ ನಾಯಕನ ಅದೀನಕ್ಕೆ ಒಳಪಟ್ಟದ್ದಿತೆಂದು ಮತ್ತು ಸಿರಾ ಹಾಗೂ ಚಿತ್ರದುರ್ಗಕ್ಕೆ ಸಾಮಂತ ರಾಜ್ಯವಾಗಿತ್ತೆಂದು ಸ್ಥಳೀಯ ಇತಿಹಾಸವಿದೆ.[೧೧] ಈಗ ಹಳ್ಳಿಕಾರ ವಕ್ಕಲಿಗರ ನಾಯಕತ್ವ ಹೊಂದಿದೆ. ಈ ನಾಯಕತ್ವವು ವೀರಶೈವರಿಂದ ಬಂದಿದೆ ಎಂದು ಹೇಳುವ ದಾಖಲೆಗಳು ಇವೆ.

ಕಾಡುಗೊಲ್ಲರ ಕಟ್ಟೆ ಮನೆಯಾದ ಬೇವಿನಹಳ್ಳಿ ಪಕ್ಕದಲ್ಲೇ ಇರುವ 'ಚಂಗಾವರ'ಹೆಸರಿನ ಮೂಲವೂ ಎತ್ತಪ್ಪನ ಹಿನ್ನೆಲೆಯನ್ನು ಪಡೆದಿದೆ. ಎತ್ತಪ್ಪನ ಕಥೆಯಲ್ಲಿ ಇದು ಪ್ರಕಟವಾಗುತ್ತದೆ.[೧೨]

ಎತ್ತಪ್ಪನಿಗೆ ಚಿಕ್ಕರೆಂಬೆ ಎಂಬ ಹಸು ಇದ್ದಿತು. ಅದು ಗಬ್ಬವಾಗಿತ್ತು. ಎತ್ತಪ್ಪನ ದನಗಳು ಕೋಡಿಹಳ್ಳಿ ಎತ್ತಪ್ಪನ ಕಟ್ಟೆ ಭಾಗಗಳಲ್ಲಿ ಮೇಯುತ್ತಿರುವಾಗ ಅಜ್ಜೇರ ಬಾಲ ಹಾಗೂ ಹುಲಿಕುಂಟೆ ರಂಗಣ್ಣ ಎಂಬ ಪಾಳೇಗಾರರು ಎತ್ತಯ್ಯನ ಬಳಿ ಬಂದು ನಿನ್ನ ಹಸುವನ್ನು ಅರವತ್ತು ಅಡಿ ಎತ್ತರದ ಬೇವಿನ ಮರದ ಮೇಲಿಂದ ಹಾರಿಸಿದರೆ ನಿನ್ನ ಪರಾಕ್ರಮ ಮೆಚ್ಚುತ್ತೇವೆ ಎಂಬುದಾಗಿ ಸವಾಲು ಹಾಕುತ್ತಾರೆ. ಆಗ ಎತ್ತಪ್ಪನ ಚಿಕ್ಕರೆಂಬೆ ಎಂಬ ಹಸು ಚಂಗಾವರದ ಚದುರಂಗದ ಕಾವಲಿನಲ್ಲಿರುವ ಅರವತ್ತು ಅಡಿ ಎತ್ತರದ ಬೇವಿನ ಮರವನ್ನು ಹಾರುತ್ತದೆ.

ಹೀಗೆ ಹಾರಿದ ಹಸು ತನ್ನ ಹೊಟ್ಟೆಯೊಳಗಿದ್ದ ಕರುವನ್ನು ಹೊರಹಾಕುತ್ತದೆ. ತಾನೂ ಸಾಯುತ್ತದೆ. ಆಗ ಎತ್ತಪ್ಪನ ಗೆಲುವನ್ನು ಎದುರಾಳಿಗಳು ಒಪ್ಪುವುದಿಲ್ಲ. ಕೊನೆಗೆ ಚಿಕ್ಕರೆಂಬೆ ಹಸು ಮತ್ತೆ ಎದ್ದು ಕರುವಿಗೆ ಹಾಲು ಕುಡಿಸಿ ಎತ್ತಯ್ಯನ ಸತ್ಯವನ್ನು ಸಾಬೀತು ಪಡಿಸುತ್ತದೆ. ಈ ಕಾರಣಕ್ಕಾಗಿಯೇ ಅಲ್ಲಿ ಒಂದು ಬೇವಿನ ಮರವಿದ್ದು ಇಂದಿಗೂ ಅದನ್ನು ಎತ್ತಯ್ಯನ ಚದುರಂಗದ ಮರ ಎಂದು ಕರೆಯಲಾಗುತ್ತಿದೆ. ಎತ್ತಯ್ಯ ಚದುರಂಗವಾಡಿದ್ದರಿಂದ ಚಂಗಾವರವಾಯಿತು ಎಂಬ ನಂಬಿಕೆಯಿದೆ. ಇಲ್ಲಿ ವರ್ಷಕ್ಕೊಮ್ಮೆ ಜಾತ್ರೆ ನೆಡೆಯುತ್ತದೆ. ಹಿಂದೆ ಇಲ್ಲಿಯೇ ಕುದುರೆ ಕುಂಟೆ ಕಾವಲು ಇತ್ತು ಎಂದು ಹೇಳುತ್ತಾರೆ. ಇಂದಿಗೂ ಎತ್ತುಗಳಿಗೆ ಅಥವಾ ಹಸುಗಳಿಗೆ ಕಾಲು

ಉಳುಕಿದ್ದರೆ ಅಥವಾ ಕಾಲು ಮುರಿದಿದ್ದರೆ ಈ ಜಾಗದಲ್ಲಿ ಅವನ್ನು ಓಡಾಡಿಸಿದರೆ ಅವು ಗುಣ ಹೊಂದುತ್ತವೆ ಎಂದು ಕಾಡುಗೊಲ್ಲರು ನಂಬುತ್ತಾರೆ.

**ತಳಕಿನ ಗುಡ್ಡ :**

ತಳಕಿನಗುಡ್ಡ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನಿಂದ ೧೮ ಕಿ.ಮೀ ದೂರದಲ್ಲಿದೆ. ಇಲ್ಲಿ ಎತ್ತಪ್ಪನ ಸಮಾದಿ ಇದೆ. ಇಲ್ಲಿಗೆ ಕುರಿಗಾಹಿಗಳು, ಪಶುಪಾಲಕರು ಪ್ರತೀ ವರ್ಷ ಹಾಲು ಮೀಸಲು ತಂದು ಎತ್ತಪ್ಪನ ಸಮಾದಿಗೆ ಅಭಿಷೇಕ ಮಾಡುವ ಸಂಪ್ರದಾಯವಿದೆ. ಇದು ಕಾಡುಗೊಲ್ಲರಿಗೆ ಕಾಶಿಗೆ ಸಮಾನ. ಈ ಗುಡ್ಡ ದೂರಕ್ಕೆ ಹೆಡೆ ಬಿಚ್ಚಿದ ಸರ್ಪದಂತೆ ಕಾಣುತ್ತದೆ. ಈ ಎತ್ತಪ್ಪನ ನೆಲೆಯಿಂದ ಸು. ೧೦ ಕಿ.ಮಿ ದೂರದಲ್ಲಿ ಗೌರಸಂದ್ರದ ಮಾರಿಯ ನೆಲೆಯಿದೆ. ಎತ್ತಪ್ಪನ ಕಥೆಯಲ್ಲಿ ಈ ತಳಕಿನ ಗುಡ್ಡ ಪ್ರಮುಖ ಎತ್ತಪ್ಪನ ಕಾರ್ಯಕ್ಷೇತ್ರವಾಗಿ ಪ್ರಕಟವಾಗುತ್ತದೆ.

**ವೇಣುಕಲ್ಲು ಗುಡ್ಡ :**

ಕಾಡುಗೊಲ್ಲರ ಅತ್ಯಂತ ಹಿರಿಯ ಸಾಂಸ್ಕೃತಿಕ ವೀರನಾದ ಎತ್ತಪ್ಪನ ಕ್ಷೇತ್ರವಾದ ವೇಣುಕಲ್ಲು ಗುಡ್ಡ ಚಿತ್ರದುರ್ಗ ಜಿಲ್ಲೆಯ ಹಿರಿಯೂರುನಿಂದ ೨೫ ಕಿ.ಮಿ. ದೂರದಲ್ಲಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಎತ್ತಯ್ಯನ ಆರಾಧನೆ ಹೆಚ್ಚು. ಈ ಭಾಗದ ಮಾರೇನೋರ ಗೊಲ್ಲರು ಜುಂಜಪ್ಪನಿಗಿಂತ ಎತ್ತಪ್ಪನನ್ನು ಹೆಚ್ಚಾಗಿ ಆರಾಧಿಸುತ್ತಾರೆ. ಇಲ್ಲಿ ಎತ್ತಪ್ಪ ಬಳಸುತ್ತಿದ್ದನೆಂದು ಹೇಳುವ ಮಂಚ, ಮರಬಿಲ್ಲನ್ನು ಪೂಜಿಸುತ್ತಾರೆ.

ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನ ಜಂಗಮರಹಳ್ಳಿಯಲ್ಲಿ ಎತ್ತಪ್ಪನ ಮಧುವೆಯ ಸಂದರ್ಭದಲ್ಲಿ ಬಳಸಿದ ಕಳಸವನ್ನು ಪೂಜಿಸುತ್ತಾರೆ. ಆಂಧ್ರ ಪ್ರದೇಶದ ಗುಂತಕಲ್ ಹಟ್ಟಿಯಲ್ಲಿ ಎತ್ತಪ್ಪ ಬಳಸುತ್ತಿದ್ದ ಪಟ್ಟೆದಟ್ಟಿಯನ್ನು ಪೂಜಿಸುತ್ತಾರೆ.

**ಪುರಲಹಳ್ಳಿ ಬೂತಪ್ಪನ ಗುಡಿ :**

ಸಿರಾ ತಾಲ್ಲೂಕಿನ ಪ್ರಮುಖ ಸಾಂಸ್ಕೃತಿಕ ಕೇಂದ್ರಗಳಲ್ಲೊಂದಾದ ಪುರ್ಲಹಳ್ಳಿ ಬೂತಪ್ಪನ ಗುಡಿ ಸಿರಾ ಹಿರಿಯೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ತಾವರೇಕೆರೆ ಗ್ರಾಮದಿಂದ ಎಡಕ್ಕೆ ೮ ಕಿ.ಮಿ ದೂರದಲ್ಲಿದೆ. ಇದು ವಿಷ್ಣುವಿನ ಅವತಾರವೆಂದೇ ನಂಬಿರುವ ಬೂತಪ್ಪನ ಕಾರ್ಯಕ್ಷೇತ್ರ. ಬೂತಪ್ಪ ಜುಂಜಪ್ಪನ ಪ್ರಭಾವದಿಂದ, ಜುಂಜಪ್ಪನ ಸಹಾಯಕ್ಕೆಂದೇ ಜನ್ಮತಳೆದವನು. ಇವನ ಬಗ್ಗೆ ಜುಂಜಪ್ಪನ ಕಾವ್ಯದಲ್ಲಿ ಉಲ್ಲೇಖವಿದೆ. ಕಳುವೊರಹಳ್ಳಿಯ ಬಳಿಯಲ್ಲಿಯೇ ಇರುವ ಈ ಬೂತಪ್ಪನ ಪೌಳಿಯನ್ನು ಸ್ವತಹ ಜುಂಜಪ್ಪನೇ ಕಟ್ಟಿದನೆಂಬ ಪ್ರತೀತಿ ಇದೆ. ಜುಂಜಪ್ಪ ಬೂತಪ್ಪನನ್ನು ಇಲ್ಲಿ ಪ್ರತಿಷ್ಠಾಪಿಸಿ ನಿನಗೆ ಪ್ರತೀ ದಿನ ರಕ್ತಾಭಿಷೇಕವಾಗಲಿ ಎಂದು

ಆಶೀರ್ವಾದಿಸಿದನೆಂದು ಹೇಳಲಾಗುತ್ತದೆ. ಚೌಕಾಕಾರದ ಪೌಳಿಯ ಮಧ್ಯೆ ಮೂರು ಕಾಡುಗಲ್ಲು ಬೆನವಗಳನ್ನು ನೆಡಲಾಗಿದೆ. ಆ ಬೆವನಗಳ ಮುಂಭಾಗದಲ್ಲಿ ಬಲಿಯ ರಕ್ತವನ್ನು ಚೆಲ್ಲಿ ಕುಂಡಪಿದೆ. ಪ್ರತೀ ಶನಿವಾರ ಮಂಗಳವಾರ ವಿಶೇಷ ಪೂಜೆಯೊಂದಿಗೆ ಭಾರೀ ಜನಸೋಮ ನೆರೆಯುತ್ತದೆ. ಪ್ರತೀದಿನ ರಕ್ತ ಹರಿಯುವುದರಿಂದ ನೋಡುಗರ ಕಣ್ಣಿಗೆ ಭಯ ಹುಟ್ಟಿಸುತ್ತದೆ. ಜುಂಜಪ್ಪನಿಗೆ ಕಂಟಕಳಾಗಿದ್ದ ತಾಳೇದುರ್ಗಿಯನ್ನು ಕೊಂದು ಜುಂಜಪ್ಪನಿಗೆ ರಕ್ಷಣೆ ಒದಗಿಸಿದವನು ಬೂತಪ್ಪ. ಈ ಬೂತಪ್ಪನ ಬೆನವಗಳಿಗೆ ಹೂಗಳಿಂದ ಅಲಂಕರಿಸಿ ಭಕ್ತರು ತಮ್ಮ ಕಷ್ಟಗಳನ್ನು ಅವುಗಳ ಮುಂದೆ ತೋಡಿಕೊಳ್ಳುತ್ತಾರೆ. ಬಲಗಡೆ ಹೂ ಕೊಟ್ಟರೆ ತಾವು ಕೈ ಹಿಡಿದ ಕಾರ್ಯ ಆಗುತ್ತದೆಂದೂ, ಎಡಗಡೆ ಹೂ ಕೊಟ್ಟರೆ ಆ ಕೆಲಸ ಆಗುವುದಿಲ್ಲವೆಂದೂ ನಂಬುತ್ತಾರೆ.

**ದಿಬ್ಬದ ವೀರಬೊಮ್ಮನಹಳ್ಳಿ :**

ಸಿರಾ ಅಮರಾಪುರ ರಸ್ತೆಯಲ್ಲಿ ಸಿರಾದಿಂದ ೨೬ ಕಿ.ಮಿ ದೂರದಲ್ಲಿ ವೀರಬೊಮ್ಮನಹಳ್ಳಿ ಗೇಟ್‌ನ ಎಡಭಾಗದಲ್ಲಿ ದಿಬ್ಬದ ವೀರಬೊಮ್ಮಣ್ಣನ ಪೌಳಿ ಇದೆ. ಏಳೆಂಟು ವೀರಗಲ್ಲುಗಳನ್ನು ಸಾಲಾಗಿ ನಿಲ್ಲಿಸಲಾಗಿದೆ. ಗುಡಿಯ ಹಿಂಭಾಗದಲ್ಲಿ ಹತ್ತಾರು ಎಕರೆ ತುಗ್ಗಲಿ ಮರಗಳ ಕುರುಚಲು ಕಾಡು ಪ್ರಶಾಂತವಾದ ಪರಿಸರ ಇಲ್ಲಿರುವ ವೀರಗಲ್ಲುಗಳು ಐತಿಹಾಸಿಕ ವೀರ ಬೊಮ್ಮಣ್ಣನ ಹೋರಾಟವನ್ನು ಹೇಳುವ ಕುರುಹುಗಳಾಗಿವೆ. ಸ್ಥಳೀಯ ಇತಿಹಾಸ ಈ ವೀರಗಲ್ಲುಗಳ ಬಗ್ಗೆ ಯಾವ ವಿವರವನ್ನೂ ನೀಡುವುದಿಲ್ಲ. ಆದರೆ ಜಾನಪದ ಸಾಹಿತ್ಯ ಈ ವೀರಗಲ್ಲುಗಳು ವೀರಬೊಮ್ಮಣ್ಣನ ಹೋರಾಟದ ಬದುಕನ್ನು ಚಿತ್ರಿಸುತ್ತವೆ. ವೀರಬೊಮ್ಮಣ್ಣನ ಕತೆ, ಪದಗಳು ಸುತ್ತಮುತ್ತಲಿನ ಗ್ರಾಮಗಳಲ್ಲಿ ಅಸ್ತಿತ್ವದಲ್ಲಿದೆ. ಶ್ರೀರಾಮನವಮಿಯ ದಿನ ಜಲದಿ ಉತ್ಸವದೊಂದಿಗೆ ಪ್ರಾರಂಭವಾದ ಜಾತ್ರೆ ಅಂದಿನಿಂದ ಐದು ದಿನಗಳ ಕಾಲ ನೆಡೆಯುತ್ತದೆ. ಕೊನೆಯ ದಿನ ಅಗ್ನಿಕುಂಡ ನೆಡೆಯುತ್ತದೆ. ವೀರಬೊಮ್ಮಣ್ಣನ ವಂಶಸ್ತರೇ ವೀರಬೊಮ್ಮಣ್ಣನ ಪೂಜೆಯನ್ನು ನೆಡೆಸಿಕೊಂಡು ಬರುತ್ತಿರುವರು. ವೀರಬೊಮ್ಮಣ್ಣ ದಿಬ್ಬದ ವೀರಬೊಮ್ಮಣ್ಣನ ಹಳ್ಳಿಯ ಗ್ರಾಮದೇವರಾಗಿದೆ. ಊರಿನ ಒಳಭಾಗದಲ್ಲಿ ಮೆರವಣಿಗೆ ದೇವಾಲಯವಿದ್ದು ಅಲ್ಲಿ ಕತ್ತಿಗಳನ್ನು ಇಟ್ಟು ಪೂಜಿಸಲಾಗುತ್ತಿದೆ. ಪ್ರತೀ ಭಾನುವಾರದಂದು ವಿಶೇಷ ಪೂಜೆ ನೆಡೆಯುತ್ತದೆ. ಪ್ರತೀ ಅಮಾವಾಸೆ, ಹುಣ್ಣಿಮೆ ದಿನಗಳಂದು ಭಜನೆಯ ಕಾರ್ಯಗಳು ನೆಡೆಯುತ್ತವೆ. ಜಾತ್ರೆ ಕಾಲದಲ್ಲಿ ರಥೋತ್ಸವ, ಹುಂಡೆ, ಮಂಡೆ, ವಸಂತೋತ್ಸವ ಕಾರ್ಯಗಳು ನೆಡೆಯುತ್ತವೆ. ವೀರಬೊಮ್ಮಣ್ಣನ ಪೌಳಿಯಲ್ಲಿರುವ ವೀರಗಲ್ಲುಗಳು ವೀರಬೊಮ್ಮಣ್ಣ, ಅವನ ಅಜ್ಜ ಪೆಮ್ಮನಾಯಕ, ಹಾಗೂ ವೀರಬೊಮ್ಮಣ್ಣನ ತಂದೆ ಅಭಯ ನಾಯಕ ಮೊದಲಾದವು ಎಂದು ಗ್ರಾಮದ ಹತ್ತಿರ ಇರುವ ಆಂಧ್ರ ಪ್ರದೇಶದ ಹೇಮಾವತಿ ಪಕ್ಕದ ವಿದ್ವಾಂಸ ಕಂಕೆರೆ ಹನುಮಂತೆಗೌಡರು ಅಭಿಪ್ರಾಯ ಪಡುತ್ತಾರೆ.

**ಚಿತ್ರದೇವರ ಪೌಳಿ :**

ಬೇವಿನಹಳ್ಳಿಯಿಂದ ೨ ಕಿ.ಮೀ ದೂರದ ಬಯಲಿನಲ್ಲಿ ಚಿತ್ರದೇವರ ಪೌಳಿಯಿದೆ. ಒಂದು ಹುಣಸೆ ಮರದ ಸುತ್ತ ಪೌಳಿಯನ್ನು ಕಟ್ಟಿ ಮರದ ಬುಡದಲ್ಲಿ ಕಾಡುಗಲ್ಲಿನ ಚಿಕ್ಕ ಚಿಕ್ಕ ಬೆನವಗಳಿವೆ. ಅವುಗಳ ಮುಂಭಾಗದಲ್ಲಿ ಕಬ್ಬಿಣದ ಒಂದು ಗರುಡುಗಂಬವಿದೆ. ಪಕ್ಕದಲ್ಲಿಯೇ ಮತ್ತೊಂದು ಪೌಳಿಯಿದ್ದು ಇದರಲ್ಲಿಯೂ ಕಾಡುಗಲ್ಲು ಬೆನವಗಳಿವೆ. ಇದನ್ನು ಬೂತಪ್ಪ ಎಂದು ಕರೆಯುವರು. ಪ್ರತಿ ಸೋಮವಾರದಂದು ವಾರದ ಪೂಜೆ ನಡೆಯುತ್ತದೆ. ಸುತ್ತ ಮುತ್ತಲಿನ ಗೊಲ್ಲರಹಟ್ಟಿಯ ಜನರು ವಿಶೇಷವಾಗಿ ಕಾಡುಗೊಲ್ಲರ ಹಬ್ಬ ಹರಿದಿನಗಳಲ್ಲಿ ಎಂದರೆ ದೀಪಾವಳಿ, ಕಾರುಹಬ್ಬ ಮೊದಲಾದ ದಿನಗಳಲ್ಲಿ ಪೂಜಿಸಿ ಹರಕೆಗಳನ್ನು ತೀರಿಸುತ್ತಾರೆ. ಹಾಲು ಮೀಸಲು ಅರ್ಪಿಸುತ್ತಾರೆ.

**ಬೇವಿಸ ಹಳ್ಳಿ :**

ಸಿರಾ ಚೆಂಗಾವರ ರಸ್ತೆಯಲ್ಲಿ ೧೯ ಕಿ.ಮಿ ದೂರದಲ್ಲಿರುವ ಬೇವಿನಹಳ್ಳಿ ಒಂದ ಚರಿತ್ರಾರ್ಹ ಸ್ಥಳವಾಗಿದೆ. ೧೯೦೦ರ ಪೂರ್ವದಲ್ಲಿ ಇತಿಹಾಸ ಪ್ರಸಿದ್ಧವಾಗಿತ್ತು. ಇದಕ್ಕೆ ಸಂಬಂದ ಪಟ್ಟ ಜಯರೇಖೆಗಳೂ, ಕರಾರುಗಳೂ ಪ್ರಚಲಿತ ಜಾನಪದ ಕತೆಗಳೂ ಇವೆ.[೮] ಜನಪದ ವಿದ್ವಾಂಸರಾದ ಡಾ.ಕಾಳೇಗೌಡ ನಾಗವಾರ ಮೊದಲಾದವರು ಈ ಗ್ರಾಮದಲ್ಲಿ ಅನೇಕ ದಿನಗಳ ಕಾಲ ನೆಲೆನಿಂತು ಇಲ್ಲಿನ ಕಾಡುಗೊಲ್ಲರ ಸಾಂಸ್ಕೃತಿಕ ವಿವರಗಳನ್ನು ಸಂಗ್ರಹಿಸಿದ್ದಾರೆ. ಎತ್ತಪ್ಪ, ಜುಂಜಪ್ಪರ ಕಥೆ, ಕಾವ್ಯಗಳಲ್ಲಿ ಪ್ರಸ್ತಾಪವಾಗುವ ಈ ಹಳ್ಳಿ ಈ ಇಬ್ಬರು ಸಾಂಸ್ಕೃತಿಕ ನಾಯಕರ ಕಾರ್ಯಕ್ಷೇತ್ರವೂ ಹೌದು. ಇದು ಕಾಡು ಗೊಲ್ಲರ ಕಟ್ಟೆಮನೆ ಎನಿಸಿದೆ. ಈ ಗ್ರಾಮಕ್ಕೆ ಬೇವಿನ ಹಳ್ಳಿ ಎಂದು ಹೆಸರು ಬರಲು ಕಾರಣ ಆ ಪ್ರದೇಶದಲ್ಲಿ ದಟ್ಟವಾದ ಬೆವಿನ ತೋಪು ಇದ್ದಿತೆಂದೂ, ಹಾಗೂ ಈ ಊರಿಗೆ ಸೇರಿದ ಜುಂಜಪ್ಪ ತನ್ನ ಬದುಕಿನಲ್ಲಿ ಹೆಚ್ಚು ಕಹಿಯನ್ನೇ ಉಂಡದ್ದರಿಂದ ಈ ಹಳ್ಳಿಗೆ ಬೇವಿನಹಳ್ಳಿ ಎಂದೇ ಹೆಸರಾಗಿದೆ ಎಂದು ಸ್ಥಳೀಯರ ನಂಬುಗೆ. ಈ ಹಿಂದೆ ಈ ಗ್ರಾಮ ಪೌರಾಣಿಕ ಮಹತ್ತನ್ನು ಪಡೆದಿತ್ತು. ಜುಂಜಪ್ಪನ ಸೋದರ ಮಾವಂದಿರ ಊರು ಇದೇ ಎಂದು ಕಾಡುಗೊಲ್ಲರು ನಂಬಿದ್ದಾರೆ. ಈ ಗ್ರಾಮದ ಗ್ರಾಮದೇವತೆ ಬೇವಿನಾಳಮ್ಮನ ಉಗಮದ ಬಗ್ಗೆ ಒಂದು ಐತಿಹ್ಯವಿದೆ. ಅದರಂತೆ ಒಮ್ಮೆ ಸಿರಾ ಸೀಮೆಯ ಸಾಂಸ್ಕೃತಿಕ ವೀರ ಎತ್ತಪ್ಪ ಈ ಭಾಗದಲ್ಲಿ ಅಧರ್ಮೀಯರ ಸಂಖ್ಯೆ ಹೆಚ್ಚಾಗಿ ಜನರಿಗೆ ಕಿರುಕುಳ ಹೆಚ್ಚಾದಾಗ ಎತ್ತಪ್ಪ ವಿಷ್ಣುವನ್ನು ಪ್ರಾರ್ಥಿಸಿ ಅವರನ್ನು ನಿಯಂತ್ರಿಸಲು ಕರಿಯಮ್ಮ ಎಂಬ ಉಗ್ರದೇವತೆಯನ್ನು ಭೂಲೋಕಕ್ಕೆ ತರುತ್ತಾನೆ. ಕರಿಯಮ್ಮ ಬೇವಿನಹಳ್ಳಿಯಲ್ಲಿ ನೆಲೆಸುತ್ತಾಳೆ. ಎತ್ತಪ್ಪ ಜುಂಜಪ್ಪರಿಗೆ ಸಹಾಯಕಳಾಗಿ ನಿಂತು ಅಧರ್ಮೀಯರನ್ನು ಸಂಹರಿಸುತ್ತಾಳೆ. ಹೀಗೆ ಬೇವಿನಹಳ್ಳಿ ಎತ್ತಪ್ಪ ಜುಂಜಪ್ಪರ ಪ್ರಮುಖ

ಕಾರ್ಯಕ್ಷೇತ್ರವಾಗಿ ಇವರ ಬಗೆಗೆ ಹಾಗೂ ಕರಿಯಮ್ಮನ ಬಗ್ಗೆ ಜಾನಪದ ಹಾಡುಗಳನ್ನು ಸ್ಥಳೀಯರು ಹಾಡುತ್ತಾರೆ.

ಕರಿಯಮ್ಮ ಸು. ೭೦೦ ಹಳ್ಳಿಗಳ ಭಕ್ತಸಮೂಹವನ್ನು ಪಡೆದಿದ್ದು ಪ್ರತೀವರ್ಷ ಮಾರ್ಚ್ ಏಪ್ರಿಲ್ ತಿಂಗಳಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಇಲ್ಲಿ ಜುಂಜಪ್ಪನ ಮೆರವಣಿಗೆ ದೇವಾಲಯ ಹಾಗೂ ಜುಂಜಪ್ಪನ ಬಸವನ ಸಮಾದಿಯೂ ಇದೆ.

ಅಡಿಟಿಪ್ಪಣಿ

೧. ದಕ್ಷಿಣ ಕರ್ನಾಟಕದ ಅರಸು ಮನೆತನಗಳು; ಸಂ. ಡಾ. ಎಂ.ವಿ.ವಸು

೨. ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ; ಎಂ.ಹೆಚ್.ನಾಗರಾಜ. ಪುಟ ೫೬

೩. ಈ ಮಾಹಿತಿ ನೀಡಿದವರು ಬೆಜ್ಜಿಹಳ್ಳಿಯ ಪೂಜಾರ್ ನಂಜುಂಡಪ್ಪ. ಕುಂಚಿಟಿಗ ಜನಾಂಗ. ವಯಸ್ಸು ೬೦ ವರ್ಷ

೪. ತುಮಕೂರು ಜಿಲ್ಲಾ ದರ್ಶನ; ಪುಟ ೧೭೬

೫. ಜುಂಜಪ್ಪನ ಕಾವ್ಯ; ಸಂ. ಚಲುವರಾಜು ಪುಟ ೨೮೦

೬. ತುಮಕೂರು ಜಿಲ್ಲಾ ಜಾನಪದೀಯ ಅಧ್ಯಯನ; ಸಂ ಡಾ.ಚಿಕ್ಕಣ್ಣ ಯಣ್ಣೆಕಟ್ಟೆ ಪುಟ ೧೦೩

೭. ಈ ಮಾಹಿತಿ ನೀಡಿದವರು ಟ್ರಾಕ್ಟರ್ ರಂಗಣ್ಣ. ಕುಂಚಿಟಿಗ ಜನಾಂಗ. ವಯಸ್ಸು ೬೦ ವರ್ಷ

೮. ತುಮಕೂರು ಜಿಲ್ಲಾ ದರ್ಶಸ; ಪುಟ ೧೭೬-೭೭

೯. ಜುಂಜಪ್ಪನ ಕಾವ್ಯ; ಸಂ. ಚಲುವರಾಜು ಪುಟ ೧೯೪-೯೫

೧೦. ಕರ್ನಾಟಕದ ಜನಪದ ಮಹಾಕಾವ್ಯಗಳು. ಲೇಖನ 'ಜುಂಜಪ್ಪನ ಕಾವ್ಯ'; ಸಂ. ಡಾ.ತೀ.ಶಂಕರನಾರಾಯಣ. ಕರ್ನಾಟಕ ಜಾನಪದತಿ ಯಕ್ಷಗಾನ ಅಕಾಡಮಿ. ಪುಟ ೬೮

೧೧. ತುಮಕೂರು ಜಿಲ್ಲಾ ದರ್ಶನ; ಪುಟ ೧೭೮

೧೨. ಎತ್ತಪ್ಪ; ಡಾ. ಮೀರಸಾಬಿಹಳ್ಳಿ ಶಿವಣ್ಣ, ಪುಟ ೨೬, ತುಮಕೂರು ಜಿಲ್ಲಾ ದರ್ಶನ; ಪುಟ ೨೬-೨೮

೧೩. ಬಂಡಿ ರಂಗನಾಥ ಸ್ವಾಮಿದೇವಾಲಯ ಇತಿಹಾಸ ಮಹಿಮೆ ಟಿ.ತಾರೇಗೌಡ ಪುಟ ೫-೬

ಅಧ್ಯಾಯ ೬

## ಸಾಂಸ್ಕೃತಿಕ ವೀರ-ನಾಯಕರ ಸಂಪ್ರದಾಯ ಮತ್ತು ಆಚರಣೆಗಳು

| ಸಾಂಸ್ಕೃತಿಕ ವೀರ-ನಾಯಕರು | | ಸಂಪ್ರದಾಯ ಮತ್ತು ಆಚರಣೆಗಳು |
|---|---|---|
| ೧. ರಂಗಪ್ಪ ನಾಯಕ | : | ಪಾಳೇಗಾರ ಕುಣಿತ |
| ೨. ಬೊಪ್ಪರಾಯ | : | ವೀಳ್ಯ ತೆಗೆಯುವುದು, ಹೆಸರಿಡುವ ಸಂಪ್ರದಾಯ |
| ೩. ಬರಗೂರು ವೀರಮ್ಮ | : | ಹರಕೆ, ಮಂಡೆಸೇವೆ, ಹೆಸರಿಡುವ ಸಂಪ್ರದಾಯ, ಸತಿಪದ್ಧತಿ, ವೀಳ್ಯ ತೆಗೆಯುವುದು |
| ೪. ರಂಗನಾಥ | : | ಮಂಡೆಸೇವೆ, ಆರತಿ, ಹರಿಸೇವೆ, ಹೆಸರಿಡಿವುದು, ಬಾಯಿಗೆ ಬೀಗ, ಹರಿ ಸೇವೆ, ಮುಳ್ಳಿನ ಪಲ್ಲಕ್ಕಿ ಸೇವೆ |
| ೫. ಜುಂಜಪ್ಪ | : | ಹಾಲು ಮೀಸಲು, ಗಣೆ ಸಂಪ್ರದಾಯ ಹರಕೆ, ಮಂಡೆಸೇವೆ, ಪೂಜೆ, ಜಿನಿಗೆ, ಕಾಣಿಕೆ, ದೀಪ ಏರಿಸುವುದು, ಬಸವನನ್ನು ಬಿಡುವುದು |
| ೬. ಎತ್ತಪ್ಪ | : | ಎತ್ತಪ್ಪನ ಕಟ್ಟು, ಗೂಡಿನ ಹಬ್ಬ, ಕಟ್ಟೆಮನೆ, ಹೆಸರಿಡುವ ಸಂಪ್ರದಾಯ, ವ್ರತಗಳು |
| ೭. ಬೂತಪ್ಪ, ಕರಿಯಮ್ಮ | : | ಎಡೆ ಹಾಕುವುದು, ಮಣೆಸೇವೆ, ಹರಿಸೇವೆ, ಕಣಿ ಮತ್ತು ಭವಿಷ್ಯ, ಬಲಿ |

**ಜಾತ್ರಾ ಮಹೋತ್ಸವಗಳು**

೧. ಮಾಗೋಡು ರಂಗನ ಜಾತ್ರೆ

೨. ಕಳುವೊರಹಳ್ಳಿ ಜುಂಜಪ್ಪನ ಜಾತ್ರೆ

೩. ಮರಡಿ ರಂಗನಾಥನ ಜಾತೆ

೪. ತಾವರೇಕೆರೆ ರಂಗನಾಥನ ಜಾತ್ರೆ

೫. ಗಿಡಗನಹಳ್ಳಿ ರಂಗನಾಥನ ಜಾತ್ರೆ

೬. ಬರಗೂರು ವೀರಮ್ಮನ ಜಾತ್ರೆ

೭. ಗುರುಗುಂಡ ಬ್ರಹ್ಮೇಶ್ವರನ ಜಾತ್ರೆ

೮. ಬೇವಿನಹಳ್ಳಿ ಕರಿಯಮ್ಮನ ಜಾತ್ರೆ

ಅಧ್ಯಾಯ ೬

# ಸಾಂಸ್ಕೃತಿಕ ವೀರ-ನಾಯಕರ ಸಂಪ್ರದಾಯ ಮತ್ತು ಆಚರಣೆಗಳು

ಹಬ್ಬ, ಜಾತ್ರೆ, ಸಂಪ್ರದಾಯ, ಆಚರಣೆಗಳು ಕಾಲಕಾಲಕ್ಕೆ ಸಾಂಸ್ಕೃತಿಕ ವೀರರ ಮೆರುಗನ್ನು ಇಮ್ಮಡಿಗೊಳಿಸುತ್ತವೆ. ಆಚರಣೆಯಿಲ್ಲದೆ ಯಾವ ದೈವದ ಅಸ್ತಿತ್ವವೂ ಸಾಧ್ಯವಿಲ್ಲ. ಸಾಂಸ್ಕೃತಿಕ ನಾಯಕರಿಗೂ ಸಮಾಜಕ್ಕೂ ಇರುವ ಸಂಬಂಧ ಅಭಿನವಗೊಳ್ಳುವ ಕ್ರಮದ ವಿವರಗಳೇ ಆಚರಣೆಗಳು. ಸಾಂಸ್ಕೃತಿಕ ವೀರರ ಕಥೆ, ಕಾವ್ಯಗಳು ಎಷ್ಟು ಮುಖ್ಯವೋ ಹಿಂದಿನಿಂದ ನಡೆದುಕೊಂಡು ಬಂದಿರುವ ಆಚರಣೆಗಳೂ ಅಷ್ಟೇ ಮುಖ್ಯ. "ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮತ್ತು ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆ."[೧] ನಂಬಿಕೆ ಆಚರಣೆಯ ಬೆನ್ನೆಲುಬು. ನಂಬಿಕೆಯ ಸಿದ್ಧಾಂತ ಆಚರಣೆಯನ್ನು ಮುಂದುವರೆಸಿಕೊಂಡು ಹೋಗುವಂತೆ ಮಾಡುತ್ತದೆ. ಆಚರಣೆ ಹುಟ್ಟಿಕೊಳ್ಳುವ ಮುನ್ನ ಪುರಾಣ ಹುಟ್ಟಿಕೊಳ್ಳುತ್ತದೆ. ಪುರಾಣ ಕಥೆ ಮರೆತುಹೋದಾಗ ಯಾವುದೇ ಆತಂಕವಿಲ್ಲದೆ ಆಚರಣೆಗಳು ಮುಂದುವರಿಯುತ್ತಾ ಹೋಗುತ್ತವೆ ಎನ್ನುತ್ತಾರೆ ಡಾ. ಸಿದ್ಧಲಿಂಗಯ್ಯನವರು.[೨] ಈ ಆಚರಣೆ ನಿರ್ಧಿಷ್ಟ ಕಾಲದಲ್ಲಿ ನಿರ್ಧಿಷ್ಟ ವ್ಯಕ್ತಿಯಿಂದಲೇ ಆಗಬೇಕು.

ಆಚರಣೆಯನ್ನು ವಿವರಿಸುವಾಗ "ಮತ ಧರ್ಮಗಳಿಗೆ ಸಂಬಂಧಿಸಿದಂತೆ, ಅಗೋಚರ ದೈವ ಶಕ್ತಿಗಳ ಪ್ರತೀಕವಾಗಿ ಮಾನವ ನಡೆಸುತ್ತಾ ಬಂದಿರುವ ಮತಾಚಾರಗಳಿಗೆ, ಕರ್ಮವಿಧಿಗಳಿಗೆ ಈ ಹೆಸರಿದೆ".[೩] ಒಂದು ವರ್ಗ ಪರಂಪರಾನುಗತವಾಗಿ ಒಪ್ಪಿರುವ ಮಾನವತೆಯ ವಿನ್ಯಾಸವನ್ನು ಸಂಪ್ರದಾಯ ಎಂದು ಕರೆಯಬಹುದು. ಸಂಪ್ರದಾಯ ವೈಯಕ್ತಿಕವಾದುದಲ್ಲ ಸಾಮೂಹಿಕವಾದುದು. ಜನರು ಏನು ಮಾಡಬೇಕೆಂದು ತಿಳಿಸುವುದು ಸಂಪ್ರದಾಯ. ಏಕೆ ಅದನ್ನು ಮಾಡಬೇಕೆಂದು ತಿಳಿದಿದ್ದಾರೋ ಅದೇ ನಂಬಿಕೆ.[೪] 'ಪುನರಾವರ್ತನೆ ಮತ್ತು ಸಾಮೂಹಿಕ ವೀಕ್ಷಣೆಯಿಂದ ಸಂಪ್ರದಾಯವಾಗಿ ಒಪ್ಪಿತವಾಗಿರುವ ಭೂತ, ವರ್ತಮಾನ, ಭವಿಷ್ಯತ್ ಕಾಲಗಳಿಗೆ ಸಂಬಂಧಿಸಿದಂತೆ ಕಾರ್ಯಕಾರಣ ಸಂಬಂಧವನ್ನು ಸೂಚಿಸುವ ಕಲ್ಪನೆಯನ್ನೇ ನಂಬಿಕೆ ಎಂದು ಕರೆಯಬಹುದು"[೫] ಎಂದು ಸಂಪ್ರದಾಯ ನಂಬಿಕೆಗಳ ಬಗೆಗೆ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಸಂಪ್ರದಾಯಗಳು ಪುರಾಣಗಳಿಂದ ಮತ್ತು ಐತಿಹ್ಯಗಳಿಂದ ಪ್ರಭಾವಿತವಾಗಿರುತ್ತವೆ. ಪುರಾಣದಿಂದ ಮತ್ತು ಐತಿಹ್ಯಗಳ ಹಿನ್ನೆಲೆಯಲ್ಲಿ ಸಂಪ್ರದಾಯಗಳನ್ನು ಅಭ್ಯಾಸ ಮಾಡುವುದು ಹೆಚ್ಚು ಉಪಯುಕ್ತವೆನುಸುತ್ತದೆ. ಒಂದು ಸಾಮಾಜಿಕ ವರ್ಗ ಪರಂಪರಾನುಗತವಾಗಿ ಅನುಸರಿಸುತ್ತ

ಬಂದಿರುವ ಕ್ರಿಯಾ ವಿನ್ಯಾಸವನ್ನು ಸಂಪ್ರದಾಯ (Custom) ಎಂದು ಕರೆಯಬಹುದು. ಒಬ್ಬೊಬ್ಬ ವ್ಯಕ್ತಿಯ ಅಭ್ಯಾಸ ಸಂಪ್ರದಾಯ ಎನಿಸಿಕೊಳ್ಳುವುದಿಲ್ಲ. ಅಂದರೆ ಸಂಪ್ರದಾಯ ಎನ್ನುವುದು ವೈಯಕ್ತಿಕವಾದುದಲ್ಲ ಸಾಮೂಹಿಕವಾದುದು. ಜನರು ಮಾಡುವುದು ಏನು ಎಂದು ತಿಳಿಸುವುದು ಸಂಪ್ರದಾಯ; ಹೀಗೆ ಮಾಡುತ್ತಾರೆ ಎಂಬುದನ್ನು ತಿಳಿಸುವುದು ಉಪಾಸನೆ (rituals). ಸಂಪ್ರದಾಯವನ್ನು ಕ್ರಿಯ ವಿನ್ಯಾಸ (patttern of action) ಎಂದು ಕರೆಯುವುದರಿಂದ ಉಪಾಸನೆಯನ್ನು ಕ್ರಿಯವಿಧಾನ (method of action) ಎಂದು ಕರೆಯಬಹುದು. ಉಪಾಸನೆಯಲ್ಲಿ ಏನು ಮಾಡಬಾರದು ಎಂದು ತಿಳಿಸುವುದೆ ನಿಷಿದ್ಧ ಎಂದು ಕರೆಯಬಹುದು. ಉಪಾಸನೆ ಮತ್ತು ನಿಷಿದ್ಧ ಧಾರ್ಮಿಕ ಸಂಪ್ರದಾಯದ ವ್ಯಾಪ್ತಿಯಲ್ಲಿ ಬರುತ್ತವೆ. ಸಂಪ್ರದಾಯ ಉಪಾಸನೆ ಮತ್ತು ನಿಷಿದ್ಧ ಈ ಮೂರಕ್ಕೂ ಮೂಲವಾಗಿರುವ ಅಂಶವೇ ನಂಬಿಕೆ. ನಂಬಿಕೆ ಇಲ್ಲದಿದ್ದರೆ ಈ ಮೂರಕ್ಕೂ ಅಸ್ತಿತ್ವ ಇರುವುದಿಲ್ಲ.[೬]

ಸಿರಾ ಸೀಮೆಯ ಸಾಂಸ್ಕೃತಿಕ ವೀರ ನಾಯಕರನ್ನು ಕುರಿತು ಅಧ್ಯಯನ ಮಾಡಲು ಆಚರಣೆಗಳು ಪ್ರಮುಖ ಆಧಾರವಾಗಿವೆ. ಜನಪದ ವೀರರನ್ನು ಆಯಾ ಜನಾಂಗದವರು ವಕ್ಕಲು ಮನೆತನದವರು ತಮ್ಮ ಸಾಂಸ್ಕೃತಿಕ ನಾಯಕರಿಗೆ ವರ್ಷಕ್ಕೊಮ್ಮೆ ಹಬ್ಬವನ್ನು ಆಚರಿಸುವರು. ಈ ಹಬ್ಬಗಳು ಅವರಿಗೆ ಶ್ರೇಷ್ಠವಾದವುಗಳು. ಜೊತೆಗೆ ಸಂತೋಷ ಕೊಡುವುವು. ಈ ಹಬ್ಬಗಳ ಸಂದರ್ಭಗಳಲ್ಲಿ ಆಚರಿಸುವ ಕೆಲವು ಆಚರಣೆಗಳು ಪೀಳಿಗೆಯಿಂದ ಪೀಳಿಗೆಗೆ ಹರಿದು ಬರುತ್ತವೆ. ಹರಕೆಗಳನ್ನು ಆಚರಣೆ ಒಳಗೊಂಡಿರುತ್ತವೆ. ಆಚರಣೆ ಕಡ್ಡಾಯವಾದರೆ ಹರಕೆಯನ್ನು ಹರಸಿಕೊಂಡವರು ಮಾತ್ರ ಒಪ್ಪಿಸುತ್ತಾರೆ. ಆಚರಣೆ ಸಾಮೂಹಿಕವಾದದ್ದು ಹರಕೆವೈಯಕ್ತಿಕವಾದದ್ದು. ಹರಕೆ ಬಹಳಸಲ ಆಚರಣೆಯ ರೂಪದಲ್ಲೇ ನಡೆಯುತ್ತದೆ. ಮಂಡೆ ಮಾಡುವುದು, ಹೂವಿನ ತುಲಾಭಾರ ಕೊಡುವುದು ಇವೆಲ್ಲಾ ಹರಕೆಯ ರೂಪದ ಆಚರಣೆಗಳೇ ಆಗಿವೆ.

ಆಚರಣೆಗಳು ಐತಿಹಾಸಿಕ ಅಂಶವೊಂದನ್ನು ಅಭಿನಯಿಸಿ ತೋರಿಸುತ್ತವೆ. ಚರಿತ್ರೆಯ ಅನೇಕ ಸಂಗತಿಗಳು ಅಳಿದುಹೋದರು ಅವು ಆಚರಣೆಯಲ್ಲಿ ಜೀವಂತವಾಗಿರುತ್ತವೆ. ಪೌರಾಣಿಕ ಘಟನೆಗಳೂ ಆಚರಣೆಯಲ್ಲಿ ಅಭಿವ್ಯಕ್ತಗೊಳ್ಳುವುದನ್ನು ನೋಡಬಹುದು. ಒಬ್ಬ ವ್ಯಕ್ತಿ ತನಗೆ ಬೇಕೆಂದಾಗ ಆಚರಣೆಯನ್ನು ಸೃಷ್ಟಿಸಲು ಸಾಧ್ಯವಿಲ್ಲ. ಒಂದು ಜನಾಂಗದ ಜೀವನ ವಿಧಾನದ ಬೇಡಿಕೆಯ ಅಂಗವಾಗಿ ಆಚರಣೆ ರೂಪ ಪಡೆಯುತ್ತದೆ. ಆಚರಣೆಗಳು ವಿಶೇಷ ಸಂದರ್ಭಗಳಲ್ಲಿ ಆಚರಿಸಲ್ಪಟ್ಟಾಗ ಹಬ್ಬಗಳೆನಿಸಿಕೊಳ್ಳುತ್ತವೆ. ಹಬ್ಬಗಳಿಗೆ ವಾಣಿಜ್ಯ ಸ್ಪರ್ಷವಾದಾಗ ಜಾತ್ರೆಯ ಸ್ವರೂಪ ಬರುತ್ತದೆ. ಧಾರ್ಮಿಕ ಸ್ವರೂಪದ ಹಬ್ಬ ಕಾಲಕ್ರಮೇಣ ಸಾಂಸ್ಕೃತಿಕ ಮಹತ್ವವನ್ನು ಪಡೆದು ಕೊನೆಗೆ ವಾಣಿಜ್ಯ ಮುಖವನ್ನು ರೂಪಿಸಿಕೊಂಡಾಗ ಜಾತ್ರೆಯಾಯಿತು. ಒಂದೊಂದು ಆಚರಣೆಯೂ ಅಪಾರ ಭಕ್ತಿ ಭಾವದಿಂದ ಆಚರಿಸಲ್ಪಡುತ್ತದೆ. ಹೀಗೆ ಆಚರಿಸದಿದ್ದರೆ ತಮಗೆ

ಕಂಟಕಗಳು ಬರುತ್ತವೆ ಎಂದು ನಂಬಿಕೆ ಇರುವುದರಿಂದ ಈ ಆಚರಣೆಗಳನ್ನು ನಿಲ್ಲಿಸುವ ಪ್ರಶ್ನೆಯೇ ಹುಟ್ಟುವುದಿಲ್ಲ ಎನ್ನುತ್ತಾರೆ ಡಾ. ಸಿದ್ಧಲಿಂಗಯ್ಯ.[೭]

ಸಾಸ್ಕೃತಿಕ ವೀರರು ಕಾಲಕ್ರಮೇಣ ದೈವತ್ವವನ್ನು ಪಡೆದು ಆರಾಧಿಸಲ್ಪಡುವುದು ಸರಿಯಷ್ಟೆ. ಈ ವೀರರ ವ್ಯಕ್ತಿತ್ವ ಅವರ ಸ್ಮರಣೆ, ಬದುಕಿನ ಆದರ್ಶವನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳುವ ಸಲುವಾಗಿ ವೀರರ ಕುರಿತ ಅನೇಕ ಆಚರಣೆಗಳನ್ನು ಕಾಣಬಹುದು.

ವೀರರ ಹೆಸರಿನಲ್ಲಿ ದೇವಾಲಯ, ಪೌಳಿ, ಸ್ಮಾರಕ ನಿರ್ಮಾಣ ಮಾಡುವುದು ಅಂದಿನ ಜನರಿಗಿದ್ದ ಮನೋಭಾವ ಎಂಥಹದ್ದು ಎಂಬುದನ್ನು ತಿಳಿಸುತ್ತದೆ. ಆ ಮೂಲಕ ವೀರನ ಆತ್ಮಕ್ಕೊಂದು ಸ್ಥಳಾವಕಾಶ ಮಾಡಿಕೊಡುತ್ತಾರೆ. ಆ ಕಲ್ಲಿನಲ್ಲಿ ವೀರನ ಆತ್ಮ ನೆಲೆಸಿರುತ್ತದೆ, ಅದರಲ್ಲಿ ಪ್ರತಿಷ್ಠಾಪಿತವಾಗಿರುವ ವೀರ ನಮಗೆ ಕಷ್ಟದಲ್ಲಿ ನೆರವಾಗುತ್ತಾನೆ ಎಂಬ ಮನೋಭಾವ ಅತಿ ಪ್ರಾಚೀನವಾದದ್ದು. ವೀರನಾದವನು ಬದುಕಿದ್ದಾಗ ಹೇಗೆ ತನ್ನ ನೆರವನ್ನು ಕೇಳಿ ಬಂದವರಿಗೆ, ಶರಣಾಗತವಾದವರಿಗೆ ಆಶ್ರಯವನ್ನು, ರಕ್ಷಣೆಯನ್ನು ನೀಡುತ್ತಿದ್ದನೋ ಅದೇ ರೀತಿಯಲ್ಲಿ ಅವನು ಸತ್ತಮೇಲೆಯೂ ಸಹ ವೀರಗಲ್ಲಿನಲ್ಲಿ ಅಥವಾ ಸ್ಮಾರಕ, ವಿಗ್ರಹಗಳಲ್ಲಿ ನೆಲೆಸಿದ್ದು ಆತನನ್ನು ಆಶ್ರಯಿಸಿ ಬಂದವರಿಗೆ ನೆರವನ್ನು ನೀಡುತ್ತಾನೆ ಎಂಬುದಾಗಿ ಜನರು ಭಾವಿಸಿದ್ದಾರೆ.

ವೀರರ ಆರಾಧನಾ ಸಂಪ್ರದಾಯದ ಹಿಂದೆ ಆವರ ಆದರ್ಶಗಳನ್ನು ತಮ್ಮ ಪರಂಪರೆಯಲ್ಲಿ ಬಳಸಿಕೊಂಡು ಬರಬೇಕೆಂದು ಒಂದು ವಿಶೇಷ ಕಾಳಜಿ ಇರಬೇಕು. ಬಹುಶಃ ಈ ಕಾರಣದಿಂದಲೇ ವೀರರ ಆರಾಧನೆಗೆ ಒಂದು ವಿಶೇಷ ಸಾಧನ ದೊರತಿದೆ. ಸಿರಾ ಸೀಮೆಯಲ್ಲಿ ಸಾಂಸ್ಕೃತಿಕ ವೀರರ ಸ್ಮರಣೆ, ಆರಾಧನೆಯ ಸಂದರ್ಭದಲ್ಲಿ ನಡೆದ ಕೆಲವು ಸಂಪ್ರದಾಯ, ಆಚರಣೆ, ಜಾತ್ರಾ ಮಹೋತ್ಸವಗಳನ್ನು ಇಲ್ಲಿ ಅವಲೋಕಿಸಬಹುದು.

ಆಚರಣೆಗಳು ಯಾವಾಗಲೂ ಧಾರ್ಮಿಕ ಕಾರಣಗಳಿಗಾಗಿ ರೂಪುಗೊಳ್ಳುವುದಿಲ್ಲ. ಸಮುದಾಯಗಳ ಲೌಕಿಕ ಆಶೋತ್ತರಗಳು ಆಚರಣೆಯಲ್ಲಿ ಅಭಿವ್ಯಕ್ತಿಗೊಳ್ಳುತ್ತವೆ. ಆಯಾ ಪ್ರದೇಶದ ಭೌಗೋಳಿಕ ವೈಶಿಷ್ಟ್ಯತೆ, ಸಮುದಾಯದ ಸಾಮಾಜಿಕ, ರಾಜಕೀಯ ಆರ್ಥಿಕ ಕಾರಣವಾಗುತ್ತವೆ. ಆಚರಣೆಗಳು ಒಂದು ರೀತಿಯಲ್ಲಿ ಕ್ರಿಯಾತ್ಮಕ ಪಠ್ಯಗಳು. ಇಲ್ಲಿ ಮಾತುಗಳು, ಮಂತ್ರಗಳು, ಹಾಡುಗಳ ಜೊತೆ ಜೊತೆಯಲ್ಲಿಯೇ ಅನೇಕ ಕ್ರಿಯೆಗಳು ಇರುತ್ತವೆ. ಪೂಜೆಗಳು, ಉನ್ಮಾದ ನೃತ್ಯಗಳು, ವಾದ್ಯಗಳು ಇಲ್ಲಿ ಪಾಲ್ಗೊಂಡಿರುತ್ತವೆ. ಆಚರಣೆಗಳು ಏಕಕಾಲದಲ್ಲಿ ವ್ಯಕ್ತಿಯ ತೀರ ವೈಯಕ್ತಿಕವೆನ್ನಿಸುವ ಭಾವ ತೀವ್ರತೆಯಲ್ಲಿ ಮತ್ತು ಸಮೂಹದ ಪ್ರೋತ್ಸಾಹದ ಫಲವಾಗಿ ಅಸ್ತಿತ್ವಕ್ಕೆ ಬಂದಿರುತ್ತವೆ. ಜನಪದ ಆಚರಣೆಗಳು ಬೇರೊಂದು ಪಂಥ ಅಥವಾ ಧರ್ಮದಿಂದ ತನಗೆ ಬೇಕಾದದ್ದನ್ನು ಸ್ವೀಕಾರ ಮಾಡಲು ಹಿಂಜರಿಯುವುದಿಲ್ಲ.

ಸಾಂಸ್ಕೃತಿಕ ವೀರರಿಗೂ ಮತ್ತು ಸಮುದಾಯಗಳಿಗೂ ಇರುವ ನಿಕಟ ಸಂಬಂಧ ಆಚರಣೆಗಳಲ್ಲಿ ಅಭಿವ್ಯಕ್ತಿ ಪಡೆದಿರುವುದನ್ನು ಕಾಣಬಹುದು. ಎಲ್ಲಾ ಜಾತಿ ಕುಲದವರೂ ಉತ್ಸವ, ಜಾತ್ರೆಗಳಲ್ಲಿ ಭಾಗವಹಿಸುವುದನ್ನು ಕಾಣಬಹುದು. ಈ ಉತ್ಸವಗಳ ಸಂದರ್ಭಗಳಲ್ಲಿ ಪ್ರತಿಯೊಂದು ಜನಾಂಗವೂ ತಮ್ಮದೇ ಆದ ಕರ್ತವ್ಯಗಳನ್ನು ಮಾಡುವುದನ್ನು ಕಾಣಬಹುದು. ವಿವಿಧ ಜಾತಿಗಳು ಆಚರಣೆಗಳ ಮೂಲಕ ಸೃಷ್ಟಿಯಾಗುವ ಜಾತ್ರೆ, ಉತ್ಸವಗಳಂತಹ ಸಾಂಸ್ಕೃತಿಕ ಸಂದರ್ಭದಲ್ಲಿ ಮುಖ್ಯರಾಗಿಬಿಡುತ್ತಾರೆ. ಅಂದರೆ, ಇಂತಹ ಆಚರಣೆಗಳಲ್ಲಿ ಒಂದೊಂದು ಬಗೆಯ ಅಧಿಕಾರವನ್ನು ಪಡೆದುಕೊಂಡು ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಪ್ರದರ್ಶಿಸುತ್ತಾರೆ. ಈ ಸಾಂಸ್ಕೃತಿಕ ವೀರರ ಜಾತ್ರೆ, ಉತ್ಸವಗಳಲ್ಲಿ ದೇವರನ್ನು ಹೊರುವವರು, ಪಂಜು ಹಿಡಿಯುವವರು, ಆರತಿ ಬೆಳಗುವವರು, ಮಡಿಸೀರೆ ಹಾಸುವವರು, ವಾದ್ಯ ನುಡಿಸುವವರು, ತೇರು ಕಟ್ಟುವವರು ಸಾಂಸ್ಕೃತಿಕ ಅಧಿಕೃತತೆಯನ್ನು ಪಡೆದಿರುತ್ತಾರೆ.

ಆಚರಣೆಗಳು ಬಹುಮುಖ್ಯ ಸಂವೇದನೆಯಿಂದ ರೂಪುಗೊಂಡಿರುತ್ತವೆ. ಅನೇಕ ಕಾಲಘಟ್ಟಗಳು, ಅಸಂಖ್ಯಾತ ಅನುಭವಗಳು, ಇಲ್ಲಿ ಒಟ್ಟಾಗಿರುತ್ತವೆ. ಜನಪದ ಸಾಂಸ್ಕೃತಿಕ ವೀರರ ಅನುಭವಗಳ ಜೊತೆಯಲ್ಲಿಯೇ ೨೧ನೇ ಶತಮಾನದ ಅನುಭವಗಳೂ ಸೇರಿಕೊಂಡು ಅಭಿವ್ಯಕ್ತವಾಗುತ್ತಿರುತ್ತವೆ. ಇದಕ್ಕೆ ಮುಖ್ಯವಾಗಿ ಜೀವಂತ ಸಮುದಾಯ ಯಾವಾಗಲೂ ಇತರ ಆಚರಣೆಗಳಿಗೆ ವರ್ತಮಾನದ ತಮ್ಮ ಬದುಕಿನ ಮೂಲಕ ಪ್ರತಿಕ್ರಿಯೆ ನೀಡುವುದು ಕಾರಣವಾಗಿದೆ. ವರ್ತಮಾನದ ರಾಜಕೀಯಾರ್ಥಿಕ ಒತ್ತಡಗಳು ಆಚರಣೆಗಳನ್ನು ರೂಪಾಂತರಿಸುವುದೋ ಇಲ್ಲವೆ ಹೊಸದೊಂದು ಆಚರಣೆಯನ್ನು ಸೇರಿಸುವ ಕ್ರಿಯೆಗೆ ಕಾರಣವಾಗುತ್ತವೆ. ರಂಗನಾಥನಿಗೆ ತೇರು, ಹೂವಿನ ಉತ್ಸವ, ತುಲಾಭಾರ ಇತ್ಯಾದಿಗಳು ೨೧ನೇ ಶತಮಾನದ ರಾಜಕೀಯ ಆರ್ಥಿಕ ಒತ್ತಡಗಳಿಂದ ರೂಪುಗೊಂಡಂತಹ ಆಚರಣೆಗಳಾಗಿವೆ.

ಇದಲ್ಲದೆ ಆಚರಣೆಗಳೊಂದಿಗೆ ಹಾಡುಗಳು, ನೃತ್ಯಗಳು ಇನ್ನಿತರ ಕಲಾ ಪ್ರಕಾರಗಳು ಅಭಿವ್ಯಕ್ತಗೊಳ್ಳುತ್ತವೆ. ಪಟ್ಟನಾಯಕನಹಳ್ಳಿ ಗುರುಗುಂಡರ ಜಾತ್ರೆ, ಮಾಗೋಡು ರಂಗ, ಮರಡಿಗುಡ್ಡದ ರಂಗನ ಜಾತ್ರೆ ಸಂದರ್ಭಗಳಲ್ಲಿ ಹತ್ತಾರು ಹೆಂಗಸರು ಗುಂಪುಗುಂಪಾಗಿ ಹಾಡುಗಳನ್ನು ಹಾಡುವುದು, ಭಕ್ತಿಯುನ್ಮತ್ತತೆಯಲ್ಲಿ ಇರುವುದು, ಕೋಲಾಟ, ಕಲಾ ಪ್ರಕಾರಗಳು ಆಚರಣೆಯ ಮೂಲಕ ಅಭಿವ್ಯಕ್ತಗೊಳ್ಳುತ್ತಿರುತ್ತವೆ.

ಸಾಂಸ್ಕೃತಿಕ ವೀರರನ್ನು ಕುರಿತು ಇರುವ ಕಥೆ, ಕಾವ್ಯ, ಪುರಾಣ, ಐತಿಹ್ಯಗಳು ವೀರರ ಸಾಧನೆ, ಜೀವನವನ್ನು ವಿವರಿಸುತ್ತಾ ಅವರು ನಂಬಿದ ಆದರ್ಶಗಳನ್ನು, ಮೌಲ್ಯಗಳನ್ನು ವಿವರಿಸುತ್ತವೆ. ಆದರೆ ಆ ವೀರರನ್ನು ಆರಾಧಿಸುವ ಸಮುದಾಯದವರು ಆ ರೀತಿಯಲ್ಲಿ ಬದುಕುತ್ತಿದ್ದಾರೆಯೇ

ಸಾಂಸ್ಕೃತಿಕ ನಾಯಕರ ಕಥೆ, ಕಾವ್ಯ ಮತ್ತು ಆಚರಣೆಗಳ ಮಧ್ಯೆ ವೈರುಧ್ಯ ಉಂಟಾಗಲು ಯಾವ ಒತ್ತಡಗಳು ಕಾರಣವಾಗಿವೆ. ವರ್ತಮಾನದಲ್ಲಿ ಸಾಂಸ್ಕೃತಿಕ ವೀರರು ಪಡೆದುಕೊಂಡಿರುವ ರೂಪಾಂತರ ಯಾವ ದಿಕ್ಕಿನತ್ತ ಸಾಗಿದೆ. ಈ ಬಗ್ಗೆ ಚರ್ಚಿಸದಿದ್ದರೆ ಸಂಸ್ಕೃತಿ ಅಧ್ಯಯನವೆನ್ನುವುದು ಬರಿ ಗತಕಾಲದ ಹುಡುಕಾಟ ಮಾತ್ರವಾಗಿಬಿಡುತ್ತದೆ. ವರ್ತಮಾನದಲ್ಲಿಯೂ ಈ ಪಂಥ ರೂಪುಗೊಳ್ಳುತ್ತಿರುವುದು ಗಮನಕ್ಕೆ ಬರದಂತಾಗುತ್ತದೆ.

ಮೌಖಿಕ ಪಠ್ಯಗಳು ಮತ್ತು ಸಮುದಾಯದ ಆಚರಣೆಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತವೆ. ಆದರೆ ಎಲ್ಲಾ ಕಾಲಕ್ಕೂ ಇವೆರಡರ ಮಧ್ಯೆ ವೈರುಧ್ಯ ಉಳಿದುಕೊಂಡು ಬಂದಿದೆ.

ಪಠ್ಯಗಳು ೧೬-೧೭ನೇ ಶತಮಾನದ ಸಾಂಸ್ಕೃತಿಕ ವೀರರನ್ನು ಚಿತ್ರಿಸುವಾಗ ೨೧ನೇ ಶತಮಾನಕ್ಕೆ ಪವಾಡಗಳನ್ನು ತಂದು ಚಿತ್ರಿಸಿ ಆ ನಾಯಕನ ಸಾಂಸ್ಥಿಕ ಬದುಕಿಗೆ ಚಾಲನೆಯನ್ನು ನೀಡುತ್ತಿರುತ್ತಾರೆ. ಅದೇ ಹೊತ್ತಲ್ಲಿ ತಮ್ಮ ವೀರರ ಪವಾಡಗಳನ್ನು ವಿವರಿಸುವಾಗ ವರ್ತಮಾನದ ಭಾಗವಾಗಿ ಹಲವಾರು ಗುಡಿ ಗೋಪುರಗಳನ್ನು ಕಟ್ಟುತ್ತಿರುವುದನ್ನು ವಿವರಿಸುತ್ತಾರೆ.

ಸಾಂಸ್ಕೃತಿಕ ವೀರರು ಕಾಲದ ಒತ್ತಡದಲ್ಲಿ ತಮ್ಮದೇ ಆದ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾಗುತ್ತದೆ. ಅದಕ್ಕಾಗಿ ಆಪ್ತ ಭಕ್ತರನ್ನು ಪಡೆಯುತ್ತಾ ಗುಡಿ ಗೋಪುರಗಳನ್ನು ಕಟ್ಟಿಸಿಕೊಳ್ಳುತ್ತಾ ಅಸ್ತಿತ್ವವನ್ನು ಪಡೆದುಕೊಳ್ಳುತ್ತಾರೆ. ಅದಕ್ಕಾಗಿ ಭಕ್ತರಲ್ಲಿ ಹಲವು ಆಚರಣೆಗಳನ್ನು ರೂಢಿಸುತ್ತಾರೆ. ಈ ಆಚರಣೆ ನಂಬಿ ಬದುಕುವ ಸಮುದಾಯಗಳು ತಮ್ಮ ವರ್ತಮಾನದ ಒತ್ತಡಗಳಿಗೆ ಒಳಗಾಗಿ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಆಚರಣೆಗಳನ್ನು ಆಗಾಗ ಬದಲಿಸುವುದು, ಹೊಸ ಆಚರಣೆಗಳನ್ನು ಸೇರಿಸಿಕೊಳ್ಳುವುದು ಮಾಡುತ್ತಾರೆ. ಆಚರಣೆಗಳು ವಾಸ್ತವ ಸಮಾಜದ ವಿವಿಧ ವರ್ಗದ ಎಲ್ಲಾ ಸಂಬಂಧಗಳ ಮೂಲಕ ರೂಪುಗೊಳ್ಳುತ್ತಿರುತ್ತವೆ. ಸಮುದಾಯದ ಆದರ್ಶ, ಕನಸುಗಳನ್ನು ಪಠ್ಯದ ಮೂಲಕ ಹೇಳುತ್ತಿದ್ದರೂ ವಾಸ್ತವದಲ್ಲಿ ಮೌಖಿಕ ಪಠ್ಯದ ನಾಯಕನಾಗಲೀ ಅಥವಾ ಆ ನಾಯಕನನ್ನು ಆರಾಧಿಸುವ ಸಮುದಾಯಗಳಾಗಲಿ ಸಮಾಜದ ಎಲ್ಲ ಕಟ್ಟುಪಾಡುಗಳ ಮಧ್ಯಯೇ ಬದುಕಬೇಕಾಗುತ್ತದೆ. ಹಾಗೂ ಮೌಖಿಕ ಪಠ್ಯದಲ್ಲಿ ಹೇಳುವ ತತ್ವಗಳು ವಾಸ್ತವದ ಹಲವಾರು ಸಮುದಾಯಗಳ ಒತ್ತಡಗಳು ಗೊಂದಲಗಳ ಮಧ್ಯದಲ್ಲಿ ರೂಪುಗೊಂಡ ಆಚರಣೆಗಳಲ್ಲಿ ಕಾಣದಾಗುತ್ತವೆ.

**ಪಾಳೇಗಾರ ಕುಣಿತ :**

ಹಿಂದೆ ಸಿರಾ ಪ್ರಾಂತ್ಯವನ್ನು ವೈಭವ ಪೂರ್ಣವಾಗಿ ಆಳಿ ಧರ್ಪ ಗಾಂಭೀರ್ಯ, ಧೈರ್ಯ, ಶೌರ್ಯಗಳಿಗೆ ಹೆಸರಾದ ಪಾಳೇಗಾರರ ಅದರಲ್ಲೂ ಸಿರಾ ಪಾಳೇಗಾರ ರಂಗಪ್ಪನಾಯಕನ

ಗಂಡುಗಲಿ ತನದ ಗುಂಡಿಗೆಯನ್ನು ನೆನಪಿಸುವ ಸಂಪ್ರದಾಯವಾಗಿ ಸಿರಾ ಸೀಮೆಯಲ್ಲಿ ಈ ಕಲೆ ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಇತ್ತೀಚಿನ ದಿನಗಳಲ್ಲಿ ತೀರಾ ಅಪರೂಪವೆನ್ನಿಸಿಕೊಳ್ಳುವ ಈ ಪಾಳೇಗಾರ ಕುಣಿತ ಮುಂದಿನ ದಿನಗಳಲ್ಲಿ ಜನರಿಂದ ಕಣ್ಮರೆಯಾದರೂ ಆಶ್ಚರ್ಯವಿಲ್ಲ. ಸಾಮಾನ್ಯವಾಗಿ ಯಾವುದಾದರೂ ಹಬ್ಬ, ಧಾರ್ಮಿಕ ಆಚರಣೆ, ಸಭೆ, ಸಮಾರಂಭ, ಜಾತ್ರೆಗಳ ಸಂದರ್ಭಗಳಲ್ಲಿ ಈ ಪಾಳೇಗಾರ ಕುಣಿತವನ್ನು ಕಾಣಬಹುದಾಗಿದೆ. ಸಿರಾ ತಾಲ್ಲೂಕಿನ ಪಟ್ಟನಾಯಕನ ಹಳ್ಳಿ ಜಾತ್ರೆ, ಗುಡಿಹಳ್ಳಿ ಜಾತ್ರೆ, ಸಿರಾದಲ್ಲಿ ನಡೆವ ದೇವರ ಉತ್ಸವಗಳಲ್ಲಿ, ಸಿರಾದ ನಾಯಕರ ಹಟ್ಟಿ ಮೊದಲಾದ ಸಂದರ್ಭಗಳಲ್ಲಿ ಈ ಕಲೆಯ ಕಲಾವಿದರನ್ನು ಕಾಣಬಹುದು. ಪಾಳೇಗಾರ ವೇಷ ಹಾಕುವ ವ್ಯಕ್ತಿ ದೃಢಕಾಯವಾಗಿದ್ದು, ಮುಖದ ಮೇಲೆ ದಪ್ಪವಾದ ಮೀಸೆಯನ್ನು ಬಿಟ್ಟು ತಲೆಗೆ ಪೇಟವನ್ನು ಸುತ್ತಿರುತ್ತಾನೆ. ಎರಡೂ ಕೈಗಳಿಗೆ ಸರಪಳಿ ಕಟ್ಟಿ ಆಕಡೆ, ಈಕಡೆ ಒಬ್ಬೊಬ್ಬರು ಹಿಡಿದಿರುತ್ತಾರೆ. ಕೈಯಲ್ಲಿ ದೊಣ್ಣೆ ಅಥವಾ ಕತ್ತಿ ಹಿಡಿದು ಪಾಳೇಕಾರ ರಂಗಪ್ಪನಾಯಕ, ಕಸ್ತೂರಿ ರಂಗಪ್ಪನಾಯಕ, ಕೆಂಗಣ್ಣನಾಯಕ ಮೊದಲಾದ ಪಾಳೇಗಾರರ ವೇಷ ಹಾಕಿ ಆ ವೇಷದಿಂದ ತಮ್ಮಟೆಯ ಶಬ್ದಕ್ಕೆ ತಕ್ಕಂತೆ ಹೆಜ್ಜೆ ಹಾಕುತ್ತಾ ಕುಣಿಯುತ್ತಾರೆ. ಸಿರಾದ ನಾಯಕರಹಟ್ಟಿ ನರಸಿಂಹಯ್ಯ ಈ ಪಾಳೇಗಾರ ವೇಷ ಹಾಕುವ ಕಲೆಗಾರಿಕೆಯಲ್ಲಿ ಹೆಸರಾಗಿದ್ದಾನೆ.

ಒಂದು ಉಲ್ಲೇಖದ ಪ್ರಕಾರ ಬ್ರಿಟೀಷರ ಕಾಲದಲ್ಲಿ ಬಲಿಷ್ಠನಾಗಿದ್ದ ಪಾಳೇಗಾರನೊಬ್ಬ ಅವರಿಗೆ ಸವಾಲಾಗುತ್ತಾನೆ. ಆಗ ಅವರು ಸಂಚುಮಾಡಿ ಅವನ ಸೂಳೆಯಿಂದ ಅವನಗೆ ವಿಷಕುಡಿಸಿ ಸಾಯಿಸಿದರು. ಅವನ ವಂಶಸ್ತರು ಅವನ ಪ್ರತಾಪ ಪರಾಕ್ರಮಗಳನ್ನು ಹೇಳಲು ಈ ಪಾಳೇಗಾರ ವೇಷ ಹಾಕುತ್ತಾ ಬಂದರು ಎಂದ ಹೇಳಲಾಗಿದೆ.[೮]

ಪಾಳೇಗಾರ ಕುಣಿತದಲ್ಲಿ ಪಾಳೇಗಾರನ ಪ್ರತಾಪ ಪರಾಕ್ರಮಗಳನ್ನು ಹೇಳುವುದಕ್ಕಿಂತ ಹೆಚ್ಚಾಗಿ ಒಂದು ಕಾಲದಲ್ಲಿ ದರ್ಪ ದೌರ್ಜನ್ಯದಿಂದ ಮೆರೆದವನನ್ನು ಸೆರೆಹಿಡಿದು ನಾನಾ ರೀತಿ ಹಂಗಿಸಿ, ಭಂಗಿಸಿ ಅವಮಾನ ಮಾಡಿ ಸಂತೋಷಪಡುವಂತಹ ಪ್ರವೃತ್ತಿ ಕಾಣುತ್ತೇವೆ. ಹೀಗಾಗಿ ಇದೊಂದು ಅಣಕು ವೇಷ ಎಂದ ಹಿರಿಯ ಕಲಾವಿದರೊಬ್ಬರ ಅಭಿಪ್ರಾಯವನ್ನು ಉಲ್ಲೇಖಿಸುತ್ತಾ ಡಾ. ಮೀರಾಸಾಬಿಹಳ್ಳಿ ಶಿವಣ್ಣನವರು ಈ ವೇಷ ಹಾಕುವ ಬಹುಮಂದಿ ನಾಯಕ ಜನಾಂಗಕ್ಕೆ ಸೇರಿದವರಾಗಿರುವುದರಿಂದ ತಮ್ಮ ಪರಂಪರೆಯ ಪ್ರತಿಷ್ಠಿತ ವ್ಯಕ್ತಿಯನ್ನು ಹಂಗಿಸುವ ಕೆಲಸವನ್ನು ಮಾಡಲಾರರು. ಪೀರ್ಲಹಬ್ಬದ ಸಂದರ್ಭದಲ್ಲಿ ಖುಷಿಗಾಗಿ, ಕೇವಲ ಮನರಂಜನೆಗಾಗಿ ಹಾಕುವ ವೇಷ ಎಂದು ಭಾವಿಸುತ್ತಾರೆ.[೯] ಗುಮ್ಮನಹಳ್ಳಿ ಕದನದಲ್ಲಿ ವೀರಾವೇಷದಿಂದ ಹೋರಾಡಿ ಮಡಿದ ರಂಗಪ್ಪನಾಯಕನ ವ್ಯಕ್ತಿತ್ವವನ್ನು ಕೊಂಡಾಡುವ ಕಲೆಯಾಗಿ ಪಾಳೇಗಾರ ಕುಣಿತ ಸಿರಾ ಪ್ರಾಂತ್ಯದಲ್ಲಿ ಅಸ್ತಿತ್ವದಲ್ಲಿದೆ.

**ವೀಳ್ಯ ತೆಗೆಯುವುದು :**

ಸಾಂಸ್ಕೃತಿಕ ವೀರರ ವಂಶಸ್ತರು, ಭಕ್ತರು ವೀರರ ಆರಾಧನೆ ಹಾಗೂ ಅವರ ಧಾರ್ಮಿಕ ಆಚರಣೆಗಳು, ವಿವಾಹ ಮೊದಲಾದ ಕಾರ್ಯಕ್ರಮಗಳಲ್ಲಿ ವೀರರನ್ನು ಪೂಜಿಸಿ ಗೌರವಿಸುವ ಜೊತೆಗೆ ಅವರಿಗೆ ಮೊದಲ ಪೂಜೆ ಹಾಗೂ ವೀಳ್ಯ ತೆಗೆಯುವ ಸಂಪ್ರದಾಯವಿದೆ. ಕುಂಚಿಟಿಗರು ತಮ್ಮ ಜನಾಂಗ ರಕ್ಷಣೆ ಮಾಡಿದ ಬೊಪ್ಪರಾಯನಿಗೆ ವೀಳ್ಯ ತೆಗೆಯುವ ಮೂಲಕ ಮೊದಲ ಎಡೆಯ ಅಗ್ರಪ್ರಾಶಸ್ತ್ಯ ಸಲ್ಲಿಸುತ್ತಾರೆ. ಕುಂಚಿಟಿಗ ಜನಾಂಗದ ಜಿಲ್ಲೆನವರ ವಂಶಸ್ತರಲ್ಲಿ ಇದು ಹೆಚ್ಚು ಅಸ್ತಿತ್ವದಲ್ಲಿದೆ. ಅದೇ ರೀತಿ ಬರಗೂರು ವೀರಮ್ಮಳ ಭಕ್ತರಲ್ಲಿ ತಮ್ಮ ಜನಾಂಗದ ಶೀಲ ಶೌರ್ಯವನ್ನು ಎತ್ತಿ ಹಿಡಿದ ವೀರಮ್ಮಳಿಗೆ ವೀಳ್ಯ ತೆಗೆಯುವ ಪದ್ಧತಿ ಇದೆ. ಜುಂಜಪ್ಪನ ವಕ್ಕಲಿನಲ್ಲಿಯೂ ಇದನ್ನು ಕಾಣಬಹುದು. ಎತ್ತಪ್ಪ ತನ್ನ ಪಾವಿತ್ರ್ಯತೆ ಕಾಪಾಡಿದ ಬಾವ ಮೈದುನ ವಲಗಾನಿಗೆ ಕೊಟ್ಟ ವರದಂತೆ ಇಂದಿಗೂ ಕಾಡುಗೊಲ್ಲರು ಮದುವೆಗಳಲ್ಲಿ ಮುಂದಿನ ವೀಳ್ಯವನ್ನು ವಲಗಾನಿಗೆ ಕೊಡುತ್ತಾರೆ. ಈ ವೀಳ್ಯ ತೆಗೆಯುವುದು ತಾವು ಆ ವೀರರಿಗೆ ಕೊಡುವ ಗೌರವವೆಂದೇ ಪರಿಗಣಿಸಲಾಗುತ್ತದೆ.

**ಹರಕೆ :**

ವೀರನಾಯಕರ ಸಂಪ್ರದಾಯ ಆಚರಣೆಗಳಲ್ಲಿ ಹರಕೆ ಪ್ರಮುಖವಾದದ್ದು. ಇದು ಸಾಮಾನ್ಯವಾಗಿ ಎಲ್ಲಾ ವೀರರ ಹೆಸರಿನಲ್ಲಿಯೂ ನಡೆವ ಆಚರಣೆಯಾಗಿದೆ. ಮಾಂಸಹಾರಿ ಹಾಗೂ ಸಸ್ಯಹಾರಿ ಎರಡೂ ಬಗೆಯವರಿಗೂ ಇದು ಸಂಬಂಧಿಸಿರುತ್ತದೆ. ಸಸ್ಯಹಾರಿ ವೀರರಿಗೆ ಆರತಿ ಮಾಡುವ, ಹೂವಿನ ತುಲಾಭಾರ ಕೊಡುವ ಎಣ್ಣೆಕಾಳುಗಳು, ತುಪ್ಪ ಕೊಡುವ, ಅಕ್ಕಿ ಬೇಳೆ ಕೊಡುವ ಹೀಗೆ ತಮಗೆ ಇಷ್ಟಬಂದ ಹರಕೆ ಹೊತ್ತು ತಮ್ಮ ಕಷ್ಟಗಳು ತೀರಿದಾಗ ಆ ಹಕರೆಯನ್ನು ತೀರಿಸುತ್ತಾರೆ. ಮಾಂಸಹಾರಿ ವೀರರಿಗೆ ಆರತಿ, ಬೇಟೆ, ಕೋಳಿ, ಕುರಿ, ಮೇಕೆಗಳ ಬಲಿ, ಮಂಡೆಸೇವೆ, ಉತ್ಸವ ಹೊರಡಿಸುವ ಹಕರೆಗಳನ್ನು ಕಟ್ಟಿಕೊಳ್ಳುವ ಪದ್ಧತಿ ರೂಢಿಯಲ್ಲಿದೆ. ಮಾಗೋಡುರಂಗನಿಗೆ ಹೂವಿನ ಹರಕೆ ಕೊಡುವುದು ಸಾಮಾನ್ಯವಾದರೆ, ಜುಂಜಪ್ಪನಿಗೆ ಎಣ್ಣೆಯ ಹರಕೆ, ಪುರ್ಲಹಳ್ಳಿ ಭೂತಪ್ಪನಿಗೆ ಬಲಿಯ ಹರಕೆ ಮಾಡುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಮಾಗೋಡು ರಂಗನಿಗೆ ತಮ್ಮ ಕಷ್ಟಗಳು ಪಾರಾಗುವವರೆಗೂ ದೇವಸ್ಥಾನದಲ್ಲಿಯೇ ವರ್ಷಾನುಗಟ್ಟಲೆ ವಾಸ್ತವ್ಯ ಹೂಡುವುದು ಇದೆ. ಬರಗೂರು ವೀರಮ್ಮಳಿಗೆ ತಲೆಮುಡಿ ಅಥವಾ ಮಂಡೆಸೇವೆ ಮಾಡುವುದು ಹೀಗೆ ತಮ್ಮ ಮನಬಂದ ಹರಕೆ ಹೊತ್ತು ವೀರರೊಂದಿಗೆ ಸಾಂಸ್ಕೃತಿಕ ಸಂಬಂಧ ಬೆಳೆಸಿಕೊಂಡು ಭಾವನಾತ್ಮಕವಾಗಿ ನಡೆದಕೊಳ್ಳುವುದನ್ನು ಕಾಣಬಹುದು.

ಯಾರಿಗಾದರು ಹಾವು ಕಚ್ಚಿದ ಸಂದರ್ಭದಲ್ಲಿ ತಾನು ಜೀವಂತವಾಗಿ ಉಳಿದರೆ ಚಿನ್ನದ ಅಥವಾ ಬೆಳ್ಳಿಯ ಹಾವನ್ನು ಅರ್ಪಿಸುವುದಾಗಿ ಜುಂಜಪ್ಪನಿಗೆ ಹರಕೆ ಮಾಡಿಕೊಳ್ಳುತ್ತಾರೆ. ತಾನು

ಒಡೆದರೆ ತಪ್ಪದೆ ಹರಕೆ ತೀರಿಸುತ್ತೇನೆ. ಹಾಗೆಯೇ ಚೇಳು ಕಚ್ಚಿದರೆ ಚಿನ್ನ ಅಥವಾ ಬೆಳ್ಳಿಯ ಚೇಳನ್ನು, ಮಂಡರಗಪ್ಪೆ ಕಡಿದರೆ ಚಿನ್ನ ಅಥವಾ ಬೆಳ್ಳಿಯ ಮಂಡರಗಪ್ಪೆಯನ್ನು ಹರಕೆಯಾಗಿ ಒಪ್ಪಿಸುವ ಪದ್ಧತಿ ಇದೆ.

ಕಾಡುಗೊಲ್ಲರ ಪುರಾಣದಲ್ಲಿ ಪ್ರಸ್ತಾಪವಿರುವಂತೆ ಒಮ್ಮೆ ತನ್ನ ಅನುಮತಿ ಇಲ್ಲದೆ ಬಡಚಿತ್ತಮ್ಮ ಜುಂಜಪ್ಪ ದೇವರಿಗೆ ಗಂಗಾಸ್ನಾನ ಮಾಡಿಸಿದ ಸಂದರ್ಭದಲ್ಲಿ, ಆ ದೇವರ ಮೇಲೆ ಕೋಪಗೊಂಡ ಗಿಡ್ಡೀರೇಗೌಡ ಆ ದೇವರನ್ನು ತೆಗೆದುಕೊಂಡು ಹೋಗಿ ಸೀರ್ಯಾದ ರಂಗಣ್ಣನ ಹೂವಿನ ತೋಟದಲ್ಲಿ ಗುಂಗೆಹುಳುಗಳ ಪೆಂಟೆಯಲ್ಲಿ ಇಡುತ್ತಾನೆ. ಗುಂಗೆಹುಳುಗಳಿಂದ ಕಡಿಸಿಕೊಳ್ಳುವುದು ಅಸಾಧ್ಯವಾದಾಗ ತನಗೆ ಮೂರು ದಿನಗಳ ಕಾಲ ಸಿರಾದ ಕುರುಬರ ಕೇರಿಯಲ್ಲಿ ಆರಾಮವಾಗಿ ಮಲಗಲು ಅವಕಾಶ ಕೊಟ್ಟರೆ ತಾನು ಸಿರಾದ ದುರ್ಗಮ್ಮನಿಗೆ ಸಾವಿರ ಕುರಿ, ಸಾವಿರ ಕೋಣಗಳನ್ನು ಕಡಿಸಿ ಜಾತ್ರೆ ಮಾಡಿಸುವುದಾಗಿ ಜುಂಜಪ್ಪ ಹರಸಿಕೊಂಡು ತನ್ನ ಬಯಕೆ ಈಡೆರಿಸಿದ ಮೇಲೆ ಕುತಂತ್ರದಿಂದ ಸಿರಾದ ರಂಗಣ್ಣನ ಮೂಲಕ ಹರಕೆಯನ್ನು ತೀರಿಸುತ್ತಾನೆ. ಇಲ್ಲಿ ಜುಂಜಪ್ಪ ದೇವರೂ ತನ್ನ ಕಷ್ಟ ಕಾಲದಲ್ಲಿ ಹರಕೆ ಮಾಡಿಕೊಂಡು ಆನಂತರ ಅದನ್ನು ತೀರಿಸಿದ ಎಂಬ ಅಂಶ ಮುಖ್ಯವಾಗುತ್ತದೆ.[೧೦]

ಕಾಡುಗೊಲ್ಲ ಜನಾಂಗದಲ್ಲಿ ಜುಂಜಪ್ಪ ಎತ್ತಪ್ಪರ ಉತ್ಸವ, ಜಾತ್ರೆಗಳಲ್ಲಿ ಹಾಲು ಮೀಸಲು ಹರಕೆಯನ್ನು ಒಪ್ಪಿಸುತ್ತಾರೆ. ಅತ್ಯಂತ ಮಡಿ ಮೈಲಿಗೆಯಿಂದ ಒಂದು ಗಡಿಗೆಯ ತುಂಬ ಹಾಲನ್ನು ಕರೆದುತಂದು ವೀರರಿಗೆ ಅರ್ಪಿಸಿ ನಂತರ ಅದನ್ನು ಭಕ್ತಾದಿಗಳಿಗೆ ಹಂಚಲಾಗುತ್ತದೆ. ಇದನ್ನು 'ಘಟಪೂಜೆ' ಎಂತಲೂ ಕರೆಯುತ್ತಾರೆ.

ಬೇವಿನಹಳ್ಳಿ ಕರಿಯಮ್ಮಳಿಗೆ ಬೇವಿನ ಉಡುಗೆ ಉಡುವ ಹರಕೆಯುಂಟು. ಕರ್ನಾಟಕದ ಇತರ ಭಾಗಗಳ ಗ್ರಾಮದೇವತೆಗಳಿಗೆ ಉಡುವಂತೆಯೇ ಈ ಭಾಗದಲ್ಲಿಯೂ ಏನಾದರೂ ಖಾಯಿಲೆಯಾದಾಗ, ಮೈಮೇಲೆ 'ಅಮ್ಮ ಎದ್ದಾಗ' ಈ ಹರಕೆ ಮಾಡಿಕೊಳ್ಳುವರು. ಗಂಡಸರು ಹೆಂಗಸರು ಎಂಬ ಭೇದ ಭಾವವಿಲ್ಲದೆ ಜಾತ್ರೆಯ ಸಂದರ್ಭದಲ್ಲಿ ಬೇವಿನ ಉಡುಗೆಯನ್ನು ಉಟ್ಟು ಮಾರಿಯ ಗುಡಿ ಸುತ್ತಲೂ ಪ್ರದಕ್ಷಿಣೆ ಹಾಕುತ್ತಾರೆ. ಕೆಲವರು ತಮ್ಮಟೆ ಅಥವಾ ಉರುಮೆಯ ವಾದ್ಯಕ್ಕೆ ಹೆಜ್ಜೆಹಾಕಿ ಕುಣಿಯುತ್ತಾರೆ.

ಜನರಿಗೆ ಏನಾದರೂ ತೊಂದರೆಗಳಾದಾಗ ಅದರ ನಿವಾರಣೆಯಾಗಲೆಂದು ಪುರಲೇಹಳ್ಳಿ ಬೂತಪ್ಪ, ಬೇವಿನಹಳ್ಳಿ ಕರಿಯಮ್ಮಳಿಗೆ ಕೋಳಿ, ಕುರಿ, ಮೇಕೆ ಬಲಿಕೊಡುವ ಹರಕೆ ಮಾಡಿಕೊಳ್ಳುತ್ತಾರೆ. ಜಾತ್ರೆ ಉತ್ಸವಗಳ ಸಂದರ್ಭದಲ್ಲಿ ಆ ಹರಕೆಯನ್ನು ತೀರಿಸುತ್ತಾರೆ. ಕೆಲವರು ತಮ್ಮ ತೊಂದರೆಗಳು ನಿವಾರಣೆಯಾದರೆ ಜಾತ್ರೆಯನ್ನು ನಡೆಸುವುದಾಗಿ ಹರಕೆ ಮಾಡಿಕೊಳ್ಳುತ್ತಾರೆ.

ಸಾಂಕ್ರಾಮಿಕ ರೋಗಗಳು ಬಂದಾಗ ಗ್ರಾಮಸ್ಥರ ಪರವಾಗಿ ಗ್ರಾಮದ ಮುಖ್ಯಸ್ಥರು ಪೂಜೆ ಮಾಡಿಸಿ ಜಾತ್ರೆ ಅಥವಾ ಉತ್ಸವ ಮಾಡುವುದಾಗಿ ಹರಕೆ ಮಾಡಿಕೊಳ್ಳುವರು. ವೈಯಕ್ತಿಕವಾಗಿಯೂ ಜನರು ಜಾತ್ರೆ ನಡೆಸುವ ಹರಕೆ ಹೊರುತ್ತಾರೆ. ಜುಂಜಪ್ಪ, ಕರಿಯಮ್ಮ ವೀರಮ್ಮ, ರಂಗನಾಥನ ಜಾತ್ರೆಗಳನ್ನು ಭಕ್ತರು ಈ ರೀತಿ ಹರಕೆಹೊತ್ತು ನಡೆಸಿಕೊಡುತ್ತಾರೆ.

ತೊಂದರೆಗಳು ನಿವಾರಣೆಯಾಗಲೆಂದು ಉರುಳುಸೇವೆ ಮಾಡುವ ಹರಕೆಯನ್ನು ಸಹ ಮಾಡುತ್ತಾರೆ. ಕೆಲವರು ತೊಂದರೆಯಲ್ಲಿದ್ದಾಗ, ಕೆಲವರು ತೊಂದರೆ ತೀರಿದಾಗ ತೊಟ್ಟ ಬಟ್ಟೆಯ ಮೇಲೆಯೇ ತಣ್ಣೀರು ಸುರಿದುಕೊಂಡು ದೇವಸ್ಥಾನದ ಸುತ್ತ ನೆಲದಮೇಲೆ ಉರುಳುವ ಮೂಲಕ ಈ ಹರಕೆ ತೀರಿಸುತ್ತಾರೆ. ವೀರಮ್ಮ, ಕರಿಯಮ್ಮ, ರಂಗನಾಥ, ಜುಂಜಪ್ಪ ಮೊದಲಾದವರ ಭಕ್ತರಲ್ಲಿ ಈ ಹರಕೆ ರೂಢಿಯಲ್ಲಿದೆ.

**ಸತಿಪದ್ಧತಿ :**

ನಮ್ಮ ಸಮಾಜದಲ್ಲಿ ಆಚರಣೆಯಲ್ಲಿದ್ದ ದುಷ್ಟ ಪದ್ಧತಿಗಳಲ್ಲಿ ಸತಿ ಸಹಗಮನವೂ ಒಂದು. ಇದು ಸಿರಾ ಸೀಮೆಯಲ್ಲಿಯೂ ಒಂದು ಕಾಲದಲ್ಲಿ ವಿಜೃಂಬಿಸಿದೆ. ಇದಕ್ಕೆ ನಿದರ್ಶನವಾಗಿ ಸಾಕಷ್ಟು ಸತಿಕಲ್ಲುಗಳು ಬರಗೂರು, ಮದಲೂರು, ಹುಯ್ಯಲದೊರೆ ಮೊದಲಾದ ಕಡೆಗಳಲ್ಲಿ ಲಭಿಸುತ್ತವೆ. ಅವುಗಳಲ್ಲೊಂದು ಬರಗೂರು ವೀರಮ್ಮನ ಐತಿಹ್ಯ. ಅಂದು ಸತಿಯಾದ ವೀರಮ್ಮಳನ್ನು ಇಂದು ಗ್ರಾಮ ದೇವತೆಯಾಗಿ ಆರಾಧಿಸುತ್ತಿದ್ದಾರೆ. ಅದೃಷ್ಟವಶಾತ್ ಆಕೆಯ ಭಕ್ತರಲ್ಲಿ ಇಂದು ಈ ಸತಿ ಸಂಪ್ರದಾಯವಿಲ್ಲ. ಹಿಂದೆ ಇದೊಂದು ದುಷ್ಟ ಶಾಪವಾಗಿ ಗಂಡನ ಜೊತೆಯಲ್ಲೆ ಜೀವಂತವಾಗಿ ಸುಟ್ಟುಹಾಕುವ ಕ್ರೂರ ಕಾಲದಲ್ಲಿ ಮಹಿಳೆ ವಿಚಿತ್ರವಾದ ರೀತಿಯಲ್ಲಿ ಪ್ರತಿರೋಧವನ್ನು ಬಿಂಬಿಸುತ್ತಿದ್ದಳು ಎಂದು ಡಾ. ಮೊಗಳ್ಳಿ ಗಣೇಶ್‌ರವರು ಅಭಿಪ್ರಾಯ ಪಡುತ್ತಾರೆ.[೨] ಮುಂದುವರೆದು ಸತೀ ಗೀತೆಯಲ್ಲಿ ಸಾವನ್ನು ವೈಭವೀಕರಿಸಿ ಹಾಡುತ್ತಾ ಹಾಡುತ್ತಾ ಕೊಲ್ಲುವವರನ್ನೇ ಪ್ರೀತಿಯಿಂದ ಮಾತನಾಡಿಸಿ ಬೆಂಕಿಗೆ ಬೀಳುತ್ತಿದ್ದ ರೀತಿಯನ್ನು ನೋಡಿದರೆ ಹತಾಶೆಯ, ಸಂಕಟದ, ಅಳಲಿನ ಹಾಡಿನ ಆಳದಲ್ಲಿ ವ್ಯವಸ್ಥೆಯ ವಿರುದ್ಧ ತಿರಸ್ಕಾರವೇ ಇತ್ತೆಂದು ಕಾಣುತ್ತದೆ. ತವರಿನ ನೆಪದಲ್ಲಿ ಭಾರತೀಯ ಮಹಿಳೆ ಪುರುಷ ಪ್ರಭುತ್ವವನ್ನು ವರ್ಣಮಯವಾಗಿ ಅದ್ದೂರಿಯಾಗಿ ಹಾಗೆಯೇ ವಿಶಾದದಿಂದ ಆಳಿದ ಕಿಚ್ಚಿನಿಂದ ಸಂಕಟದಿಂದ ಉರಿಯಿಂದ ನಿವೇದಿಸುತ್ತಾಳೆ.

ಬರಗೂರು ವೀರಮ್ಮನ ಪದಗಳು ಹಾಗೂ ಕಥೆ ಮಹಿಳಾ ಜಗತ್ತಿನ ನೋವನ್ನು ಪ್ರತಿಪಾದಿಸುತ್ತದೆ. ವೀರಮ್ಮ ಎಂಬ ಹೆಸರಿನ ಹಿಂದೆ ಬಲಿಪಶುವಾದ ಹೆಣ್ಣಿನ ಅರ್ತಧ್ವನಿ ಅಡಗಿದೆ. ಪುರುಷ ಪ್ರಧಾನ ಸಮಾಜದಲ್ಲಿ ಏಕಾಂಗಿಯಾಗಿ ತನಗೆ ಒಪ್ಪಿಗೆ ಇಲ್ಲದಿದ್ದರೂ ಅಸಹಾಯಕಳಾಗಿ, ಅನಾಥಳಾಗಿ ಕೊನೆಗೆ ಅನಿವಾರ್ಯವಾಗಿ ತನ್ನ ಪ್ರತಿರೋಧ ಶಕ್ತಿಯನ್ನು

ಉಳಿಸಿಕೊಳ್ಳುವುದಕ್ಕಾಗಿ ವೀರಮ್ಮ ಸತಿಯಾಗುತ್ತಾಳೆ. ಸತಿಯಾಗಲು ಅವಳು ತೆಗೆದುಕೊಳ್ಳುವ ತೀರ್ಮಾನದಲ್ಲೇ ಒಂದು ಸಮಾಜವನ್ನು ಟೀಕಿಸುವ ವ್ಯಂಗವಿದೆ. ಈ ವ್ಯಂಗದ ಕುರುಹಾಗಿಯೇ ಅವಳು ತನ್ನ ಗಂಡನ ಮನೆಯವರಿಗೆ ಕೊಡುವ ಶಾಪ ಪ್ರಸಂಗ ಬರುತ್ತದೆ.

ಕಲ್ಲಹಳ್ಳಿ ಹಾಳಾಗಿ
ಕದಿರೆಹಳ್ಳಿ ಊರಾಗಿ
ಬರಗೂರು ಚಿನ್ನಪಟ್ಟಣವಾಗಲೆಂದು
ಕನ್ನೆ ವೀರಮ್ಮ ಮೆರೆದಾಳು||

ಅತ್ತ ಮಾತೃ ನೆಲೆಯೂ ಇಲ್ಲದೆ, ಪಿತೃ ನೆಲೆಯೂ ಇಲ್ಲದೆ ಒಂಟಿಯಾಗುವ ದೀನ ಸ್ಥಿತಿಯಲ್ಲಿ ಮತ್ತೊಂದು ವಿಸಿಷ್ಟ ಜಗತ್ತನ್ನು ಆ ಹಾಡುಗಳಲ್ಲಿ ಕಟ್ಟುತ್ತಾಳೆ. ಗಂಡ ಸತ್ತ ಮೇಲೆ ಆತನ ಮಡದಿಯರು ಬದುಕಬಾರದು ಎಂಬ ನಂಬಿಕೆ ವೀರಮ್ಮಳನ್ನು ಕಾಡಿದೆ. ಅದನ್ನು ಜನಪದ ಈ ರೀತಿ ದಾಖಲಿಸುತ್ತದೆ.

ಗಂಡ ಸತ್ತ ಮೇಲೆ ಕಂದ ಯಾರದಪ್ಪ
ಬಿಂದಿಗೆ ಹೊನ್ನು ನನಗ್ಯಾಕೆ ಗಂಡನಿಂದೆ
ಹೋದಾರೆ ಭಾರಿ ಪುಣ್ಯಾವ ಪಡೆದೇನು

ಮೇಲು ನೋಟಕ್ಕೆ ಈ ಹಾಡುಗಳು ಪುರುಷ ಮೌಲ್ಯದ ಪರವಾಗಿರುವಂತೆ ಕಂಡರೂ, ಹಾಗೆ ಪುರುಷ ನೆಲೆಯನ್ನು ಹೇಳುವ, ಪ್ರತಿಪಾದಿಸುವ ದಾಟಿಯಲ್ಲಿ ವಿಶಾದ ವ್ಯಂಗ್ಯವಿದೆ. ಎಷ್ಟೋ ಬಾರಿ ತನಗೆ ಒಪ್ಪಿಗೆ ಇಲ್ಲದ್ದನ್ನು ವೈಭವೀಕರಿಸುವುದು ಎಲ್ಲಾ ಅನಾಥ, ಅಸಹಾಯಕ ಮಹಿಳೆಯರ ಒಂದು ಗುಟ್ಟು ಹಾಗೂ ಪ್ರತಿರೋಧವಾಗಿದೆ. ಇದಕ್ಕೆ ಸತಿ ಹೋಗುವ ಕಥೆಗಳ ವಸ್ತು ವಿಷಯವೆಲ್ಲ ಅವುಗಳ ವಿರುದ್ಧವಾಗಿರುವಂತೆ ಕಂಡರೂ ಅದರಲ್ಲೇ ಅದನ್ನು ದಿಕ್ಕರಿಸುವ ಸುಳಿವೂ ಇದೆ. ಬಹಳ ಸೂಕ್ಷ್ಮವಾಗಿ ದುರಂತಕ್ಕೆ ಒಳಗಾದ ಎಲ್ಲ ಮಹಿಳೆಯರ ಸಂಸ್ಕೃತಿಗಳಾಗಿ ಈ ಕಥನ ಗೀತೆಗಳು ಹುಟ್ಟಿಕೊಂಡಿವೆ. ಸತ್ತಿ ಹೋದವರ ಎಲ್ಲ ಕಥನಗಳಲ್ಲೂ ಮಹಿಳಾ ಸಂವೇದನೆಯ ಸ್ಮೃತಿಗಳು ದಟ್ಟವಾಗಿ ಹಬ್ಬಿವೆ. ಹಾಗೆಯೇ ಭಾರತದ ಮಹಿಳಾ ಲೋಕದ ದುರಂತ ಪ್ರಜ್ಞೆಯನ್ನು ಕಾಣಬೇಕಾದರೆ ಈ ದುರಂತ ಕಥನ ಗೀತೆಗಳಲ್ಲೇ ನೋಡಲು ಸಾಧ್ಯ. ದುಃಖ, ವಿರಹ, ಒಂಟಿತನ, ದುರಂತ ಪ್ರಜ್ಞೆಗಳು ಕಥನ ಗೀತೆಗಳಲ್ಲಿ ಅನನ್ಯವಾಗಿ ದಾಖಲಾಗಿವೆ. ಇಡೀ ಸಮಾಜ ಹೇಗೆ ತನ್ನನ್ನು ಬೆಂಕಿಯಲ್ಲಿ ಎಸೆದು ಬೇಯಿಸುತ್ತದೆ ಎಂಬ ವರ್ಣನೆಯನ್ನು ಯಾಕೆ ಮೈದುಂಬಿ ಎಲ್ಲರ ಎದಿರೂ ಹಾಡುತ್ತಾಳೆ ಎಂಬುದನ್ನು ಪ್ರತ್ಯೇಕವಾಗಿ ಗಮನಿಸಬೇಕಾಗಿದೆ. ಸತಿ ಹೋಗುವ ವೇಳೆಯಲ್ಲಿ ಅನೇಕ ಹೆಂಗಸರು ಬೀದಿಯುದ್ದಕ್ಕು ಸತಿ ಪದಗಳನ್ನು ಎತ್ತರದ ದನಿಯಲ್ಲಿ ಹಾಡುತ್ತಾ ಹಾಗೆ

ವೈಭವೀಕರಿಸಿ ಹಾಡುತ್ತಲೇ ಅಳುತ್ತಲೆ ಜನಕ್ಕೆ ಮುಟ್ಟಿಸುವ ಕ್ರಮವೇ ವಿಶಿಷ್ಟವಾದದ್ದು. ದುಃಖವನ್ನು, ದುರಂತವನ್ನು ದುಃಖದಿಂದಲೇ ಪ್ರತಿಭಟಿಸುವ ಈ ವಿಧಾನ ಬೇರೆ ಯಾವ ಸಂಸ್ಕೃತಿಯಲ್ಲೂ ಕಂಡುಬರುವುದಿಲ್ಲವೆನಿಸುತ್ತದೆ ಎಂಬ ಡಾ.ಮೊಗಳ್ಳಿ ಗಣೇಶ್‌ರವರು ಅಭಿಪ್ರಾಯ ಅರ್ಥಪೂರ್ಣವಾಗಿದೆ.

ವೀರಮ್ಮನ ನೆನಪಿನಲ್ಲಿ ಇಂದು ಆಚರಿಸುವ ಎಲ್ಲಾ ಸಂಪ್ರದಾಯಗಳ ಹಿಂದೆ ಪುರುಷ ಪ್ರಧಾನ ವ್ಯವಸ್ಥೆಯನ್ನು ಎದುರಿಸಿನಿಂತ ಹೆಣ್ಣೊಬ್ಬಳ ಕಥಾನಕವಿದೆ. ಜನ ಇಂದು ಅವಳನ್ನು ಸ್ಮರಿಸುವುದೂ ಅವಳ ಆ ಪ್ರತಿರೋಧ ಶಕ್ತಿಯನ್ನು ನೆನೆದೇ. ವೀರಮ್ಮಳ ಆ ಪ್ರತಿಭಟನಾ ಗುಣ ಉಳಿದ ಮಹಿಳೆಯರಿಗೆ ವೀರ ಮೌಲ್ಯವೆನಿಸಿತು. ಸತಿ ಬಗೆಗಿನ ಆಚರಣೆ, ನಂಬಿಕೆ, ಸಂಪ್ರದಾಯ ಹಾಗೂ ಕಥನಗಳನ್ನು ಅಭ್ಯಾಸ ಮಾಡುವ ಸಂದರ್ಭದಲ್ಲಿ ಇಂಥ ಕಥಾನಕಗಳ ಪಾತ್ರದ ಸ್ಥಿತಿಯನ್ನು ಎಚ್ಚರಿಕೆಯಿಂದ ನೋಡಬೇಕು. ಸತಿ ಹೋಗಬೇಕಾದವರ ಸ್ಥಿತಿ ಹೇಗಿತ್ತೆಂದು ಅನೇಕ ಯೂರೋಪಿಯನ್ ಪ್ರವಾಸಿಗಳು ಆ ಕಾಲದಲ್ಲೇ ಬರೆದಿಟ್ಟು ಹೋಗಿದ್ದಾರೆ. ಸತಿ ಪದ್ಧತಿಯನ್ನು ವಿರೋಧಿಸಿದ ವೀರಮ್ಮ ಹೊಗಳಿದ್ದಾರೆ. ಸತಿ ಪದ್ಧತಿಯನ್ನು ವಿರೋಧಿಸಿದ ವೀರಮ್ಮ ಇಡೀ ತನ್ನ ಸಮುದಾಯದಿಂದ ತಿರಸ್ಕಾರ, ನಿಂದನೆ ಹಾಹೂ ಹಿಂಸೆಗಳಿಗೆ ಒಳ ಪಡಬೇಕಾಯಿತು. ತಂದೆ-ತಾಯಿ, ಬಂಧು-ಬಳಗ, ಗಂಡನ ಮನೆಯ ಅತ್ತಿಗೆ ನಾದಿನಿಯರು ಎಲ್ಲರಿಂದಲೂ ತಿರಸ್ಕಾರಕ್ಕೆ ಒಳಗಾಗಬೇಕಾಯಿತು. ಇಂತಹ ಉಸಿರುಕಟ್ಟುವ ವಾತಾವರಣದಲ್ಲಿ ಎಷ್ಟು ದಿನ ಬದುಕಿರುವುದು ಬದುಕಿದ್ದೂ ಸಾದಿಸುವುದಾದರೂ ಏನು, ಸಮಾಜದ ಈ ಕೌರ್ಯವೇ ಬಲವಂತವಾಗಿ ಆಕೆ ಸತಿ ಹೋಗಲು ತೆಗೆದುಕೊಂಡ ತೀರ್ಮಾನಕ್ಕೆ ಕಾರಣ, ಈ ಮೊದಲು ಈ ದುಷ್ಟ ಸಂದರ್ಭದಿಂದ ಪಲಾಯನಗೈದದ್ದರಿಂದಲೇ ಆಕೆ ಅನಾಥಳಾಗಿ ಒಬ್ಬಂಟಿಗಳಾಗಿ, ಅಸಹಾಯಕಳಾಗಿ, ದುಃಖ ವಿರಹಗಳಿಂದ ಊರೂರು ಸುತ್ತಬೇಕಾಗಿಬಂತು. ಈ ಅಲೆಮಾರಿ ಬದುಕೇ ಅವಳ ಸತಿ ಹೋಗುವ ತೀರ್ಮಾನಕ್ಕೆ ಹಿನ್ನೆಲೆಯಾಗಿ ನಿಂತಿದ್ದು.

ಸತಿ ಹೋಗುವ ಮೆರವಣಿಗೆಯಲ್ಲಿ ಆಕೆ ಬಂದು ಬೆಂಕಿಯಲ್ಲಿ ಜಿಗಿಯಲು ಅನುಕೂಲವಾಗಲಿ ಎಂದು ವೀಳ್ಯವನ್ನು ಕೊಟ್ಟು, ಅದರಲ್ಲಿ ಅಫೀಮನ್ನು ತುಂಬುತ್ತಿದ್ದರಂತೆ. ಅದರ ರಸಕುಡಿದು ಅಗ್ನಿ ಕುಂಡಕ್ಕೆ ಬರುವ ವೇಳೆಗೆ ಮೂರ್ಛೆ ಹೋಗಿ ಬೆಂಕಿಗೂ, ಆ ಸಂಪ್ರದಾಯಕ್ಕೂ, ಊರಿಗೂ ಬೂದಿಯಾಗುತ್ತಿದ್ದಳು. ಬೆಂಕಿ ಸುಡುವಾಗ ಅವಳ ಚೀರಾಟ ಕೇಳದಿರಲೆಂದೇ ವಾದ್ಯಗಳನ್ನು ಜೋರಾಗಿ ನುಡಿಸಲಾಗುತ್ತದೆ. ಅವಳ ನರಳಾಟ ಕಾಣಬಾರದೆಂದು ಧೂಪ, ಸಾಂಬ್ರಾಣಿ ಮೊದಲಾದ ಹೊಗೆ ಬರುವ ಪದಾರ್ಥಗಳನ್ನು ಅಗ್ನಿಗೆ ಸುರಿಯಲಾಗುತ್ತಿತ್ತು. ಇಂತಹ ಮಹಿಳೆಯ ದುಃಖಗಾಥೆಯನ್ನು ಮಹಿಳೆಯರು ಸಂತೋಷದಿಂದ ಕಟ್ಟಿದ್ದಲ್ಲ ವಿಶಾದದಿಂದ ಕಟ್ಟಿದ್ದು ಇದು ಭಾರತೀಯ ಮಹಿಳೆಯ ಸಂವೇದನೆಯ ವಿಚಿತ್ರ ಸ್ಥಿತಿ ಎನ್ನುತ್ತಾರೆ ಮೊಗಳ್ಳಿ ಗಣೇಶ್‌ರವರು.

**ಮುಂಡೆಸೇವೆ :**

ಮುಂಡೆ ಸೇವೆಯನ್ನು ಚೌಲ ಎಂತಲೂ ಕರೆಯುತ್ತಾರೆ. ವೀರರನ್ನು ಮನೆ ದೇವರಾಗಿ ಸ್ವೀಕರಿಸಿರುವ ಭಕ್ತರು ವೀರರ ಗುಡಿ, ಸ್ಮಾರಕಗಳ ಬಳಿ ಈ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಕೆಲವೊಮ್ಮೆ ವೀರರಿಗೆ ಪೂಜೆ ಸಲ್ಲಿಸಿ ತೀರ್ಥ ಪ್ರಸಾದ ತಂದು ಮನೆಯಲ್ಲಿಯೇ ಈ ಕಾರ್ಯ ಮಾಡುತ್ತಾರೆ. ಈ ಸಂದರ್ಭದಲ್ಲಿ ನೆಂಟರಿಷ್ಟರನ್ನು ಕರೆದು ಊಟ ಕೊಡಲಾಗುತ್ತದೆ. ವೀರರಿಗೆ ಕೂದಲನ್ನು ಅರ್ಪಿಸುವ ಕ್ರಿಯೆ ಭಕ್ತರ ಸಮರ್ಪಣಾ ಭಾವವನ್ನು ಪ್ರತಿನಿಧಿಸುತ್ತದೆ. ಮಂತ್ರವಾದಿಗೆ ತನ್ನ ತಲೆಗೂದಲನ್ನು ಕಿತ್ತು ಕೊಡುವುದನ್ನು ಹಳ್ಳಿಗಳಲ್ಲಿ ಇಂದಿಗೂ ಕಾಣಬಹುದು. ಹೀಗಾಗಿ ಕೂದಲು ಕೊಡುವುದಕ್ಕೆ ಸಮರ್ಪಣೆ ಇಲ್ಲವೆ ಶರಣಾಗತಿಯ ಅರ್ಥವಿದೆಯೆಂದು ಸ್ಪಷ್ಟವಾಗುತ್ತದೆ ಎಂಬುದಾಗಿ ಡಾ.ಎಂ.ಎಂ.ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ.[20] ಈ ಆಚರಣೆ ಬರಗೂರು ವೀರಮ್ಮ, ಬೊಪ್ಪರಾಯ, ಗುಡ್ಡದ ರಂಗನಾಥನ ಭಕ್ತರಲ್ಲಿ, ಮಾಗೋಡು ರಂಗನ ಭಕ್ತರಲ್ಲಿ ಕಾಣಬಹುದಾಗಿದೆ.

**ಆರತಿ :**

ಈ ಸಂಪ್ರದಾಯವನ್ನು ಮಾಗೋಡುರಂಗ, ಗುಡ್ಡದರಂಗ, ವೀರಮ್ಮ, ಬೊಪ್ಪರಾಯ, ಜುಂಜಪ್ಪ, ಎತ್ತಪ್ಪರ ಭಕ್ತರಲ್ಲಿ ಕಾಣಬಹುದು. ಒಂದು ತಪ್ಪಲೆ ಅಥವಾ ಬೋಗುಣಿ ಆಕಾರದ ಪಾತ್ರೆಯಲ್ಲಿ ತಂಬಿಟ್ಟನ್ನು ಮಾಡಿಟ್ಟು ಅದರ ಮೇಲೆ ದೀಪಹಚ್ಚಿ ಹೆಣ್ಣು ಮಕ್ಕಳು ವಾದ್ಯಗಳ ಜೊತೆಗೆ ಮೆರವಣಿಗೆಯಲ್ಲಿ ತರುತ್ತಾರೆ. ಬರೀ ತಂಬಿಟ್ಟಿದ್ದಾಗ ಅದನ್ನು ತಂಬಿಟ್ಟಿನಾರತಿ ಎಂತಲೂ, ಬೆಲ್ಲ ಇದ್ದರೆ ಬೆಲ್ಲದಾರತಿ ಎಂತಲೂ, ದೀಪಗಳು ಮಾತ್ರ ಇದ್ದರೆ ದೀಪದಾರತಿ ಎಂತಲೂ ಕರೆಯುತ್ತಾರೆ. ಆರತಿಯ ಒಳಭಾಗದಲ್ಲಿ ಚಿಕ್ಕ ಚಿಕ್ಕ ಕಡ್ಡಿಗಳಿಗೆ ಹೂ ಏರಿಸಿ ಒಳಗೆ ಅಡಿಕೆ, ಎಲೆ, ಹೊಂಬಾಳೆ, ಬೇವು ಮೊದಲಾದವುಗಳಿರುತ್ತವೆ. ಮೆರವಣಿಗೆಯ ಮುಂಭಾಗದಲ್ಲಿ ಊರ ಮುಖಂಡನ ಆರತಿ ನಂತರ ಮೇಲ್ಜಾತಿಯವರ ಆರತಿ ನಂತರ ಮಧ್ಯಮ ಜಾತಿಯವರ ಆರತಿ, ಕೊನೆಯಲ್ಲಿ ಕೆಳಜಾತಿಯವರ ಆರತಿಗಳು ಬರುತ್ತವೆ. ವರ್ಷಕ್ಕೊಮ್ಮೆ ನಿರ್ಧಿಷ್ಟ ದಿನದಂದು ಈ ಸಂಪ್ರದಾಯ ನಡೆಯುತ್ತದೆ. ಕೆಲವೊಮ್ಮೆ ಊರಿನ ಅತಿವೃಷ್ಠಿ, ಅನಾವೃಷ್ಠಿ, ನೈಸರ್ಗಿಕ ವಿಕೋಪಗಳು, ಕಾಯಿಲೆಗಳು ಮೊದಲಾದವುಗಳು ಕಾಣಿಸಿಕೊಂಡರೆ ಈ ಆರತಿ ಸೇವೆ ನಡೆಯುವುದನ್ನು ಕಾಣಬಹುದು.

**ಬಾಯಿಗೆ ಬೀಗ :**

ಶಿರಾ ಸೀಮೆಯ ಮೊರಡಿ ಗುಡ್ಡದ ರಂಗನಾಥನ ಭಕ್ತರಲ್ಲಿ ಅಸ್ತಿತ್ವದಲ್ಲಿರುವ ಈ ಬಾಯಿಗೆ ಬೀಗ ಹಾಕಿಸಿಕೊಳ್ಳುವ ಸಂಪ್ರದಾಯ ಅತ್ಯಂತ ಭಯ ಹುಟ್ಟಿಸುವ ಉಗ್ರ ಆಚಾರಣೆಯಾಗಿದೆ.

ಇದು ರಂಗನಾಥನನ್ನು ಮನೆದೇವರಾಗಿಸಿಕೊಂಡಿರುವ ಕುಂಚಿಟಿಗ ಜನಾಂಗದ ಅಲ್ಪೇನವರಲ್ಲಿ ಮಾತ್ರ ಆಚರಣೆಯಲ್ಲಿದೆ. ತಾಮ್ರ ಅಥವಾ ಬೆಳ್ಳಿಯ ಕಡ್ಡಿಯಿಂದ ಎರಡೂ ಕೆನ್ನೆಗಳನ್ನು ಕೊರೆದು ನಾಲಿಗೆಯ ಮೇಲಿನಿಂದ ಕಡ್ಡಿ ದಾಟಿಸಿ ಆ ಕಡ್ಡಿಗೆ ಬೀಗ ಹಾಕಲಾಗುತ್ತದೆ. ಸಾಮಾನ್ಯವಾಗಿ ಹೀಗೆ ಬಾಯಿಗೆ ಬೀಗ ಹಾಕಿಸಿಕೊಳ್ಳುವವರು ಧೈರ್ಯ ಹಾಗೂ ಸಾಹಸಿಗರಾಗಿರುತ್ತಾರೆ. ಬಾಯಿಗೆ ಬೀಗ ಹಾಕಿದ ಸಂದರ್ಭದಲ್ಲಿ ಯಾರೊಂದಿಗೂ ಮಾತನಾಡದೆ ವಾದ್ಯದ ಗತ್ತಿಗೆ ಹೆಜ್ಜೆ ಹಾಕಿ ಕುಣಿಯುತ್ತಾರೆ. ಹೀಗೆ ಬೀಗ ಹಾಕಿಸಿಕೊಂಡವರಿಗೆ ಬಂಧುಗಳು ಹಾಗೂ ಮುಖಂಡರುಗಳು ಬಟ್ಟೆ ಹಣ ಮೊಲಾದ ಉಡುಗೊರೆಗಳನ್ನು ಕೊಡುತ್ತಾರೆ. ಮೊದಲು ಇದ್ದ ಈ ಸಂಪ್ರದಾಯ ಇತ್ತೀಚೆಗೆ ಕಂಡುಬರುತ್ತಿಲ್ಲ.

**ಮುಳ್ಳಿನ ಪಲ್ಲಕ್ಕಿ ಸೇವೆ :**

ಗುಡ್ಡದ ಹಟ್ಟಿ ರಂಗನಾಥನಿಗೆ ಸಲ್ಲುವ ಸೇವೆಗಳಲ್ಲಿ ಮುಳ್ಳಿನ ಪಲ್ಲಕ್ಕಿ ಸೇವೆಯೂ ಒಂದು. ಇದು ರಂಗನಾಥನ ಪೂಜಾರರಲ್ಲಿ ಮಾತ್ರ ಆಚರಣೆಯಲ್ಲಿದೆ. ರಂಗನಾಥನ ಜಾತ್ರೆಯ ದಿನದಂದು ಉಕ್ಕಿನ ಮುಳ್ಳಿನ ಪಲ್ಲಕ್ಕಿ ಮೇಲೆ ಬರೀ ಮೈಯ್ಯಲ್ಲಿ ಮಲಗಿ ಭಕ್ತಿ ಪ್ರದರ್ಶಿಸುವ ಸೇವೆ ಇದಾಗಿದೆ. ಇತ್ತೀಚಿನ ದಿನಗಳಲ್ಲಿ ಇಂತಹ ಕಠಿಣ ಸೇವೆಗಳು ಮರೆಯಾಗುತ್ತಿದ್ದರೂ ಇಲ್ಲಿ ಇನ್ನು ಜೀವಂತವಾಗಿದೆ. ಈ ದೇವಸ್ಥಾನದ ಪೂಜಾರ್ ರಾಮಲಿಂಗಪ್ಪನವರೇ ಹೇಳುವಂತೆ "ಬಿಸಿರಕ್ತವಿದ್ದಾಗ ಭಕ್ತಿಯ ಆವೇಶದಲ್ಲಿ ಹೀಗೆ ಮಾಡುತ್ತಾರೆ. ಆದರೆ ಅದರ ನೋವನ್ನು ದಿನಕಳೆದಂತೆ ವಯಸ್ಸಾದಾಗ ಅನುಭವಿಸುತ್ತಾರೆ. ಇದು ನಮ್ಮ ತಲೆಮಾರಿನ ನಂತರ ಕೊನೆಗೊಳ್ಳಬಹುದು. ಇಂತಹ ಕಷ್ಟಕರ ಸೇವೆಯನ್ನು ಕೈಬಿಡಬೇಕು ಇದರ ಅವಶ್ಯಕತೆ ಇಲ್ಲ. ಆದರೂ ಸಂಪ್ರದಾಯವನ್ನು ಬಿಡಬಾರದೆಂದು ಮುಂದುವರೆಸಿಕೊಂಡು ಬಂದೆವು ನಮ್ಮ ಮಕ್ಕಳ ಕಾಲಕ್ಕೆ ಇದು ನಡೆಯುವುದು ಬೇಡ ನಮ್ಮ ತಲೆಮಾರಿಗೇ ಕೊನೆಗೊಳ್ಳಲಿ" ಎನ್ನುತ್ತಾರೆ.

**ಹಾಲು ಮೀಸಲು :**

ಕಾಡುಗೊಲ್ಲ ಜನಾಂಗದಲ್ಲಿ ಎತ್ತಪ್ಪ ಜುಂಜಪ್ಪರಿಗೆ ಹಾಲು ಮೀಸಲು ಒಪ್ಪಿಸುವ ಸಂಪ್ರದಾಯವಿದೆ. ಪ್ರತಿ ಶುಕ್ರವಾರ ಎರಡು ಹೊತ್ತು ಮತ್ತು ಶನಿವಾರ ಒಂದು ಹೊತ್ತು 'ದೇವರ ಮೀಸಲು' ಎಂದು ಹೇಳಿ ಹಸು, ಎಮ್ಮೆ, ಕುರಿ, ಮೇಕೆ ಇವುಗಳ ಹಾಲನ್ನು ಪ್ರತ್ಯೇಕವಾಗಿ ಕರೆದು ಪ್ರತ್ಯೇಕವಾಗಿ ಹೆಪ್ಪು ಹಾಕುತ್ತಾರೆ. ಈ ಜವಾಬ್ದಾರಿಯನ್ನು ಒಬ್ಬ ವ್ಯಕ್ತಿಗೆ ವಹಿಸುತ್ತಾರೆ. ಅವನು ಸ್ನಾನ ಮಾಡಿ ಕರಿಯ ಕಂಬಳಿ ಹೊದ್ದು ಯಾರೊಡನೆಯೂ ಮಾತನಾಡದೆ ಹಾಲು ಕರೆಯಬೇಕು. ಪ್ರತಿಯೊಂದು ಮನೆಯಿಂದ ಹೀಗೆ ಮಡಿಯಿಂದ ಕರೆದು ತಂದ ಹಾಲನ್ನು ದೇವಸ್ಥಾನದ ಫೌಳಿಯ ಬಳಿ ಇರುವ 'ವಾರದ ಮನೆ' ಯಲ್ಲಿ ಇಟ್ಟಿರುವ ಹಂಡೆಯ ಗಾತ್ರದ ಮಡಿಕೆಗೆ ಸುರಿಯುತ್ತಾನೆ.

ವಾರದ ಹಾಲನ್ನು ಕಾಯಿಸುವ ಜವಾಬ್ದಾರಿಯನ್ನು ಒಬ್ಬ ಹೆಂಗಸಿಗೆ ವಹಿಸಿರುತ್ತಾರೆ. ಆಕೆ ಸ್ನಾನ ಮಾಡಿ ಹಾಲು ಕಾಯಿಸಿ ಹೆಪ್ಪು ಹಾಕುತ್ತಾಳೆ ಕೈಯಿಂದ ಮೊಸರನ್ನು ಕಡೆದು, ಬೆಣ್ಣೆ ಕಾಯಿಸಿ ತುಪ್ಪ ಮಾಡುತ್ತಾಳೆ. ಮೊಸರು ಕಡೆದು ಮಜ್ಜಿಗೆಯನ್ನು ಪ್ರತೀ ಮನೆಗೂ ಹಂಚುತ್ತಾಳೆ. ತುಪ್ಪವನ್ನು ವಾರದ ಮನೆಯಲ್ಲಿಯೇ ತುಂಬಿಡುತ್ತಾಳೆ. ಈ ತುಪ್ಪವನ್ನು ಯಾರೂ ಉಪಯೋಗಿಸುವಂತಿಲ್ಲ. ಇದು ದೇವರ ದೀಪಕ್ಕೆ ಮಾತ್ರ ಮೀಸಲು. ಇತ್ತೀಚೆಗೆ ಬಹುಪಾಲು ಹಾಲು ಮೀಸಲಿಗೆ ಸಂಬಂದಿಸಿದ ನಿಯಮಗಳು ಮೊದಲಿನಷ್ಟು ಕಟ್ಟು ನಿಟ್ಟಿನಿಂದ ಪಾಲನೆಯಾಗುತ್ತಿಲ್ಲ. ಅನೇಕ ಹಟ್ಟಿಗಳಲ್ಲಿ ಒಂದೊಂದು ಮನೆಯವರೇ ಪ್ರತ್ಯೇಕವಾಗಿ ಹಾಲು ಮೀಸಲು ಕರೆದು ಪ್ರತ್ಯೇಕವಾಗಿಯೇ ತುಪ್ಪವನ್ನು ಸಂಗ್ರಹಿಸಿ ದೇವರ ದೀಪಕ್ಕೆ ಹಾಕುತ್ತಾರೆ.

**ಗಣೆ ಸಂಪ್ರದಾಯ :**

ಜುಂಜಪ್ಪನ ಸಂಪ್ರದಾಯಗಳಲ್ಲಿ ಗಣೆ ಸಂಪ್ರದಾಯ ಪ್ರಮುಖವಾದ ಆಚರಣೆ, ಜುಂಜಪ್ಪನ ಸಂಪ್ರದಾಯದಲ್ಲಿ ಈ ಗಣೆಗೆ ಎಲ್ಲಿಲ್ಲದ ಮಹತ್ವ. ಗಣೆಯನ್ನು ಸಾಕ್ಷಾತ್ ಜುಂಜಪ್ಪನೆಂದೇ ಭಾವಿಸಲಾಗುತ್ತದೆ. ದಕ್ಷಿಣ ಕರ್ನಾಟಕದಲ್ಲಿ ಮಾದಯ್ಯನ ಕಥೆ ಹಾಡಲು ಕಂಸಾಳೆಗಳ ಗುಡ್ಡರಿರುವಂತೆ, ಮಂಟೆಸ್ವಾಮಿ ಕತೆ ಹಾಡಲು ನೀಲಗಾರರಿರುವಂತೆ, ಮೈಲಾರನ ಕತೆ ಹಾಡಲು ಡೊಳ್ಳಿನವರು, ಗೊರವಯ್ಯಗಳು ಇರುವಂತೆ ಎತ್ತಪ್ಪ ಜುಂಜಪ್ಪನ, ಈರಗಾರರ ಕತೆ ಹಾಡಲು ಗಣೆ ಕಲಾವಿದರೂ ಇದ್ದಾರೆ ಎನ್ನುತ್ತಾರೆ ಡಾ. ವೀರಸಾಬಿಹಳ್ಳಿ ಶಿವಣ್ಣನವರು.[೧೩] ಗಣೆಯಲ್ಲಿ ಎತ್ತಪ್ಪ ಈರಗಾರರು, ಈರ ಮುದ್ದಪ್ಪ, ಮಾಗೋಡು ರಂಗನ ಕಾವ್ಯಗಳನ್ನು ಹಾಡಿದರೂ ಗಣೆ ಕತೆಗೆ ಜುಂಜಪ್ಪನಿಂದಲೇ ವಿಶಿಷ್ಟ ಸ್ಥಾನ ಮಾನ ಬಂದಿರುವುದನ್ನು ಗುರ್ತಿಸಬಹುದು. ಗಣೆ ಕಥೆಗಳಲ್ಲಿ ಇಬ್ಬರಿಗೆ ಮಾತ್ರ ಅವಕಾಶ. ಒಬ್ಬ ಹಾಡುವವ ಇನ್ನೊಬ್ಬ ಗಣೆ ಊದುವವ. ಕರಿಯ ಕಂಬಳಿ ಗದ್ದುಗೆಯ ಮೇಲೆ ಕೂತು ಗಣೆಯೊಂದನ್ನಿಡಿದು ಒಬ್ಬ ಕತೆಯ ಏರಿಳಿತಕ್ಕೆ ತಕ್ಕಂತೆ ಮಧುರವಾಗಿ ನುಡಿಸುತ್ತಾ ಹೋದರೆ ಪದ ಹೇಳುವವ ಎರಡೂ ಕೈಗಳನ್ನು ಕಿವಿಯ ಮೇಲೆ ತಂದು ಕಣ್ಣು ಮುಚ್ಚಿ ಹಾಡುತ್ತಾ ಹೋಗುತಾನೆ. ಜುಂಜಪ್ಪನ ಕಥೆಯನ್ನು ಹಾಡುವ ಸಂದರ್ಭದಲ್ಲಿ ಮೊದಲು, ಕೊನೆಯಲ್ಲಿ ಹಾಗೂ ಮಧ್ಯ ಭಾಗದಲ್ಲಿ ಮತ್ತೆ ಗಣೆಗೆ ಪೂಜೆ ಸಲ್ಲುತ್ತದೆ ಕತೆ ಹಾಡುವಾಗ ಗಣೆಗೆ ವಿಭೂತಿ ಹಚ್ಚಿ ತಾವೂ ಹಚ್ಚಿಕೊಂಡು ಕಾಯಿಹೊಡೆದು ಊದುಬತ್ತಿ ಬೆಳಗಿ ಪೂಜೆ ಸಲ್ಲಿಸುತ್ತಾರೆ.

ಇತ್ತೀಚೆಗೆ ಗಣೆ ನುಡಿಸುವ ಗಣೆ ಕಲಾವಿದರು ಸಿಗುವುದು ಅಪರೂಪ. ಮಧುಗಿರಿ ತಾಲ್ಲೂಕು ಮಾಡ್ಗನಹಟ್ಟಿ ದಾಸಪ್ಪ ಈ ಗಣೆ ಕತೆಯಲ್ಲಿ ಕಂಡುಬರುವ ವಿಶಿಷ್ಟ ಕಲಾವಿದನಾದರೆ, ಸಿರಾ ತಾಲ್ಲೂಕಿನ ಓಜಗುಂಟೆ, ಕುಂಬಾರಹಳ್ಳಿ, ಬೇವಿನಹಳ್ಳಿ, ಕಳುವೊರಹಳ್ಳಿ, ಉಳಗೆರೆ ಗೊಲ್ಲರಹಟ್ಟಿ, ಗಿಡಗನಹಳ್ಳಿ, ದೇವರಹಟ್ಟಿ, ಲಕ್ಕವ್ವನಹಳ್ಳಿ ಗೊಲ್ಲರಹಟ್ಟಿ, ಮಗೋಡು, ಗುಬ್ಬಿ

ತಾಲ್ಲೂಕಿನ ಹಾಗಲವಾಡಿ ಮೊದಲಾದ ಭಾಗಗಳಲ್ಲಿ ಈ ಗಣೆ ಕಲಾವಿದರನ್ನು ಕಾಣಬಹುದು. ಸಿರಾ ತಾಲ್ಲೂಕಿನ ದೊಡ್ಡಬಾಣಗೆರೆಯ ಮಾರಕ್ಕ, ಮುತ್ತಕ್ಕ ಎಂಬ ಸೋದರಿಯರು, ಗಣೆ ಪದಗಳನ್ನು ಹಾಡುತ್ತಾರೆ. ಜುಂಜಪ್ಪ, ಎತ್ತಪ್ಪ, ಚಿತ್ರದೇವರ ಕಥಗಳನ್ನು ಮನೆಗಳಲ್ಲಿ ಮಾಡಿಸಿದರೆ ಮನೆಗೆ ಒಳ್ಳೆಯದಾಗುತ್ತದೆ. ಹಾಗೂ ಹಾವು, ಚೇಳು ಮೊದಲಾದ ವಿಷ ಜಂತುಗಳು ಕಾಣಿಸಿಕೊಳ್ಳುವುದಿಲ್ಲವೆಂಬ ನಂಬಿಕೆಯಿದೆ. ಕಥೆಯೊಡನೆ ಗಣೆ ನುಡಿಸುಲಾಗುವುದು. ಗಣೆ ನುಡಿಸುತ್ತಾ ದೇವರನ್ನು ಮೈಮೇಲೆ ಆಹ್ವಾನಿಸಿಕೊಳ್ಳುವುದೂ ಉಂಟು.

ಕಾಡು ಗೊಲ್ಲರಲ್ಲಿ ಕೆಲವರು ಜುಂಜಪ್ಪನ ದೀಕ್ಷೆಯನ್ನು ಪಡೆದು ಅವನ ಗಣೆಯನ್ನು ಹೊತ್ತು ಊರೂರು ಸುತ್ತುತ್ತಾ ಅವನ ಮಹಿಮೆಯನ್ನು ಪ್ರಚಾರ ಮಾಡುತ್ತಾರೆ. ಗಣೆಯವರು ಅಥವಾ "ಕಾಣಿಕೆಯವರು" ಎಂದು ಇವರನ್ನು ಕರೆಯಲಾಗುತ್ತದೆ. ಗಣೆಯವನ ಬಳಿ ಶಂಖ, ಜಾಗಟೆ ನಾಗಚಿತ್ತ ಇರುತ್ತದೆ. ಲೋಹದ ನಾಗರ ಹೆಡೆಗಳಿಂದ, ನವಿಲು ಗರಿಗಳಿಂದ ಅಲಂಕರಿಸಿದ ದೊಡ್ಡ ಬಿದಿರು ಕೋಲೇ ಈ ಗಣೆ. ಇದರ ತುದಿಯಲ್ಲೊಂದು ಗಂಟೆ ಗಣೆಯವನ ಕೊರಳಲ್ಲಿ ಒಂಟಿ ರುದ್ರಾಕ್ಷಿ, ಹಣೆಯಲ್ಲಿ ನಾಮ, ಊರೂರ ಮೇಲೆ ಇವನು ಹೋಗುತ್ತಾನೆ. ಹಾವು ಚೇಳು ತಮ್ಮ ಮಕ್ಕಳು ಮರಿಗಳಿಗೆ ಕಾಣಿಸಿಕೊಳ್ಳದಂತೆ ಜನ ಹರಕೆ ಕಟ್ಟಿಕೊಂಡು ಎಣ್ಣೆಗಡಿಗೆಗೆ ಕಾಸನ್ನು ಹಾಕಿರುತ್ತಾರೆ. ಗಣೆಯವನು ಬೀದಿಯಲ್ಲಿ ಜುಂಜಪ್ಪನ ಕಾಣಿಕೆ ಎಂದು ಬಂದು ಸಾರುತ್ತಾನೆ. ಆ ಕಾಸನ್ನು ಅವನಿಗೆ ಅರ್ಪಿಸುತ್ತಾರೆ. ಅದು ಹಾಗಲವಾಡಿ ಜುಂಜಪ್ಪನ ಪಾದಕ್ಕೆ ಸಲ್ಲಲೆಂದು ಅಥವಾ ಕಳವೂರಹಳ್ಳಿ ಜುಂಜಪ್ಪನ ಪಾದಕ್ಕೆ ಸಲ್ಲಲೆಂದು ಎಲ್ಲಾ ಜನಾಂಗದವರೂ ಈ ಕಾಣಿಕೆಯನ್ನು ಅರ್ಪಿಸುತ್ತಾರೆ.

ಗಣೆ ಸುಮಾರು ನಾಲ್ಕುವರೆ ಅಡಿ ಉದ್ದವಿರುತ್ತದೆ. ಬಿದಿರು ಕೋಲಿನ ಒಳಭಾಗದ ಕಾಂಡವನ್ನು ಸುಟ್ಟು ತೆಗೆಯಲಾಗುತ್ತದೆ. ಒಂದು ತುದಿಯ ಗೆಣ್ಣನ್ನು ತೆಗೆದರೆ ಮತ್ತೊಂದು ತುದಿಯ ಗೆಣ್ಣನ್ನು ತೆಗೆಯದೆ ಮುಚ್ಚಳಿಕೆಯ ರೀತಿಯಲ್ಲಿ ಬಿಟ್ಟಿರುತ್ತಾರೆ. ಮತ್ತೊಂದು ತುದಿಯ ರಂಧ್ರವನ್ನು ಮೇಣದಿಂದ ಭದ್ರಪಡಿಸುತ್ತಾರೆ. ಖಾಲಿ ಇರುವ ಬಿದಿರಿನ ಗೆಣ್ಣುಗಳಿಗೆ ಒಂದೊಂದರಂತೆ ನಾಲ್ಕೈದು ರಂಧ್ರಗಳನ್ನು ಕೊರೆದು ಮಧ್ಯ ಭಾಗದ ಒಂದು ರಂಧ್ರದಿಂದ ತುಟ್ಟಿಯಿಟ್ಟು ಊದುತ್ತಾರೆ. ಶ್ರೀಕೃಷ್ಣನ ಕೊಳಲಿನಂತೆಯೇ ಇರುವ ಗಣೆ ಕೊಳಲಿಗಿಂತ ದೊಡ್ಡದಾಗಿರುತ್ತದೆ. ಕೆಲವೊಂದು ಗಣೆ ಮೂರುನಾಲ್ಕು ಅಡಿಯಿಂದ ಐದಾರು ಅಡಿಗಳವರೆಗೆ ಉದ್ದವಿರುತ್ತದೆ. ಜುಂಜಪ್ಪ ಮೊದಲಾದ ವೀರರ ಕಥೆಗಳನ್ನು ಹಾಡುವ ಕಥೋಪಜೀವಿಗಳು ಗಣೆಯನ್ನು ಬಹು ಪವಿತ್ರವಾದ ವಸ್ತುವೆಂದು ಭಾವಿಸುತ್ತಾರೆ. ಅದಕ್ಕೆ ಹಿತ್ತಾಳೆಯ ಅಥವಾ ಬೆಳ್ಳಿಯ ಕಟ್ಟನ್ನು ಹಾಕಿಸುತ್ತಾರೆ. ಹಾಡುವ ಮೊದಲು ಅದನ್ನು ಪೂಜಿಸುತ್ತಾರೆ. ಅದಕ್ಕೆ ಮೈಲಿಗೆಯಾಗದಂತೆ ತುಂಬಾ ಎಚ್ಚರಿಕೆ ವಹಿಸುತ್ತಾರೆ. ಗಣೆಯನ್ನು ಊದಿ ಭವಿಷ್ಯ ಹೇಳುವುದೂ ಉಂಟು.

ಗಣೆ ಊದಿ ಶಾಸ್ತ್ರ ಹೇಳುವ ಸಂಪ್ರದಾಯ ಕಾಡುಗೊಲ್ಲರಲ್ಲಿದೆ ಎಂಬುದನ್ನು ತೀನಂ ಶಂಕರನಾರಾಯಣರವರು ಗುರುತಿಸಿದ್ದಾರೆ. ಕಾಡುಗೊಲ್ಲರು ವಾಸಿಸುವ ಕೆಲವು ಕಡೆಗಳಲ್ಲಿ ಗಣೆ ಊದಿ ಶಾಸ್ತ್ರ ಹೇಳುವ ಕೇಂದ್ರಗಳಿದ್ದು ಅದರಲ್ಲಿ ತುಂಬಾ ಪ್ರಸಿದ್ಧವಾದ ಕೇಂದ್ರವೆಂದರೆ ಹಿರಿಯೂರು ತಾಲ್ಲೂಕಿನ ಇಕ್ಕನೂರು. ಇಲ್ಲಿನ ಕಾಟಮದೇವರ ಪೂಜಾರಿ ಮತ್ತು ಅವನ ಸಹಾಯಕ ಬೆಳ್ಳಿಯ ತಗಡನ್ನು ಹೊದ್ದಿಸಿದ ಎರಡು ಉದ್ದವಾದ ಗಣೆಗಳನ್ನು ಊದಿ ಶಾಸ್ತ್ರ ಹೇಳುತ್ತಾರೆ. ಇಲ್ಲಿಗೆ ಕಾಡುಗೊಲ್ಲರು ಮಾತ್ರವಲ್ಲದೆ ಇತರ ಜನರೂ ಶಾಸ್ತ್ರ ಕೇಳಲು ಬಹು ದೂರದ ಊರುಗಳಿಂದ ಬರುತ್ತಾರೆ. ಇಲ್ಲಿನ ಪೂಜಾರಿ ಹೇಳುವ ಶಾಸ್ತ್ರ ನಿಜವಾಗುತ್ತದೆ ಎಂದು ಇಲ್ಲಿಗೆ ಬರುವ ಜನರೆಲ್ಲ ಹೇಳುತ್ತಾರೆ. ವಾರದ ಎಲ್ಲಾ ದಿನಗಳಲ್ಲಿಯೂ ಶಾಸ್ತ್ರ ಹೇಳುವುದಿಲ್ಲ. ಕೇವಲ ಭಾನುವಾರ, ಶುಕ್ರವಾರ ಮಾತ್ರ ಶಾಸ್ತ್ರ ಹೇಳುವ ಪದ್ಧತಿ ಇದೆ. ಈ ಎರಡು ದಿನಗಳಲ್ಲಿ ರಾತ್ರಿ ದೇವರ ಪೂಜೆ ಆದ ನಂತರ ಕಾಟಂದೇವರ ದೇವಸ್ಥಾನದ ಮುಂಭಾಗದಲ್ಲಿ ಕರಿಯ ಕಂಬಳಿಯನ್ನು ಹಾಸಿಕೊಂಡು ಅದರ ಮೇಲೆ ಕಾಟಮದೇವರ ಪೂಜಾರಿ ಮತ್ತು ಅವನ ಸಾಹಾಯಕ ಕುಳಿತು ಒಂದೊಂದು ಬೆಳ್ಳಿಯ ಗಣೆಯನ್ನು ಊದುತ್ತಾರೆ. ಸ್ವಲ್ಪ ಹೊತ್ತು ಗಣೆ ಊದಿದ ನಂತರ ಪೂಜಾರಿ ತನ್ನೆದುರು ಕುಳಿತ ಜನರಲ್ಲಿ ಒಬ್ಬೊಬ್ಬರಿಗೇ ಶಾಸ್ತ್ರ ಹೇಳಲು ಆರಂಭಿಸುತ್ತಾನೆ. ಸ್ವಲ್ಪಹೊತ್ತು ಗಣೆ ಊದುವುದು, ಅನಂತರ ಶಾಸ್ತ್ರ ಹೇಳುವುದು ಹೀಗೆಯೇ ಸಾಗುತ್ತದೆ. ಯಾವುದೋ ಒಂದು ಘಟ್ಟಕ್ಕೆ ಬಂದನಂತರ ಪೂಜಾರಿ ಗಣೆ ಊದುವುದನ್ನು ನಿಲ್ಲಿಸುತ್ತಾನೆ. ಅಲ್ಲಿಂದ ಮುಂದೆ ಅವನಿಗೆ ಶಾಸ್ತ್ರ ಹೇಳಲು ಸಾಧ್ಯವಾಗುವುದಿಲ್ಲ. ಆಗ ಆ ಎರಡೂ ಗಣೆಗಳನ್ನು ದೇವಸ್ಥಾನಕ್ಕೆ ತೆಗೆದುಕೊಂಡು ಹೋಗಿ ಇಟ್ಟುಬಿಡುತ್ತಾನೆ. ಪುನಃ ಯಾರಾದರೂ ಶಾಸ್ತ್ರ ಕೇಳಬೇಕಾದರೆ ಮುಂದಿನ ಶುಕ್ರವಾರ ಅಥವಾ ಭಾನುವಾರದವರೆಗೆ ಕಾಯಬೇಕು”.[೧೪]

**ಬಸವನನ್ನು ಬಿಡುವುದು :**

ಜುಂಜಪ್ಪ, ಎತ್ತಪ್ಪರಿಗೆ ಮತ್ತು ಮಾಗೋಡು ರಂಗನಾಥನಿಗೆ ಬಸವನನ್ನು ಬಿಡುವ ಸಂಪ್ರದಾಯ ಸಿರಾ ಸೀಮೆಯಲ್ಲಿ ಸರ್ವೇಸಾಮಾನ್ಯವಾಗಿ ಕಂಡುಬರುತ್ತದೆ. ಎತ್ತಪ್ಪನ ಬಸವನಿಗಿಂತ ಜುಂಜಪ್ಪನಿಗೆ ಬಿಡುವ ಬಸವ ಹೆಚ್ಚು ಪ್ರಸಿದ್ಧವಾಗಿದೆ. ಅದರಲ್ಲೂ ಕಳುವಾರಹಳ್ಳಿ ಹಾಗೂ ಹಾಗಲವಾಡಿಯ ಬಸವಗಳಿಗೆ ಎಲ್ಲಿಲ್ಲದ ಮನ್ನಣೆ ಲಭಿಸುತ್ತದೆ. ಜುಂಜಪ್ಪನ ಪಟ್ಟದ ಬಸವನ ಪ್ರೇರಣೆಯನ್ನು ಜುಂಜಪ್ಪನ ಕಾವ್ಯದಲ್ಲಿಯೇ ಕಾಣಬಹುದು. ಬಡಮ್ಮೆಲ ಜುಂಜಪ್ಪನಿಗೆ ಅತ್ಯಂತ ಆತ್ಮೀಯವಾದ ಬಸವ. ಜುಂಜಪ್ಪ ಇಲ್ಲದಿರುವಾಗಲೂ ಅವನ ದನಗಳ ಯೋಗಕ್ಷೇಮ ನೋಡಿಕೋಳ್ಳುವ ಹೊಣೆಗಾರಿಕೆ ಬಡಮ್ಮೆಲನಿಗೆ ಸೇರಿತ್ತು. ಚೇಳೂರು ಕಾವಲಿನಲ್ಲಿ ಜುಂಜಪ್ಪನಿಗುಂಟಾದ ಗೆಲುವಿನ ಕೀರ್ತಿಯೆಲ್ಲಾ ಬಡಮ್ಮೆಲನಿಗೇ ಸಲ್ಲಬೇಕು. ಜುಂಜಪ್ಪನಿಗೆ ಬಿಡುವ ಪಟ್ಟದ ಬಸವಗಳೆಲ್ಲಾ ಬಡಮ್ಮೆಲನ ಸಂಕೇತ ಎಂದು ಭಾವಿಸಬಹುದು.

ಜುಂಜಪ್ಪನ ಪಟ್ಟದ ಬಸವ ಜುಂಜಪ್ಪನ ಪ್ರತಿನಿಧಿಯೆಂದು ಜನ ಭಾವಿಸುವುದರಿಂದ ಅದಕ್ಕೆ ಗೌರವವನ್ನು ಕೊಡುತ್ತಾರೆ. ಒಂದು ಸಲ ದೇವಸ್ಥಾನದಿಂದ ಹೊರಟ ಜುಂಜಪ್ಪನ ಪಟ್ಟದ ಬಸವ ಊರುಗಳ ಮೇಲೆ ಹೋಗುತ್ತದೆ. ಅದು ಊರಿಂದ ಊರಿಗೆ ಹೋಗುವಾಗ ಅದರ ಹಿಂದೆ ಜುಂಜಪ್ಪನ ಪೂಜಾರರೂ, ಸಹಾಯಕರೂ, ವಾದ್ಯದವರೂ ಹೋಗುತ್ತಾರೆ. ಪಟ್ಟದ ಬಸವ ತನಗೆ ಇಷ್ಟ ಬಂದ ಕಡೆ ಹೋಗುತ್ತದೆ. ಅದಕ್ಕೆ ಯಾರೂ ನಿರ್ದೇಶಿಸುವಂತಿಲ್ಲ. ಅದು ಒಂದೊಂದು ಊರಿಗೆ ಬಂದಾಗ ಜನರು ಗೌರವದಿಂದ ಬರಮಾಡಿಕೊಳ್ಳುತ್ತಾರೆ. ಅದು ಒಂದೊಂದು ಮನೆಯ ಮುಂದೆ ಬರುವ ಮೊದಲು ಮನೆಯ ಮುಂದೆ ಸಗಣಿ ನೀರನ್ನು ಚಿಮುಕಿಸಿ ರಂಗೋಲಿ ಇಟ್ಟಿರುತ್ತಾರೆ. ಅದು ಬರುತ್ತಲೂ ಅದನ್ನು ಪೂಜಿಸಿ ತಿನ್ನಲು ಬಾಳೆಯ ಹಣ್ಣನ್ನು ಕೊಡುತ್ತಾರೆ. ಅಂದು ಆ ಊರಿನ ದೇವಸ್ಥಾನದಲ್ಲಿಯೇ ಉಳಿದಿದ್ದು ಮಾರನೆಯ ದಿನ ಬೇರ ಊರಿಗೆ ಹೋಗುತ್ತದೆ. ಯಾರ ಮನೆಯಲ್ಲಾದರೂ ಅದಕ್ಕೆ ಮಲಗಬೇಕೆನಿಸಿದರೆ ಅಲ್ಲಿಯೇ ಮಲಗಿಬಿಡುತ್ತದೆ. ಅಲ್ಲಿ ಒಂದು ಕರಿಯ ಕಂಬಳಿ ಹಾಸಿ ಅದರ ಮೇಲೆ ಬಸವ ಮಲಗಲು ಅವಕಾಶ ಮಾಡಿಕೊಡುತ್ತಾರೆ. ಜುಂಜಪ್ಪನ ಪೂಜಾರಿ ಬಸವನ ಮೇಲಿನ ಬಟ್ಟೆ, ಆಭರಣ ಕೋಡಿಗೆ ಕಟ್ಟಿರುವ ಜುಂಜಪ್ಪ ದೇವರನ್ನು ತೆಗೆದು ಇಡುತ್ತಾನೆ. ಆ ರಾತ್ರಿ ಬಸವನಿಗೆ ಪೂಜೆ ಮಾಡಿ ಬಸವನ ಹಿಂದೆ ಬಂದವರಿಗೆ ಊಟಕ್ಕೆ ಹಾಕುತ್ತಾರೆ, ಪೂಜಾರಿಯ ಕೈಗೆ ಜುಂಜಪ್ಪನ ಕಾಣಿಕೆಯನ್ನು ಕೊಡುತ್ತಾರೆ. ಮಾರನೆ ದಿನ ಬಸವ ಮುಂದೆ ಹೊರಡುತ್ತದೆ. ಹೀಗೆಯೇ ಬಸವ ಹಲವಾರು ಊರು, ಗೊಲ್ಲರಹಟ್ಟಿಗಳನ್ನು ತಿರುಗಿ ಕೊನೆಗೆ ಹಾಗಲವಾಡಿಗೋ ಕಳುವೋರಹಳ್ಳಿಗೋ ಬಂದು ಸೇರುತ್ತದೆ. ಬಸವ ಊರೂರು ತಿರುಗಿದಾಗ ಜನ ಅದಕ್ಕೆ ಕೊಡುವ ಅಕ್ಕಿ ಮತ್ತು ಕಾಣಿಕೆಯನ್ನು ಮೂರುಭಾಗ ಮಾಡಿ ಒಂದು ಭಾಗ ದೇವರಿಗೆ ಒಂದು ಭಾಗ ಪೂಜಾರರಿಗೆ, ಮತ್ತು ಅವನ ಸಹಾಯಕರಿಗೆ ಹಾಗೂ ವಾದ್ಯಗಾರರಿಗೆ ಹಂಚಲಾಗುತ್ತದೆ. ಇದು ಎತ್ತಪ್ಪನ ಬಸವನಿಗೂ ಅನ್ವಯಿಸುತ್ತದೆ.

ಯಾರು ಬೇಕಾದರೂ ಜುಂಜುಪ್ಪನಿಗೆ ಬಸವನನ್ನು ಬಿಡುವಂತಿಲ್ಲ. ತಮಗೆ ಏನಾದರೂ ತೊಂದರೆಯಾದಾಗ ಅದು ನಿವಾರಣೆಯಾದರೆ ಹರಕೆ ರೂಪದಲ್ಲಿ ಬಸವನನ್ನು ಬಿಡುವಂತಿಲ್ಲ. ಆದ್ದರಿಂದ ಪಟ್ಟದ ಬಸವ ಹರಕೆಯ ಪಟ್ಟಿಗೆ ಸೇರುವುದಿಲ್ಲ. ಜುಂಜಪ್ಪ ಯಾರಾದರೂ ಒಬ್ಬ ಕಾಡುಗೊಲ್ಲನ ಕನಸಿನಲ್ಲಿ ಕಾಣಿಸಿಕೊಂಡು ಅವನ ಬಳಿ ಇರುವ ಹೋರಿಕರುವನ್ನು ತನಗೆ ಬಸವನಾಗಿ ಬಿಡುವಂತೆ ಸೂಚಿಸುತ್ತಾನೆ. ಅದರಂತೆ ಅವನು ಆ ಕರುವನ್ನು ಜುಂಜಪ್ಪನಿಗೆ ಬಿಡುತ್ತಾನೆ. ಹಾಗೆ ಬಿಡದಿದ್ದರೆ ಆತನಿಗೆ ಜುಂಜಪ್ಪ ಹಾವಿನ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ, ಆ ಹಾವು ಕರುವಿನ ಕಾಲಿಗೆ ಸುತ್ತಿಹಾಕಿಕೊಳ್ಳುತ್ತದೆ. ಹಸು ತನ್ನ ಕರುವಿಗೆ ಹಾಲು ಕುಡಿಸದಂತೆ ಮಾಡುತ್ತಾನೆ. ಆಗಲೂ ಉದಾಸೀನ ಮಾಡಿದರೆ ಇನ್ನೂ ಹೆಚ್ಚಿನ ತೊಂದರೆಗಳುಂಟಾಗುತ್ತವೆ ಎಂಬ

ನಂಬಿಕೆ ಇದೆ. ಆತ ಒಪ್ಪಿಸಿದ ಹೋರಿಯುಕರು ಜುಂಜಪ್ಪನ ಪಟ್ಟದ ಬಸವನಾಗಬೇಕಾದರೆ ಅದನ್ನು ಜುಂಜಪ್ಪನ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಅದರ ಮೈತೊಳೆದು ದೇವರಿಗೆ ಐದುರೂಪಾಯಿ ಕಾಣಿಕೆ ಕೊಡಬೇಕು. ನಂತರ ಜುಂಜಪ್ಪನ ಪೂಜಾರಿ ಶ್ರೀಗಂಧದ ಚಕ್ಕೆಯಿಂದ ಬೆಂಕಿಯನ್ನು ಮಾಡಿ ಅದರಲ್ಲಿ ಬೇವಿನ ಕಡ್ಡಿಯನ್ನು ಕಾಯಿಸಿ ಅದರಿಂದ ಕರುವಿನ ನಾಲಿಗೆಯನ್ನು ಸುಡುತ್ತಾನೆ. ನಂತರ ಅದೇ ಬೇವಿನ ಕಡ್ಡಿಯಿಂದ ಕರುವಿನ ತೊಡೆಯ ಹೊರಭಾಗಕ್ಕೆ ಮೂರು ಚಟಕಿ ಹಾಕುತ್ತಾನೆ. ದೇವರ ಮೇಲಿನ ಒಂದು ಹೂವಿನ ಹಾರವನ್ನು ಕರುವಿನ ಕೊರಳಿಗೆ ಹಾಕುತ್ತಾನೆ. ಆ ಮೇಲೆ ಕರುವಿನ ಮೇಲೆ ತೀರ್ಥ ಹಾಕಿದರೆ ಅದು ಪಟ್ಟದ ಬಸವನಾಗುತ್ತದೆ. ಆ ಕರುವನ್ನು ಅಲ್ಲಿಗೆ ಕರೆತಂದ ವ್ಯಕ್ತಿ ಅದನ್ನು ಅಲ್ಲಿಯೇ ಬಿಟ್ಟು ಹೋಗುತ್ತಾನೆ. ಅಂದಿನಿಂದ ಆ ಪಟ್ಟದ ಬಸವ ಎಲ್ಲಿ ಬೇಕಾದರೂ ಮೇಯಬಹುದು. ಅದನ್ನು ಯಾರೂ ಅಡ್ಡಿ ಪಡಿಸುವಂತಿಲ್ಲ. ಹೀಗೆ ಸ್ವೇಚ್ಛೆಯಾಗಿ ಪಟ್ಟದ ಬಸವ ಮೈದುಂಬಿಕೊಳ್ಳುತ್ತದೆ. ಅದರ ಮೇಲೆ ನಗಾರಿಯನ್ನು ಹೇರುವಂತಿಲ್ಲ. ಆದರೆ ಮೂಗುದಾರ ಹಾಕಿರುತ್ತಾರೆ.

ಜುಂಜಪ್ಪನ ಬಸವನನ್ನು ಶಾಸ್ತ್ರ ಕೇಳುವುದೂ ಉಂಟು. ಮಕ್ಕಳಾಗದ ಹೆಂಗಸರನ್ನು ನೆಲದ ಮೇಲೆ ಮಲಗಿಸಿ ಆ ದಾರಿಯಲ್ಲಿ ಜುಂಜಪ್ಪನ ಬಸವನನ್ನು ಬಿಡುತ್ತಾರೆ. ಅದು ಆ ಹೆಂಗಸರನ್ನು ದಾಟಿಕೊಂಡು ಹೋದರೆ ಅವರಿಗೆ ಮಕ್ಕಳಾಗುವುದೆಂದೂ, ಅದು ದೂರ ಸರಿದು ಹೋದರೆ ಮಕ್ಕಳಾಗುವುದಿಲ್ಲವೆಂದೂ ನಂಬುತ್ತಾರೆ. ಬಾವಿಯನ್ನು ತೋಡಲೂ ಶಾಸ್ತ್ರ ಕೇಳುತ್ತಾರೆ. ಜುಂಜಪ್ಪ, ಎತ್ತಪ್ಪರ ಪಟ್ಟದ ಬಸವಗಳಿಗೆ ಬೀಜ ಹೊಡೆಸುವುದಿಲ್ಲ. ಬಸವನ ಯಾವುದೇ ಅಂಗ ಊನವಾಗುವಂತಿಲ್ಲ. ಯಾವುದಾದರೂ ಅಂಗ ಊನವಾದರೆ ಅದು ಪಟ್ಟದ ಬಸವನ ಸ್ಥಾನವನ್ನು ಕಳೆದುಕೊಂಡು ಸಾಮಾನ್ಯ ಬಸವನಾಗಿ ಉಳಿಯುತ್ತದೆ. ಪಟ್ಟದ ಬಸವ ಸತ್ತಾಗ ಅದನ್ನು ಮೆರವಣಿಗೆಯೊಂದಿಗೆ ಗೌರವದಿಂದ ತೆಗೆದುಕೊಂಡು ಹೋಗಿ ಸಮಾದಿ ಮಾಡುತ್ತಾರೆ. ಆ ಸಮಾದಿಯನ್ನು ಪವಿತ್ರವಾದ ಜಾಗವೆಂದು ಭಾವಿಸಿ ಪೂಜೆ ಮಾಡುತ್ತಾರೆ. ಸಿರಾ ತಾಲ್ಲೂಕಿನ ಬಿಜ್ಜಂಬೆಳ್ಳದಲ್ಲಿ ಬಸವನ ಸಮಾದಿಯ ಸ್ಥಳವಿದೆ. ಅದನ್ನು ಜುಂಜಪ್ಪನ ಬಸವನಗುಡ್ಡೆ ಎನ್ನುತ್ತಾರೆ. ಇದು ಒಂದು ಪ್ರಮುಖ ಧಾರ್ಮಿಕ ಕೇಂದ್ರವೂ ಆಗಿದೆ.

ಉಳಿಗೆರೆ ಗೊಲ್ಲರಹಟ್ಟಿ, ಓಜಕುಂಟೆ, ಬೇವಿನಹಳ್ಳಿ ಮೊಲಾದ ಕಡೆ ಜುಂಜಪ್ಪನ ಬಸವನನ್ನು ಆಡಿಸುವ, ಗಣೆ ನುಡಿಸುವವರನ್ನು ಕಾಣಬಹುದು. ಇವರು ಜುಂಜಪ್ಪನ ಬಸವನನ್ನು ಊರೂರು ಸುತ್ತಿಸುತ್ತಾ ಜೀವನ ಸಾಗಿಸುವ ವೃತ್ತಿಯವರೂ ಆಗಿದ್ದಾರೆ. ಕೆಲವು ಸಂದರ್ಭಗಳಲ್ಲಿ ಇತರ ಪ್ರಾಣಿಗಳನ್ನು ಜುಂಜಪ್ಪನ ಹೆಸರಿಗೆ ಮೀಸಲು ಬಿಡುವುದನ್ನು ಕಾಣಬಹುದು. ಸಿರಾ ತಾಲ್ಲೂಕಿನ ಗಂಗನಹಳ್ಳಿಯಲ್ಲಿ ಜುಂಜಪ್ಪನಿಗೆ ಬಿಟ್ಟ, ಮೇಕೆ ಹೋತದ ಗುಡ್ಡೆ (ಸಮಾದಿ)ಯನ್ನು ಕಾಣಬಹುದು. ಇದು ದಿನನಿತ್ಯದ ಪೂಜೆಗಿಂತ ಭಿನ್ನವಾದದ್ದು.

ಒಬ್ಬ ನಿರ್ದಿಷ್ಟ ವ್ಯಕ್ತಿ ಅಥವಾ ಗುಂಪಾಗಲಿ ಧಾರ್ಮಿಕ ಉದ್ದೇಶದಿಂದ ನಿಯಮಗಳಿಗೆ ಬದ್ಧವಾಗಿ ನಡೆದುಕೊಳ್ಳುವುದಕ್ಕೆ ವ್ರತ ಎನ್ನಬಹುದು. ವ್ರತ ಎಂಬ ಪದಕ್ಕೆ 'ಬತ' ಎಂಬುದಾಗಿಯೂ ಬಳಸುತ್ತಾರೆ. ವೈಯಕ್ತಿಕವಾಗಿ ಆಚರಿಸುವ ವ್ರತಗಳೂ ಉಂಟು ಸಾಮೂಹಿಕ ಆಚರಣೆಯ ವ್ರತಗಳೂ ಉಂಟು ವ್ರತ ಕೆಡಿಸುವುದನ್ನು ಬತ ಅಲಿಯುವುದು, ಬತ ಕೆಡಿಸುವುದು ಎಂತಲೂ ಕರೆಯುತ್ತಾರೆ. ಕಾಡುಗೊಲ್ಲ ಜನಾಂಗದಲ್ಲಿ ಎತ್ತಪ್ಪ, ಜುಂಜಪ್ಪರಿಗೆ ಹುರಳಿಬತ, ನವಣೆಬತ, ಹಾಲುಮೀಸಲು ಬತ ಆಚರಿಸುತ್ತಾರೆ. ಹುರುಳಿಬತ, ನವಣೆಬತಗಳನ್ನು ಆಚರಿಸುವರು ವರ್ಷಕ್ಕೊಮ್ಮೆ ಶಿವರಾತ್ರಿ ಹಬ್ಬದಲ್ಲಿ ನಡೆವ ಕಾಳಿನ ಹಬ್ಬದಲ್ಲಿ ಬೇಯಿಸಿದ ಹುರುಳಿಯನ್ನೊ ಅಥವಾ ನವಣೆಯನ್ನೊ ಪ್ರಸಾದವೆಂದು ಸ್ವೀಕರಿಸಿ ವರ್ಷದ ಉಳಿದ ಯಾವ ದಿನಗಳಲ್ಲೂ ಬಳಸುವುದಿಲ್ಲ, ಕೈಯಿಂದ ಮುಟ್ಟುವದೂ ಇಲ್ಲ. ಇದನ್ನೇ ಹುರುಳಿಬತ, ವನಣೆಬತ, ಎನ್ನುವರು. ಅತ್ಯಂತ ಮಡಿ ಮೈಲಿಗೆಯಿಂದ ಹಾಲು ಕರೆದು ಹೆಪ್ಪಾಕಿ ತುಪ್ಪವನ್ನು ಮಾಡಿ ದೀಪಕ್ಕೆ ಕೊಡುವ ಹಾಲು ಮೀಸಲು ಸಂಪ್ರದಾಯವನ್ನು ಹಾಲು ಮೀಶ್ಯಲು ಬತ ಎನ್ನುತ್ತಾರೆ.

ಕಾಡುಗೊಲ್ಲರ ಪೂಜಾರಿಯಂತೂ ಅತ್ಯಂತ ಹೆಚ್ಚು ವ್ರತಬದ್ಧನಾಗಿರಬೇಕು. ಈತ ಕಾಲಿಗೆ ಚಪ್ಪಲಿ ಹಾಕುವಂತಿಲ್ಲ, ನವಣೆ ಹುರುಳಿ ಹೊಲಗಳಲ್ಲಿ, ವಿದ್ಯುತ್ ತಂತಿಯ ಕೆಳಗೆ ಓಡಾಡುವಂತಿಲ್ಲ. ವಿದ್ಯುತ್ ತಂತಿಯ ನೆರಳು ತಾಗಿದರೆ ಮೈಲಿಗೆಯಾಗುತ್ತದೆಂದು ಭಾವಿಸುತ್ತಾರೆ. ಎತ್ತಿನಗಾಡಿ, ಬಸ್ಸುಗಳಲ್ಲಿ ಪ್ರಯಾಣಿಸುವಂತಿಲ್ಲ. ಮತ್ತೊಬ್ಬನ ಮನೆಯಲ್ಲಿ ಏನನ್ನೂ ತಿನ್ನದೆ ಕುಡಿಯದೆ ಬಾಯಿಬತವನ್ನು ಆಚರಿಸುವುದೂ ಉಂಟು.

ಬರಗೂರು ವೀರಮ್ಮಳ ವಂಶಜರಾದ ಅಳುವನವರು ಕೆಲವೊಂದು ಪ್ರದೇಶಗಳಲ್ಲಿ ತಾಯಂದಿರು ಅಳುತ್ತಿರುವ ಮಗುವಿಗೆ ಹಾಲು ಕೊಡದಂತೆ ವ್ರತಾಚರಣೆ ಮಾಡುತ್ತಾರೆ. ಕಾರಣ ಆ ಪ್ರದೇಶಗಳಲ್ಲಿ ವೀರಮ್ಮ ನೋವನ್ನನುಭವಿಸಿದಳು. ಅವಳ ಶಾಪ ಆ ಪ್ರದೇಶಗಳಲ್ಲಿದೆ ಎಂದು ನಂಬುತ್ತಾರೆ.

**ಪೂಜೆ :**

ದೈವತ್ವಕ್ಕೇರಿದ ವೀರರಿಗೆ ಪೂಜೆ ಸಲ್ಲಿಸಲಾಗುತ್ತದೆ. ಬೊಪ್ಪರಾಯನೆಂದು ಒಂದು ವೀರಗಲ್ಲನ್ನು, ಕರಿಯಮ್ಮಳೆಂದು ಬೇವಿನ ಮರವನ್ನು, ಬೂತಪ್ಪನೆಂದು ಚಿಕ್ಕ ಚಿಕ್ಕ ಕಾಡುಗಲ್ಲು ಬೆನವಗಳನ್ನು, ಎತ್ತಪ್ಪ ಜುಂಜಪ್ಪರೆಂದು ಅವರ ಪವಾಡ ಸ್ಥಳಗಳನ್ನು, ಸಮಾದಿಯಾದ ಸ್ಥಳ, ಹಸುಗಳು, ದನಗಳಗೂಡು, ಬೆನವಗಳನ್ನು ವೀರಬೊಮ್ಮಣ್ಣನೆಂದು ವೀರಗಲ್ಲು ಹಾಗೂ ಕತ್ತಿಗಳನ್ನು ಪೂಜಿಸಲಾಗುತ್ತದೆ. ಈ ಪೂಜೆಯು ವಾರದಲ್ಲಿ ಒಂದು ದಿನ ವಿಷೇಶವಾಗಿಯೂ, ವರ್ಷಕ್ಕೊಮ್ಮೆ ವಿಜೃಂಭಣೆಯ ಉತ್ಸವ, ಜಾತ್ರೆಗಳನ್ನು ಮಾಡಿ ಪೂಜಿಸಲಾಗುತ್ತದೆ.

**ಜಿನಿಗೆ :**

ಕಾಡು ಗೊಲ್ಲರಲ್ಲಿ ಹೆರಿಗೆಯಾದ ಹೆಣ್ಣು ಹಟ್ಟಿ ಪ್ರವೇಶಿಸುವ ಮೊದಲು ನಡೆಯಬೇಕಾದ ಸಂಪ್ರದಾಯವೇ ಜಿನಿಗೆ. ಇದೊಂದು ಶುದ್ಧೀಕರಣ ಕ್ರಿಯೆ. ಜಿನಿಗೆ ಬಿಡುವ ಮೊದಲು ತಾಯಿ ಮಗುವಿಗೆ ಕೈ ಬಾಯಿ ತೊಳೆದು ಮುಟ್ಟುಜಿನಿಗೆ ಎಂದು ಮುಟ್ಟಿಸಿ. ಕುಡಿಜಿನಿಗೆ ಎಂದು ತಾಯಿಯ ಅಂಗೈಗೆ ಹಾಕಿ ಮಗುವಿನ ಬಾಯಲ್ಲಿ ಎರಡು ಹನಿ ಬಿಡುತ್ತಾರೆ. ಜಿನಿಗೆ ಬಿಟ್ಟನಂತರ ಆಕೆ ಶುದ್ಧಳಾದಂತೆ. ಜಿನಿಗೆ ಬಿಟ್ಟದಿನ ಮಗುವಿಗೆ ನಾಮಕರಣ ಮಾಡುತ್ತಾರೆ. ಜಿನಿಗೆ ಕುರಿಯನ್ನು ಅತ್ಯಂತ ಮಡಿಯಿಂದ ಜಿನಿಗೆ ಹಾಲು ಕರೆದುಕೊಂಡು ಎಲೆ ಅಡಿಕೆ ಹಾಕದೆ, ಚಪ್ಪಲಿ ಮೆಟ್ಟದೆ, ನೆಲಕ್ಕೆ ಮುಟ್ಟಿಸದೆ ಹಾಲನ್ನು ಕರೆದುಕೊಳ್ಳುತ್ತಾರೆ. ಹೀಗೆ ಕರೆದ ಜಿನಿಗೆ ಹಾಲಿನ ಮಡಿಕೆಯನ್ನು ಗುಡಿಯ ಕಳ್ಳೆ ಪೌಳಿಯಲ್ಲಿ ಇಟ್ಟಿರುತ್ತಾರೆ. ಈ ಕಟ್ಟನ್ನು ಎತ್ತಯ್ಯ ರೂಪಿಸಿದನು ಎಂದು ಭಾವಿಸುತ್ತಾರೆ. ಮೊದಲು ಗೋಜಿನಿಗೆ ಬಳಸುತ್ತಿದ್ದವರು ಕಾಲಾನಂತರ ಕುರಿ ಜಿನಿಗೆ ಬಳಕೆಗೆ ಬಂತು. ಇದು ಕಾಡುಗೊಲ್ಲರು ಪಶುಪಾಲನೆಯನ್ನು ಬಿಟ್ಟು ಕುರಿ ಸಾಕಾಣೆಗೆ ತೊಡಗಿದ ಕಾಡುಗೊಲ್ಲರ ಕಸುಬಿನ ಸಂಕ್ರಮಣಾವಸ್ಥೆಯನ್ನು ಸೂಚಿಸುತ್ತದೆ ಎಂಬ ಡಾ. ಮೀರಾಸಾಬಿಹಳ್ಳಿ ಶಿವಣ್ಣ ಅಭಿಪ್ರಾಯವನ್ನು ಸಮರ್ಥಿಸುವಂತೆ ಜಿನಿಗೆ ಸಂಪ್ರದಾಯ ಕಂಡುಬರುತ್ತದೆ.

ಜಿನಿಗೆ ಕುರಿಯ ಮೇಲೆ ಆಣೆ ಇಡಲು ಇಂದಿಗೂ ಕಾಡುಗೊಲ್ಲರು ಹೆದರುತ್ತಾರೆ. ಅದರ ಮೇಲೆ ಆಣೆಯಿಟ್ಟು ಸುಳ್ಳು ಹೇಳಿದರೆ ತನ್ನ ವಂಶ ನಾಶವಾಗುವುದೆಂಬ ನಂಬಿಕೆ ಇದೆ. ಈ ಜಿನಿಗೆ ಕುರಿಯ ಹಾಲು ಅತ್ಯಂತ ಪವಿತ್ರವೆಂದು ಭಾವಿಸುತ್ತಾರೆ. ಜಿನಿಗೆ ಕುರಿಯನ್ನು ಬಿಡುವಾಗ ದೇವರನ್ನು ಶಾಸ್ತ್ರ ಕೇಳಿ ಹೂವಿನ ಪ್ರಸಾದ ಅಥವಾ ಗಣೆಯ ಮೂಲಕ ಯಾವ ಕುರಿಯನ್ನು ಸೂಚಿಸುವುದೋ ಅದನ್ನು ಆರಿಸುತ್ತಾರೆ. ಅದು ಹೆಣ್ಣು ಕುರಿಯಾಗಿರಬೇಕು. ಅದರ ಬಲಗಿವಿಯನ್ನು ಉದ್ದಕ್ಕೆ ಮೂರು ನಾಮಗಳಂತೆ ಸೀಳುತ್ತಾರೆ. ಉಳಿದ ಕುರಿಗಳ ಜೊತೆಗೇ ಇದನ್ನು ಸಾಕುತ್ತಾರೆ. ಇದನ್ನು ಯಾರು ದಂಡಿಸುವಂತಿಲ್ಲ. ಇದರಲ್ಲಿ ಹೆಣ್ಣು ಮರಿ ಹುಟ್ಟಿದರೆ ಅದನ್ನು ಜಿನಿಗೆ ಕುರಿಯಾಗಿ ಬಿಡುತ್ತಾರೆ. ಜಿನಿಗೆ ಕುರಿ ಸತ್ತಾಗ ಇದರ ಮಾಂಸವನ್ನು ಬಿಸಾಕುವಂತಿಲ್ಲ. ಹೀಗೆ ಜಿನಿಗೆ ಕುರಿ ಅತ್ಯಂತ ಶ್ರೇಷ್ಟ ಸ್ಥಾನವನ್ನು ಪಡೆದುಕೊಳ್ಳುತ್ತದೆ.

**ಕಾಣಿಕೆ :**

ಜುಂಜಪ್ಪನ ಭಕ್ತರಾದ ದಾಸಯ್ಯಗಳು ಊರೂರ ಮೇಲೆ ಬರುವುದುಂಟು. ಇವರು ಮನೆಮನೆಗೆ ಹೋಗದೆ ಠೀವಿಯಿಂದ ಬೀದಿಗಳಲ್ಲಿ ಹೋಗುತ್ತಾರೆ. ಕಾಡುಗೊಲ್ಲರನ್ನು ಬಿಟ್ಟು ಇತರ ಜನಗಳೂ ಕೂಡ ತಮ್ಮ ಮನೆಯಲ್ಲೋ, ಹೊಲದಲ್ಲೋ ಹಾವು, ಚೇಳು ಮಂಡರುಗಬ್ಬೆಗಳು ಹೆಚ್ಚಾದಾಗ ಜುಂಜಪ್ಪನ ಹೆಸರು ಹೇಳಿ ನಾಲ್ಕಾಣೆಯನ್ನೊ, ಎಂಟಾಣೆಯನ್ನೊ ಹರಕೆ ಕಟ್ಟಿ

ಇಟ್ಟಿರುತ್ತಾರೆ. ಜುಂಜಪ್ಪನ ದಾಸಯ್ಯಗಳು ತಮ್ಮ ಊರಿಗೆ ಬಂದಾಗ ಅವರು ಓಡಿದಿರುವ ಗರಡುಗಂಬದ ದೀಪದ ಎಣ್ಣೆಯ ಒಳಕ್ಕೆ ತಾವು ಕಟ್ಟಿಟ್ಟಿದ್ದ ಹಣವನ್ನು ಹಾಕುತ್ತಾರೆ. ಅಕಸ್ಮಾತ್ ಒಂದು ವರ್ಷ ಕಾಣಿಕೆಯವರು ತಮ್ಮ ಊರಿಗೆ ಬರದಿದ್ದರೆ ಜುಂಜಪ್ಪನಿಗೆ ಕಾಣಿಕೆಯನ್ನು ಹರಕೆ ಕಟ್ಟಿದ ಜನ ಜುಂಜಪ್ಪನ ಜಾತ್ರೆಗೇ ಹೋಗಿ ಅರ್ಪಿಸಿ ಬರುತ್ತಾರೆ. ಈ ಕಾರಣದಿಂದಲೇ ಜುಂಜಪ್ಪನ ಭಕ್ತರಾದ ದಾಸಯ್ಯಗಳನ್ನು ಕಾಣಿಕೆಯವರು ಎಂದು ಕರೆಯುವ ವಾಡಿಕೆ ಇದೆ. ಜುಂಜಪ್ಪನ ಪ್ರಭಾವ ಕಾಡುಗೊಲ್ಲರನ್ನು ಮೀರಿ ಇತರ ಜನಗಳ ಮೇಲೂ ಉಂಟಾಗಿದೆ ಎಂಬುದಕ್ಕೆ ಕಾಣಿಕೆ ಸಂಪ್ರದಾವೇ ಸಾಕ್ಷಿಯಾಗಿದೆ.

**ದೀಪ ಏರಿಸುವುದು :**

ಜುಂಜಪ್ಪನ ಸಾಂಸ್ಕೃತಿಕ ಕೇಂದ್ರಗಳಲ್ಲಿ ಹೆಚ್ಚು ವೈಭವಪೂರ್ಣವಾಗಿ ಆಚರಿಸುವ ಈ ದೀಪ ಏರಿಸುವ ಸಂಪ್ರದಾಯವನ್ನು ಬೆಳಕಿನ ಹಬ್ಬ ಎಂತಲೂ ಕರೆಯುತ್ತಾರೆ. ಪ್ರತೀ ವರ್ಷ ಕಾರ್ತೀಕಮಾಸದಲ್ಲಿ ಆಚರಿಸಲಾಗುತ್ತದೆ. ಜುಂಜಪ್ಪನ ಹುಟ್ಟೂರು ಕಳುವೊರಹಳ್ಳಿ, ಬೇವಿನಹಳ್ಳಿ, ಬಿಜ್ಜಂಬೆಳ್ಳ, ಗಂಗನಹಳ್ಳಿ ಗುಬ್ಬಿ ತಾಲ್ಲೂಕಿನ ಹಾಗಲವಾಡಿ ಮೊದಲಾದ ಸ್ಥಳಗಳಲ್ಲಿ ದೀಪ ಏರಿಸಲಾಗುತ್ತದೆ. ಕಳುವೊರಹಳ್ಳಿಯಲ್ಲಿ ಜುಂಜಪ್ಪನ ಗುಡ್ಡೆ ಹತ್ತಿರ ಆ ದಿನ ಕುಂಚಿಟಿಗ ಕಾಡುಗೊಲ್ಲ ಮೊದಲಾದ ಜನಾಂಗದ ಭಕ್ತರೆಲ್ಲರೂ ಸೇರುತ್ತಾರೆ. ಗಾಡಿಯ ಮುಂಭಾಗದ ಗರುಡುಗಂಬದಲ್ಲಿ ದೀಪ ಉರಿಸುತ್ತಾರೆ. ಅನಂತರ ಬೇವಿನ ಹಳ್ಳಿಗೆ ತಂದು ಅಲ್ಲಿ ಕರಿಯಮ್ಮನನ್ನು ಹೊರಡಿಸಿ ಜುಂಜಪ್ಪ, ಕರಿಯಮ್ಮಳನ್ನು ಭೇಟಿ ಮಾಡಿಸುತ್ತಾರೆ. ಅದನ್ನು 'ಅಣ್ಣ ತಂಗಿ ಬೇಟಿ' ಎನ್ನುತ್ತಾರೆ. ದೀಪ ಏರಿಸುವ ಒಂದು ವಾರದ ನಂತರ ದೀಪ ಇಳಿಸುತ್ತಾರೆ. ಜುಂಜಪ್ಪನ ಗುಡ್ಡೆಯ ಹತ್ತಿರ ದೀಪ ಏರಿಸಿದಾಗ ಇತ್ತ ಹಟ್ಟಿಯಲ್ಲಿ ಪ್ರತಿಯೊಬ್ಬರ ಮನೆಯಲ್ಲೂ ದೀಪ ಏರಿಸುತ್ತಾರೆ. ಜನರು ದೀಪಕ್ಕೆ ಮಂಡಕ್ಕಿ, ಕಡಲೆಕಾಯಿ, ಹರಳು ಮೊದಲಾದವನ್ನು ಹಾಕುತ್ತಾರೆ. ಈ ಸಂದರ್ಭದಲ್ಲಿ ಯಾರೂ ಮಾಂಸಹಾರ ಸೇವಿಸುವುದಿಲ್ಲ. ಶಿವರಾತ್ರಿ, ಯುಗಾದಿಗಳಲ್ಲೂ ದೀಪ ಏರಿಸುವ ಪರಿಪಾಠವಿದ್ದರೂ ಕಾರ್ತಿಕ ಮಾಸದಲ್ಲಿ ಎತ್ತುವ ದೀಪ ಅತ್ಯಂತ ಮುಖ್ಯವಾದದ್ದು. ಈ ಸಂದರ್ಭದಲ್ಲಿ ಏಳು ದಿನಗಳ ಕಾಲ ಪ್ರತಿಯೊಂದು ಮನೆಯಲ್ಲಿಯೂ ದೀಪ ಉರಿಯುತ್ತದೆ. ಏಳೂ ದಿನಗಳ ಕಾಲ ಗೋವು, ಕುರಿ, ಮೇಕೆಗಳ ಕೆಚ್ಚಲಿಗೆ ಕೈಹಾಕುವುದಿಲ್ಲ ಕರುಗಳಿಗೆ ಕುಡಿಯಲು ಬಿಡುತ್ತಾರೆ. ಹೆಚ್ಚಾದ ಹಾಲನ್ನು ಹುತ್ತದ ಕೋವಿಗೋ, ಹರಿವ ಹೊಳೆಗೋ ಸುರಿಯುತ್ತಾರೆ. ಕೊನೆಯ ದಿನದ ಹಾಲನ್ನು ಜುಂಜಪ್ಪನಿಗೆ ಎಡೆಗೆ ಕೊಡುತ್ತಾರೆ. ದೀಪ ಏರಿಸಿದ ವಾರದ ನಂತರ, ದೀಪ ಏರಿಸಿದ ದಿನದಂದೇ ದೀಪ ಇಳಿಸಿ ನೂರೊಂದು ದೀಪ ಹಚ್ಚುತ್ತಾರೆ. ಇದನ್ನು 'ಕಿರುದೀವಳಿಗೆ' ಎನ್ನುತ್ತಾರೆ.

ಹಾಲವಾಡಿಯಲ್ಲಿ ಮೊದಲ ದಿನದ ದೀಪ ಏರಿಸುವುದನ್ನು 'ದೊಡ್ಡದೀವಳಿಗೆ' ಎಂತಲೂ, ಇಳಿಸುವ ದಿನವನ್ನು 'ಕಿರುದೀವಳಿಗೆ' ಎಂತಲೂ ಕರೆಯುತ್ತಾರೆ.

ಸಾಮಾನ್ಯವಾಗಿ ಸೋಮವಾರದ ದಿನದಂದೇ ದೀಪ ಏರಿಸುತ್ತಾರೆ. ಅದಕ್ಕೆ ಹಿಂದಿನ ಶುಕ್ರವಾರದಿಂದಲೇ ಸಿದ್ಧತೆ ಮಾಡಿಕೊಳ್ಳುತ್ತಾರೆ. ಮೊದಲು ಹಟ್ಟಿ ಬೆಳ್ಳಗೆ ಮಾಡುವುದು. ಎಂದರೆ ಹಟ್ಟಿಯ ಎಲ್ಲಾ ಜನರೂ ಪ್ರಾಣಿಗಳೂ ಊರ ಹೊರಗಿನ ಹೊಳೆಗೆ ಹೋಗಿ ಮಡಿ ಮಾಡಿಕೊಂಡು ಬರುತ್ತಾರೆ. ಶನಿವಾರದಂದು ಹೊಸ ಸೀರಿನಲ್ಲಿ ದೇವರುಗಳ ಪುಣ್ಯೋಜನ ಮಾಡುತ್ತಾರೆ. ಅಂದಿನ ರಾತ್ರಿ ಪೂಜಾರಿ ಜುಂಜಪ್ಪನ ಗುಬ್ಬದೊಳಗೆ ಕುಳಿತು ಸರ್ಪಕ್ಕೆ ಸಲ್ಲಿಸಬೇಕಾದ ಹಾಲು ಮೀಸಲು ಸಲ್ಲಿಸುತ್ತಾನೆ. ಜುಂಜಪ್ಪ ಸರ್ಪದ ರೂಪದಲ್ಲಿ ಬಂದು ಮೀಸಲು ಹಾಲನ್ನು ಕುಡಿಯುತ್ತಾನೆಂಬ ನಂಬಿಕೆ ಇದೆ. ಸರ್ಪ ಹಾಲು ಕುಡಿಯುವವರೆಗೂ ದೀಪ ಏರಿಸುವುದಿಲ್ಲ. ಸರ್ಪ ಹಾಲು ಕುಡಿದ ನಂತರ ಪೂಜಾರಿ ಗಂಟೆಯ ಸಪ್ಪಳ ಮಾಡುತ್ತಾನೆ. ಗಂಟೆಯ ಶಬ್ದ ಕೇಳುತ್ತಲೇ ಗುಬ್ಬದ ಹೊರಗೆ ಕಾಯುತ್ತಿದ್ದ ಜನ ಸ್ವಾಮಿ ಬಂದ ಎಂದು ಎಲ್ಲರೂ ಏಳುತ್ತಾರೆ. ಸಿದ್ಧವಾಗಿರುವ ಹತ್ತಿ ಕಾಳಿಗೆ ಎಣ್ಣೆ ಸುರಿದು ದೀಪ ಹೊತ್ತಿಸಿ ಎಲ್ಲಾ ದೇವರಿಗೂ ಬೆಳಗಿ ದೀಪ ಏರಿಸುತ್ತಾರೆ. ಜುಂಜಪ್ಪನ ಹೆಸರಿನಲ್ಲಿ ಬಿಟ್ಟ ಪ್ರಾಣಿಗಳ ಸಮಾದಿಗಳ ಬಳಿಯಲ್ಲಿಯೂ ಈ ದೀಪ ಏರಿಸುವ ಹಬ್ಬವನ್ನು ಆಚರಿಸುತ್ತಾರೆ. ಉದಾಹರಣೆಗೆ ಸಿರಾ ತಾಲ್ಲೂಕಿನ ಗಂಗನಹಳ್ಳಿಯಲ್ಲಿ ಜುಂಜಪ್ಪನ ಮೇಕೆ ಹೋತದ ಗುಡ್ಡೆ ಹತ್ತಿರ ಹಾಗೂ ಹಳೇ ಬಿಜ್ಜಂಬೆಳ್ಳದ ಜುಂಜಪ್ಪನ ಬಸವನ ಗುಡ್ಡೆ ಹತ್ತಿರ ದೀಪ ಎರಿಸುವ ಸಂಪ್ರದಾಯವಿದೆ. ದೀಪಾವಳಿ ಹಬ್ಬವನ್ನೇ ಕಾಡುಗೊಲ್ಲರು ಹೀಗೆ ಬೆಳಕಿನ ಹಬ್ಬವಾಗಿ ಅರ್ಥವತ್ತಾಗಿ ಆಚರಿಸುವುದನ್ನು ಕಾಣಬಹುದು.

**ಎತ್ತಪ್ಪನ ಕಟ್ಟು :**

ಎತ್ತಪ್ಪ ಕಾಡುಗೊಲ್ಲರ ಪ್ರಥಮ ಸಾಂಸ್ಕೃತಿಕ ವೀರ. ಮೊಟ್ಟ ಮೊದಲ ಬಾರಿಗೆ ಕಾಡುಗೊಲ್ಲ ಜನಾಂಗವನ್ನು ಒಂದು ಜನಾಂಗೀಯ ಸಂವಿಧಾನದ ಚೌಕಟ್ಟಿನೊಳಕ್ಕೆ ಅಳವಡಿಸುವ ಪ್ರಯತ್ನ ಮಾಡಿದವನು. ಕರೇಕಡಗಳನ್ನು ವಿಂಗಡಿಸಿ, ಒಂದು ದುಡ್ಡಿನಿಂದ ಇಪ್ಪತ್ತು ದುಡ್ಡಿನವರೆಗೆ ತಪ್ಪು ತೆಗೆದವನು. ಊರಿನಿಂದ ದೂರ ಹಟ್ಟಿಗಳಲ್ಲಿ ವಾಸಿಸುವಂತೆ, ಪಾವಿತ್ರ್ಯ ರಕ್ಷಣೆಗಾಗಿ ಕಳ್ಳೆ ಬೇಲಿಯ ಕಟ್ಟನ್ನು ವಿಧಿಸಿದವನು. ರಜೋಗುಣಾದಿ ಸೂತಕದ ನಿಯಮಗಳನ್ನು ರೂಪಿಸಿದವನು, ಸತ್ತರೂ, ಹೆತ್ತರೂ ಗುಡಿಯ ಬಾಗಿಲಿಗೆ ಕಳ್ಳೆ ಕಟ್ಟಿಸುವ ಸಂಪ್ರದಾಯ ತಂದವನು. ಮಾಸಿಕ ಸೂತಕ, ಜನಿಗೆ ಸಂಪ್ರದಾಯ ಹುಟ್ಟುಹಾಕಿದವನು. ಹಟ್ಟಿಯೊಳಕ್ಕೆ ಹಂದಿ, ಕೋಳಿ ಸೇರದಂತೆ; ಹಂದಿ, ಕೋಳಿ ಮಾಂಸ ತಿನ್ನದಂತೆ ಅಪ್ಪಣೆ ಕೊಟ್ಟವನು. ಹಂದಿ, ಕೋಳಿ ಹಿಕ್ಕೆ ತುಳಿಸದಿದ್ದರೆ ಹಟ್ಟಿಯಲ್ಲಿ ಬಂಗಾರದ ಹೊಗೆ ಹೊರಡಿಸುತ್ತೇನೆಂದು ಜನಾಂಗಕ್ಕೆ ಮಾತು ಕೊಟ್ಟವನು. ಹಾಗೆ ಇವನು ಜನಾಂಗಕ್ಕೆ ವಿಧಿಸಿದ ನಡಾವಳಿಗಳನ್ನು ಎತ್ತಪ್ಪನ ಕಟ್ಟು ಎನ್ನುತ್ತಾರೆ.

**ಗೂಡಿನ ಹಬ್ಬ :**

ಇದು ಎತ್ತಪ್ಪನನ್ನು ನೆನೆಯುವ, ಗೋ ಸಂಸ್ಕೃತಿಯನ್ನು ನೆನೆಯುವ, ಗೋ ಸಂಪತ್ತು ಹೆಚ್ಚಲಿ ಎಂದು ಹಾರೈಸುವ ಹಬ್ಬ. ಗೂಡು ಎಂದರೆ ರೊಪ್ಪ. ಆ ಗೂಡಿನೊಳಗಿರುವ ದನ, ಕರು, ಕುರಿಗಳ ಓಂಡು ಹೆಚ್ಚಲಿ ಎಂದು ನಡೆಸುವ ಫಲ ಸಮೃದ್ಧಿಯ ಹಬ್ಬ. ಹಟ್ಟಿಯ ಹೊರಭಾಗದ ಬಯಲಿನಲ್ಲಿ ಕಳ್ಳಿ ಕಡಿದು ಅತ್ಯಂತ ಚಿಕ್ಕ ಚಿಕ್ಕ ಕರುವಿನ ಗೂಡು, ದನವಿನ ಗೂಡು, ತೋರು ಗೂಡುಗಳನ್ನು ಹಾಕುತ್ತಾರೆ. ಆ ಹಿಂದಿನ ರಾತ್ರಿ ಹಸುಗಳ ಹಾಲು ಕರೆಯದೆ ಕರುಗಳಿಗೆ ಕುಡಿಯಲು ಬಿಟ್ಟಿರುತ್ತಾರೆ. ರಾತ್ರಿಯೆಲ್ಲಾ ಕೋಲಾಟ ಹಾಕುವುದು, ಪದಗಳನ್ನು ಹಾಡುವುದು ಮಾಡುತ್ತಾರೆ. ಬೆಳಗ್ಗೆ ದನಗಳ ಸಗಣಿಯಿಂದ ಮೇಲೆ ಹೇಳಿದಂತೆ ದನವಿನ ಗೂಡು, ಕರುವಿನ ಗೂಡು, ಬಟ್ಟಣ್ಣ, ಮೈಲಣ್ಣ, ಗೊಡ್ಡುಗಾಳಿ, ಅಕ್ಕರೆಂಬೆ, ಚಿಕ್ಕರೆಂಬೆ ಎಂಬ ದನಗಳ ಆಕಾರ ಮಾಡಿ ಅವುಗಳಿಗೆ ಎಡೆ ಹಾಕುತ್ತಾರೆ. ದೇವಸ್ಥಾನದಿಂದ ಜನ ಎತ್ತಯ್ಯನ ಕಂಬಿ ಹೊತ್ತು ಅಲ್ಲಿಗೆ ತರುತ್ತಾರೆ. ಆ ಹೊತ್ತಿಗಾಗಲೇ ಜನರಿಂದಲೇ ಸಂಗ್ರಹಿಸಿದ ದವಸ ದಾನ್ಯದಿಂದ ಹಾಲುಗ್ಗಿ, ರಾಗಿಮುದ್ದೆ, ಬದನೆಕಾಯಿ ಬಜ್ಜಿ ಮಾಡಿ ಜನರಿಗೆಲ್ಲಾ ಪ್ರಸಾದವಾಗಿ ಹಂಚುತ್ತಾರೆ. ಈ ಸಂದರ್ಭದಲ್ಲಿ ಕೆಲವು ಹಟ್ಟಿಗಳಲ್ಲಿ ದನಗಳ ಕಿಚ್ಚಾಯಿಸುವ ಕಾರ್ಯವು ನಡೆಯುತ್ತದೆ.

**ಕಟ್ಟೆಮನೆ :**

ಕಾಡುಗೊಲ್ಲ ಜನಾಂಗದ ನ್ಯಾಯ ಪಂಚಾಯಿತಿ ಸ್ಥಾನಗಳನ್ನು ಕಟ್ಟೆ ಮನೆಗಳೆಂದು ಕರೆಯುತ್ತಾರೆ. ಇವುಗಳನ್ನು ಸ್ವತಃ ಜುಂಜಪ್ಪ ಎತ್ತಪ್ಪರೇ ರೂಪಿಸಿರುವರೆಂಬ ನಂಬಿಕೆ ಇವರಲ್ಲಿದೆ. ಈ ಜನಾಂಗದಲ್ಲಿ ಯಾವುದೇ ಸಮಸ್ಯೆಗಳು ತಲೆದೋರಿದರೆ ಅವು ತೀರ್ಮಾನವಾಗುವುದು ಈ ಕಟ್ಟೆ ಮನೆಗಳಲ್ಲಿಯೇ, ಆದರೆ ಇತ್ತೀಚೆಗೆ ಈ ಕಟ್ಟೆ ಮನೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿವೆ. ಸಂಪ್ರದಾಯ ಪರಿಪಾಲನೆಯಲ್ಲಿ ಕಾಡುಗೊಲ್ಲರು ಎಷ್ಟೇ ಜಿಗುಟು ಸ್ವಭಾವದವರಾದರೂ ಆಧುನಿಕತೆಯ ಪ್ರಭಾವ ಅವರ ಮೇಲೆ ಆಗದೆ ಹೋಗಿಲ್ಲ. ಇಂದು ಕಟ್ಟೆ ಮನೆಯ ನ್ಯಾಯ ತೀರ್ಮಾನಕ್ಕೆ ಮೊದಲು ಕೊಡುತ್ತಿದ್ದ ಗೌರವವನ್ನು ಕೊಡುತ್ತಿಲ್ಲ. ಕೋರ್ಟಿಗೆ ಹೋಗುವುದೇ ಹೆಚ್ಚಾಗಿದೆ. ಇಷ್ಟಾದರೂ ಇಂದಿಗೂ ಕಟ್ಟೆ ಮನೆಗಳಲ್ಲಿಯೇ ತಮ್ಮ ಜಗಳಗಳಿಗೆ ನ್ಯಾಯ ದೊರಕಿಸಿಕೊಳ್ಳುವವರೂ ಸಾಕಷ್ಟು ಜನ ಇದ್ದಾರೆ. ನ್ಯಾಯ ತೀರ್ಮಾನ ಕಾಡುಗೊಲ್ಲರಲ್ಲಿ ಬಹು ಮುಖ್ಯವಾದ ಅಂಶ, ಅವರು "ಹಾಲು ಅನ್ನ ಉಂಬೋರು, ಕುಂತು ನ್ಯಾಯ ಮಾಡೋರು; ತುಪ್ಪ ಅನ್ನ ಉಂಬೋರು ತೂಗಿ ನ್ಯಾಯ ಮಾಡೋರು" ಎಂದು ಜುಂಜಪ್ಪನ ಕಥೆಯಲ್ಲಿಯೇ ಒಂದು ಉಲ್ಲೇಖವಿದೆ. ಅವರಲ್ಲಿ ಹತ್ತಿದ ಜಗಳ ಅಷ್ಟು ಸರಳವಾಗಿ ಬಗೆಹರಿಯುವುದಿಲ್ಲ. ಕರಿ ಕಂಬಳಿ ಹಾಸಿ ನ್ಯಾಯಕ್ಕೆ ಕೂತರು ಅಂದರೆ ಹೊತ್ತು ಹೋದದ್ದೇ ಗೊತ್ತಾಗುವುದಿಲ್ಲ. "ಗೊಲ್ಲರ

ನ್ಯಾಯ ಊರೋರಿಗೆ ತಿಳಿಯಲ್ಲ, ಗೊಲ್ಲರಿಗೆ ಅರಿಯಲ್ಲ", "ಗೊಲ್ಲರಿಗೆ ಇಕ್ಕಿದ್ರೇ ಒಂದು ದೇವರು ಮಾಡಿದ್ರೇ ಒಂದು ಕತೆ, ಹೇಳಿದ್ರೇ ಒಂದು ನ್ಯಾಯ". ಎಂಬ ಗಾದೆ ಮಾತುಗಳೂ ಹುಟ್ಟಿಕೊಂಡಿವೆ. ಸಿರಾ ತಾಲ್ಲೂಕಿನ ಬೇವಿನಹಳ್ಳಿ, ಹುಲಿಕುಂಟೆ ಹೋಬಳಿಯ ರಾಮನ ಹಳ್ಳಿ, ಕಾಡುಗೊಲ್ಲರ ಪ್ರಮುಖ ಕಟ್ಟೆ ಮನೆಗಳಾಗಿವೆ. ಮಾರೇನೂರ ಗೊಲ್ಲರು, ಕರಡೇರ ಗೊಲ್ಲರು, ಕಂಬೇರ ಗೊಲ್ಲರುಗಳಿಗೆ ಪ್ರತ್ಯೇಕ ಪ್ರತ್ಯೇಕ ಕಟ್ಟೆ ಮನೆಗಳೂ ಅಸ್ತಿತ್ವದಲ್ಲಿವೆ.

**ಹೆಸರಿಡುವ ಸಂಪ್ರದಾಯ :**

ಸಾಂಸ್ಕೃತಿಕ ವೀರರ ಸ್ಮರಣಾರ್ಥ ಅವರ ಭಕ್ತರು ತಮ್ಮ ಮಕ್ಕಳಿಗೆ ಹಾಗೂ ಗ್ರಾಮಗಳಿಗೆ ವೀರರ ಹೆಸರಿಡುವುದು ಎಲ್ಲಾ ಭಾಗಗಳಲ್ಲೂ ಸರ್ವೇಸಾಮಾನ್ಯವಾಗಿ ಕಾಣುವ ಪದ್ಧತಿ.

ಪಾಳೇಗಾರ ರಂಗಪ್ಪನಾಯಕನ ಹಾಗೂ ರಂಗನಾಥನ ಗೌರವ, ನೆನಪಿನ ಸಲುವಾಗಿ ರಂಗಪ್ಪ, ರಂಗ ನಾಯಕ, ರಂಗನಾಥ, ರಂಗಮ್ಮ, ರಂಗನಹಳ್ಳಿ, ರಂಗಾಪುರು, ರಂಗನಾಥಪುರು, ಮೊದಲಾದ ಹೆಸರುಗಳನ್ನು ಹಾಗೂ ಬರಗೂರು ವೀರಮ್ಮಳ ಹೆಸರನ್ನು; ವೀರಮ್ಮ, ಈರಮ್ಮ, ವೀರಮಹೇಶ್ವರಿ, ವೀರಪ್ಪ, ವೀರನಹಳ್ಳಿ, ವೀರಾಪುರ ಎಂತಲೂ, ಬೊಪ್ಪರಾಯನ ಹೆಸರಿನಲ್ಲಿ; ಬೊಪ್ಪಣ್ಣ, ಬೊಪ್ಪೇಗೌಡ, ಜಲ್ದಪ್ಪ, ಜಲ್ದೇಶ, ಜಲ್ದಮ್ಮ ಎಂತಲೂ, ಜುಂಜಪ್ಪನ ಹೆಸರಲ್ಲಿ; ಜುಂಜಣ್ಣ, ಸಣ್ಣ ಜುಂಜಣ್ಣ, ದೊಡ್ಡ ಜುಂಜಣ್ಣ, ಜುಂಜಪ್ಪ, ಜುಂಜಮ್ಮ ಎಂತಲೂ, ಎತ್ತಪ್ಪನ ಹೆಸರಲ್ಲಿ; ಎತ್ತಪ್ಪ, ಎತ್ತಮ್ಮ, ಎತ್ತಯ್ಯ, ಎತ್ತಪ್ಪನಹಟ್ಟಿ, ಎತ್ತಪ್ಪನಕಟ್ಟೆ, ಎಂತಲೂ ವೀರರ ಹೆಸರುಗಳನ್ನಿಟ್ಟು ವೀರರಿಗೆ ಗೌರವ ಸೂಚಿಸುವ, ವೀರರ ಸ್ಮರಣೆಯನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ನಾವಿಲ್ಲಿ ಕಾಣಬಹುದು.

**ವ್ರತಗಳು :**

ಇದು ದಿನನಿತ್ಯದ ಪೂಜೆಗಿಂತ ಭಿನ್ನವಾದದ್ದು. ಒಬ್ಬ ನಿರ್ದಿಷ್ಟ ವ್ಯಕ್ತಿ ಅಥವಾ ಗುಂಪಾಗಲಿ ಧಾರ್ಮಿಕ ಉದ್ದೇಶದಿಂದ ನಿಯಮಗಳಿಗೆ ಬದ್ಧವಾಗಿ ನಡೆದುಕೊಳ್ಳುವುದಕ್ಕೆ ವ್ರತ ಎನ್ನಬಹುದು. ವ್ರತ ಎಂಬ ಪದಕ್ಕೆ 'ಬತ' ಎಂಬುದಾಗಿಯೂ ಬಳಸುತ್ತಾರೆ. ವೈಯಕ್ತಿಕವಾಗಿ ಆಚರಿಸುವ ವ್ರತಗಳೂ ಹಾಗೂ ಸಾಮೂಹಿಕ ಆಚರಣೆಯ ವ್ರತಗಳೂ ಉಂಟು. ವ್ರತ ಕೆಡಿಸುವುದನ್ನು ಬತ ಅಳಿಯುವುದು, ಬತ ಕೆಡಿಸುವುದು ಎಂತಲೂ ಕರೆಯುತ್ತಾರೆ. ಕಾಡುಗೊಲ್ಲ ಜನಾಂಗದಲ್ಲಿ ಎತ್ತಪ್ಪ, ಜುಂಜಪ್ಪರಿಗೆ ಹುರಿಳಿಬತ, ನವಣೆಬತ, ಹಾಲುಮೀಸಲು ಬತ ಆಚರಿಸುತ್ತಾರೆ. ಹುರುಳಿಬತ, ನವಣೆಬತಗಳನ್ನು ಆಚರಿಸುವವರು ವರ್ಷಕ್ಕೊಮ್ಮೆ ಶಿವರಾತ್ರಿ ಹಬ್ಬದಲ್ಲಿ ನಡೆವ ಕಾಳಿನ ಹಬ್ಬದಲ್ಲಿ ಬೇಯಿಸಿದ ಹುರುಳಿಯನ್ನೊ ಅಥವಾ ನವಣೆಯನ್ನೊ ಪ್ರಸಾದವೆಂದು ಸ್ವೀಕರಿಸಿ ವರ್ಷದ ಉಳಿದ ಯಾವ ದಿನಗಳಲ್ಲೂ ಬಳಸುವುದಿಲ್ಲ, ಕೈಯಿಂದ ಮುಟ್ಟುವುದೂ ಇಲ್ಲ. ಇದನ್ನೇ ಹುರುಳಿಬತ,

ನವಣೆಬತ, ಎನ್ನುವರು. ಅತ್ಯಂತ ಮಡಿ ಮೈಲಿಗೆಯಿಂದ ಹಾಲು ಕರೆದು ಹೆಪ್ಪಾಕಿ ತುಪ್ಪವನ್ನು ಮಾಡಿ ದೀಪಕ್ಕೆ ಕೊಡುವ ಹಾಲು ಮೀಸಲು ಸಂಪ್ರದಾಯವನ್ನು ಹಾಲು ಮೀಸಲು ಬತ ಎನ್ನುತ್ತಾರೆ.

ಕಾಡುಗೊಲ್ಲರ ಪೂಜಾರಿಯಂತೂ ಅತ್ಯಂತ ಹೆಚ್ಚು ವ್ರತಬದ್ಧವಾಗಿರಬೇಕು. ಈತ ಕಾಲಿಗೆ ಚಪ್ಪಲಿ ಹಾಕುವಂತಿಲ್ಲ, ನವಣೆ ಹುರುಳಿ ಹೊಲಗಳಲ್ಲಿ, ವಿದ್ಯುತ್ ತಂತಿಯ ಕೆಳಗೆ ಓಡಾಡುವಂತಿಲ್ಲ. ವಿದ್ಯುತ್ ತಂತಿಯ ನೆರಳು ತಾಗಿದರೆ ಮೈಲಿಗೆಯಾಗುತ್ತದೆಂದು ಭಾವಿಸುತ್ತಾರೆ. ಎತ್ತಿನಗಾಡಿ, ಬಸ್ಸುಗಳಲ್ಲಿ ಪ್ರಯಾಣಿಸುವಂತಿಲ್ಲ. ಮತ್ತೊಬ್ಬನ ಮನೆಯಲ್ಲಿ ಏನನ್ನೂ ತಿನ್ನದೆ ಕುಡಿಯದೆ ಬಾಯಿಬತವನ್ನು ಆಚರಿಸುವುದೂ ಉಂಟು.

ಬರಗೂರು ವೀರಮ್ಮಳ ವಂಶಜರಾದ ಅಳುವನವರು ಕೆಲವೊಂದು ಪ್ರದೇಶಗಳಲ್ಲಿ ತಾಯಂದಿರು ಅಳುತ್ತಿರುವ ಮಗುವಿಗೆ ಹಾಲು ಕೊಡದಂತೆ ವ್ರತಾಚರಣೆ ಮಾಡುತ್ತಾರೆ. ಕಾರಣ ಆ ಪ್ರದೇಶಗಳಲ್ಲಿ ವೀರಮ್ಮ ನೋವನ್ನನುಭವಿಸಿದಳು. ಅವಳ ಶಾಪ ಆ ಪ್ರದೇಶಗಳಲ್ಲಿದೆ ಎಂದು ನಂಬುತ್ತಾರೆ.

**ಎಡೆ ಹಾಕುವುದು :**

ಮಾಂಸಹಾರಿ ಸಸ್ಯಹಾರಿ ಎರಡೂ ಬಗೆಯ ದೇವತೆಗಳಿಗೂ ಎಡೆ ಹಾಕುವ ಸಂಪ್ರದಾಯವಿದೆ. ಬೇವಿನಹಳ್ಳಿ ಕರಿಯಮ್ಮನಿಗೆ ಮೊಸರನ್ನ ಎಡೆಹಾಕುತ್ತಾರೆ. ಎತ್ತಪ್ಪ, ಜುಂಜಪ್ಪರಿಗೆ ಬಲಿಕೊಡುವ ಬದಲಾಗಿ ಸಸ್ಯಹಾರವನ್ನು ಎಂದರೆ ನೆನೆಸಿದ ಹೆಸರುಬೇಳೆ, ಕಡಲೆಬೇಳೆ, ಬಾಳೆಹಣ್ಣು, ಸೌತೆಕಾಯಿ, ಹಾಲು, ಮೊಸರುಗಳನ್ನು ಎಡೆಮಾಡುತ್ತಾರೆ. ಬೂತಪ್ಪ ಕರಿಯಮ್ಮ ಮೊದಲಾದ ಮಾಂಸಹಾರಿಗಳಿಗೆ ಬೇಯಿಸದ ಹಸಿಮಾಂಸವನ್ನು ಎಡೆಹಾಕುತ್ತಾರೆ.

**ಮಣೆಸೇವೆ :**

ಈ ಆಚರಣೆಯನ್ನು ರಂಗನಾಥ, ಜುಂಜಪ್ಪ, ಎತ್ತಪ್ಪ, ಬೂತಪ್ಪನ ಒಕ್ಕಲುಗಳಲ್ಲಿ ಕಾಣಬಹುದು. ಹಬ್ಬ, ಜಾತ್ರೆ, ಉತ್ಸವಗಳಂದು ಈ ಸೇವೆ ಸಲ್ಲುತ್ತದೆ. ಇದು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವ್ಯತ್ಯಾಸವನ್ನು ಒಳಗೊಂಡಿರುತ್ತದೆ. ದೇವರ ಉತ್ಸವಗಳ ಸಂದರ್ಭದಲ್ಲಿ ದೇವರು ಗುಡಿಯಿಂದ ಹೊರ ಬಂದಾಗ, ನದಿಯಲ್ಲಿ ಪೂಜೆ ಮಾಡಿದಾಗ, ಹಟ್ಟಿಯ ಬಾಗಿಲಿಗೆ ದೇವರು ಬಂದಾಗ, ಮಹತ್ವವಾದ ದೇವರ ಕಾರ್ಯಕ್ರಮಗಳಿದ್ದಾಗ ಮಣೇವು ಕುಣಿತ ಇದ್ದೇ ಇರುತ್ತದೆ.

ಮಡಿವಾಳರು ತಂದ ಬಟ್ಟೆ ಇಲ್ಲವೇ ಕರಿ ಕಂಬಳಿಯನ್ನು ಮಡಚಿ ಅದರ ಮೇಲೆ ಬೆಲ್ಲ, ಬಾಳೆಹಣ್ಣು, ತೆಂಗಿನಕಾಯಿ, ಹಲಸಿನ ಹಣ್ಣಿನ ತೊಳೆಗಳು, ಮಂಡಕ್ಕಿ ಮೊದಲಾದ ಪದಾರ್ಥಗಳನ್ನು

ಮೂರು ಅಥವಾ ಐದು ಕುಪ್ಪೆ (ಗುಂಪು)ಗಳನ್ನಾಗಿ ಮಾಡಿ ಗದ್ದುಗೆ ಮಾಡಿ ಇಡುತ್ತಾರೆ. ಆಗ ದೇವರನ್ನು ಹೊತ್ತ ಜನ ಸೋಮಗಳನ್ನು ಹೊತ್ತವರು, ದೇವರ ಪರಿಕರಗಳನ್ನು ಹಿಡಿದವರು ದಾಸಪ್ಪ ಹೇಳಿಕೊಟ್ಟ ಹಾಗೆ ಪರಾಕು ಹೇಳುತ್ತಾ ಉರುಮೆಯ ಗತ್ತಿಗೆ ಹೆಜ್ಜೆಹಾಕಿ ಸುತ್ತಲೂ ಕುಣಿಯುತ್ತಾ ಆ ಫಲಾಹಾರವನ್ನು ಬಾಯಿಯಲ್ಲಿ ಬಾಚಿಕೊಂಡು ಭಕ್ಷಿಸುತ್ತಾರೆ. ಇದು ಒಂದು ಅನುಭವದ ಜನಪದ ಕಲೆಯಾಗಿದೆ. ಕೆಂಪು ಸೋಮ, ಕರಿಸೋಮಗಳನ್ನ ಮುಖಕ್ಕೆ ಹಾಕಿಕೊಂಡು ಉರುಮೆ ವಾದ್ಯಕ್ಕೆ ತಕ್ಕಂತೆ ಕುಣಿಯುತ್ತಾ ಮಣೇವು ತಿರುಗುವ ದೃಶ್ಯ ನೋಡಲು ಕುತೂಹಲಕಾರಿಯಾಗಿರುತ್ತದೆ. ಇತ್ತೀಚೆಗೆ ಮಣೇವು ಕುಣಿತದ ಮಹತ್ವ ಕಡಿಮೆಯಾಗುತ್ತಿದೆ. ಕೇವಲ ಕಾಟಾಚಾರಕ್ಕೆ ಸಾಂಕೇತಿಕವಾಗಿ ಮಣೇವು ಇಟ್ಟು ಲಯಬದ್ಧತೆ ಇಲ್ಲದೆ ಕುಣಿಯುವ ಪದ್ಧತಿ ಇತ್ತೀಚೆಗೆ ಕಂಡುಬರುತ್ತಿದೆ.

**ಹರಿಸೇವೆ :**

ಹರಿಸೇವೆ ಗುಡ್ಡದ ರಂಗನಾಥನ ಭಕ್ತರಲ್ಲಿ ವಿಶೇಷವಾಗಿ ಆಚರಣೆಯಲ್ಲಿರುವುದನ್ನು ಕಾಣಬಹುದು. ವರ್ಷದ ನಿರ್ದಿಷ್ಟ ದಿನದಂದು ಒಕ್ಕಲುಗಳಿಗೆಲ್ಲಾ ಹರಿಸೇವೆಯ ದಿನವನ್ನು ತಿಳಿಸುತ್ತಾರೆ. ಆ ದಿನದಂದು ಒಕ್ಕಲು ಮಕ್ಕಳೆಲ್ಲಾ ಆ ಸನ್ನಿದಿಗೆ ಬಂದು ಸೇರುತ್ತಾರೆ. ಈ ಸಂದರ್ಭದಲ್ಲಿ ಅಂಡೆ ಮಂಡೆ, ನಾಮಕರಣ ಮೊದಲಾದ ಕಾರ್ಯಕ್ರಮಗಳೂ ಜರುಗುತ್ತವೆ. ತಾವು ಬರುವಾಗಲೇ ಎಲ್ಲಾ ಪಾತ್ರೆ ಪದಾರ್ಥಗಳನ್ನು ತಂದು ಅತ್ಯಂತ ಮಡಿ ಮೈಲಿಗೆಯಿಂದ ಅಡಿಗೆ ಮಾಡಿ, ದೇವರ ಪೂಜಾ ಕಾರ್ಯಕ್ರಮ, ಮಣೇವು ಸೇವೆ ಆದ ಬಳಿಕ ಎಲ್ಲರೂ ಒಟ್ಟಾಗಿ ಸಾಮೂಹಿಕ ಭೋಜನ ಮಾಡುತ್ತಾರೆ. ಇದೇ ಸಂದರ್ಭದಲ್ಲಿ ಜನರು ತಮ್ಮ ಇತರೆ ಎಲ್ಲಾ ಹರಕೆಗಳನ್ನು ಒಪ್ಪಿಸುತ್ತಾರೆ. ಸಂಜೆಯವರೆಗೂ ಸನ್ನಿಧಿಯಲ್ಲಿ ಕಾಲಕಳೆದು ನಂತರ ಎಲ್ಲರೂ ಒಟ್ಟಾಗಿ ತಮ್ಮ ತಮ್ಮ ಊರುಗಳಿಗೆ ವಾಪಸ್ಸಾಗುತ್ತಾರೆ.

**ಕಣಿ ಮತ್ತು ಭವಿಷ್ಯ :**

ಮಾನವ ತನ್ನ ಪಂಚೇಂದ್ರಿಯಗಳ ಮೂಲಕ ಸಾಧ್ಯವಾಗದ ಆದರೆ ಅತೀಂದ್ರಿಯ ಶಕ್ತಿಯಿಂದ ತಿಳಿಯಲು ಸಾಧ್ಯವಾಗುವ ಕ್ರಮವನ್ನು ಕಣಿ ಎಂದು ಕರಿಯಲಾಗುತ್ತದೆ. ಮತ್ತೊಬ್ಬರ ಮನಸ್ಸಿನ ಆಲೋಚನೆಗಳನ್ನು ತಿಳಿಯುವುದು, ಕಳೆದುಹೋದ ವಸ್ತುವನ್ನು ಪತ್ತೆ ಹಚ್ಚುವುದು, ಮುಂದೆ ಏನಾಗುತ್ತದೆ ಎಂಬುದನ್ನು ಮೊದಲೇ ತಿಳಿಯುವುದು ಕಣಿ ಕೇಳುವ ಮುಖ್ಯ ಉದ್ದೇಶ. ಭವಿಷ್ಯ ಹೇಳುವುದು ಎಂದರೆ ಅತೀಂದ್ರಿಯ ಶಕ್ತಿಯಿಂದ ಮುಂದಾಗುವುದನ್ನು ತಿಳಿಯುವುದು. ಕಣಿ ಎಂಬುದು ವಿಶಾಲ ಅರ್ಥವ್ಯಾಪ್ತಿಯ ಪದ, ಭವಿಷ್ಯ ಹೇಳುವುದು ಕಣಿಯ ಒಂದು ಭಾಗವಾಗಿ ಬರುತ್ತದೆ. ಕಣಿಯನ್ನು ಎರಡು ವಿಧಾನಗಳಲ್ಲಿ ಹೇಳಲಾಗುವುದು. ಒಂದು ಆಂತರಿಕ ವಿಧಾನ.

ಇದರಲ್ಲಿ ಅಂಜನ ಹಚ್ಚಿ ನೋಡುವುದು ಹಾಗೂ ಗಣೆ ಊದಿ ಶಾಸ್ತ್ರ ಹೇಳುವುದು. ಎರಡನೇ ವಿಧಾನದಲ್ಲಿ ಮೊರದಲ್ಲಿ ಅಕ್ಕಿಕಾಳು ಎಣಿಸಿ ಶಾಸ್ತ್ರ ಹೇಳುವುದು, ವೀಳೆಯದೆಲೆಯಲ್ಲಿ ಶಾಸ್ತ್ರ ಹೇಳುವುದು. ಪಂಚೇಂದ್ರಿಯ ಶಕ್ತಿಗೆ ಮೀರಿ ಜಗತ್ತಿನಲ್ಲಿ ಮುಂದೆ ನಡೆವ ವಿದ್ಯಮಾನಗಳನ್ನು ತಿಳಿಯುವುದು ಸಾಧ್ಯ ಎಂಬ ತತ್ವ ಇದರಲ್ಲಿ ಅಡಗಿದೆ.

ಜುಂಜಪ್ಪ ಎತ್ತಪ್ಪರ ಕಾವ್ಯಗಳಲ್ಲಿ ಗೌರಸಂದ್ರದ ಮಾರಮ್ಮ, ಬೇವಿನಹಳ್ಳಿ ಕರಿಯಮ್ಮರು ಕಣಿ ಹೇಳುವವರ ರೂಪದಲ್ಲಿ ಕಾಣಿಸಿಕೊಂಡು ಎತ್ತಪ್ಪ ಜುಂಜಪ್ಪರಿಗೆ ಮುಂದೆ ಎದುರಾಗುವ ಗಂಡಾಂತರಗಳ ಬಗ್ಗೆ ಸೂಚನೆ ಕೊಡುತ್ತಾರೆ. ಜುಂಜಪ್ಪ ಎತ್ತಪ್ಪರು ಮುಂದೆ ನಡೆಯಬಹುದಾದ ವಿಷಯಗಳನ್ನು ಮೊದಲೇ ತಿಳಿಯಬಲ್ಲ ಶಕ್ತಿಯುಳ್ಳವರು. ಮುಂದೆ ನಡೆವ ಘಟನೆಗಳ ಬಗ್ಗೆ ಇವರಿಗೆ ಮುಂಗನಸ್ಸು ಬೀಳುತ್ತದೆ. ಇದೇ ರೀತಿ ಬಟ್ಟಣ್ಣ, ಬಡಮ್ಮೈಲ ಎಂಬ ಎತ್ತುಗಳಿಗೂ, ಸೀಳುತಲೆ ಚಿಕ್ಕರೆಂಬೆ ಎಂಬ ಹಸುವಿಗೂ ಮುಂಗನಸ್ಸು ಬೀಳುತ್ತದೆಂದು ಜುಂಜಪ್ಪನ ಕಾವ್ಯದಿಂದ ತಿಳಿದುಬರುತ್ತದೆ. ಒಮ್ಮೆ ಚೇಳೂರು ಕಾವಲಿನಲ್ಲಿ ಬಡಮ್ಮೈಲನನ್ನು ಕಂಬಕ್ಕೆ ಕಟ್ಟಿ ಹುಲ್ಲು ನೀರು ಕೊಡದೆ ಹೊಡೆಯುತ್ತಿರುತ್ತಾರೆ. ಆ ಸಂದರ್ಭದಲ್ಲಿ ಜುಂಜಪ್ಪ ತನ್ನ ತಾಯಿ ಸಿನ್ನಮ್ಮನಿಂದ ತಲೆಗೆ ಎಣ್ಣೆ ತಿಕ್ಕಿಸಿಕೊಳ್ಳುತ್ತಿರುತ್ತಾನೆ. ಕಂಚಿನ ಬಟ್ಟಲಲ್ಲಿದ್ದ ಮಿಂಚಿನ ಎಣ್ಣೆಯಲ್ಲಿ ಬಡ ಮ್ಮೈಲನನ್ನು ಕಂಬಕ್ಕೆ ಕಟ್ಟಿ ಹೊಡೆಯುತ್ತಿರುವ ಚಿತ್ರ ಕಾಣಿಸುತ್ತದೆ. ಕೂಡಲೆ ಅದನ್ನು ಬಿಡಿಸಲು ಅಲ್ಲಿಂದ ಹೊರಡುತ್ತಾನೆ. ಇದೇ ರೀತಿ ಒಮ್ಮೆ ಜುಂಜಪ್ಪನ ಮಾವಂದಿರು ಪುರುಸಮ್ಮನ ಕೆರೆಗೆ ಮಾಟಶೂನ್ಯ ಮಾಡಿಸಿ ಆ ನೀರನ್ನು ಕುಡಿದ ಜುಂಜಪ್ಪನ ದನಗಳು ಸಾಯುವಂತೆ ಕುತಂತ್ರ ಮಾಡಿರುತ್ತಾರೆ. ಆಗ ಜುಂಜಪ್ಪ ಅದನ್ನು ಮುಂಗನಸಿನ ಮೂಲಕ ತಿಳಿದು ಆ ವಿಷಯವನ್ನೆಲ್ಲಾ ಹೀರಿಕೊಂಡು ನೀರನ್ನು ಶುದ್ಧಗೊಳಿಸುತ್ತಾನೆ. ಹೀಗೆ ಜುಂಜಪ್ಪ, ಎತ್ತಪ್ಪರ ಕಾವ್ಯಗಳಲ್ಲಿ ಮುಂದೆ ನಡೆವ ಘಟನೆಗಳನ್ನು ಮೊದಲೇ ತಿಳಿಯುವ ಭವಿಷ್ಯ ಹಾಗೂ ಕಣಿಯ ಪ್ರಸ್ತಾಪವಿದೆ. ಹೀಗೆ ಜನಪದ ಕಲಾವಿದರು ವೀರರಿಗಿರುವ ಅತಿಮಾನುಷ ಶಕ್ತಿಯನ್ನು ಹೇಳಿ ಆ ಮೂಲಕ ಅವರನ್ನು ಅಸಮಾನ್ಯ ವ್ಯಕ್ತಿಗಳನ್ನಾಗಿ ಚಿತ್ರಿಸಿದ್ದಾರೆ.

ಪುರಲೇಹಳ್ಳಿ ಬೂತಪ್ಪನ ಬೆನವಗಳಿಗೆ ಬಿಡಿ ಹೂಗಳಿಂದ ಅಲಂಕರಿಸಿ ಕಣಿ ಕೇಳುವ ಸಂಪ್ರದಾಯ ರೂಢಿಯಲ್ಲಿದೆ. ಬೆನವಗಳಿಗೆ ಅಲಂಕರಿಸಿ, ಪೂಜಿಸಿ ತಮ್ಮ ಕಷ್ಟಗಳು ನಿವಾರಣೆ ಆಗುತ್ತವೊ ಇಲ್ಲವೊ, ಎಷ್ಟು ದಿನಗಳ ನಂತರ ನಿವಾರಣೆಯಾಗುತ್ತವೆ ಎಂದು ಕೇಳಿಕೊಳ್ಳುತ್ತಾರೆ. ಬಲಗಡೆಗೆ ಹೂ ಕೊಟ್ಟರೆ ತಾವು ಅಂದು ಕೊಂಡಂತೆ ಸುಖವಾಗುತ್ತದೆ. ಎಡಗಡೆಗೆ ಹೂ ಕೊಟ್ಟರೆ ಅಂದು ಕೊಂಡಂತೆ ಆಗುವುದಿಲ್ಲ ಎಂದು ಭಾವಿಸುತ್ತಾರೆ. ಮನುಷ್ಯರೊಂದಿಗೆ ಮುಖಾಮುಖಿ ಮಾತನಾಡಿದಂತೆಯೇ ನೇರವಾಗಿ, ಆತ್ಮೀಯತೆಯಿಂದ ಗಟ್ಟಿ ಧ್ವನಿಯಲ್ಲಿ 'ಹೂ ಕೊಡಪ್ಪ' ಎಂದು ಕೇಳುತ್ತಾರೆ. ಹೂ ಕೊಟ್ಟ ನಂತರ ಮತ್ತೊಮ್ಮೆ ಪೂಜೆ ಸಲ್ಲಿಸುತ್ತಾರೆ. ಇದು ಮಂಗಳವಾರ ಮತ್ತು

ಶುಕ್ರವಾರದ ದಿನಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಮಳೆ ಯಾವಾಗ ಬರುತ್ತದೆ? ಬಂದಿರುವ ಮಾರಿ ಹೋಗಬೇಕಾದರೆ ಏನು ಮಾಡಬೇಕು ಎಂದು ಗ್ರಾಮಸ್ಥರ ಪರವಾಗಿ ಗೌಡ ಕಟ್ಟೆಮನೆ ಯಜಮಾನರು ಕೇಳಿಕೊಳ್ಳುತ್ತಾರೆ. ಹೀಗೆ ಜನಪದರು ಕಣಿ ಕೇಳಿ ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಪ್ರಯತ್ನ ಮಾಡುತ್ತಾರೆ. ಗಣೆ ಊದಿ ಕಣಿ ಹೇಳುವ ಸಂಪ್ರದಾಯವೂ ಪ್ರಚಲಿತದಲ್ಲಿದೆ. ಜೋತಿಷ್ಯ ಶಾಸ್ತ್ರವನ್ನು ಪಠ್ಯಪುಸ್ತಕದಲ್ಲಿ ಸೇರಿಸುವ ವಿಚಾರವಾಗಿ ನಡೆಯುತ್ತಿರುವ ವಾದ ವಿವಾದಗಳ ಇಂದಿನ ಸಂದರ್ಭದಲ್ಲಿ ಇದು ಅತ್ಯಂತ ಮಹತ್ವದ ವಿಚಾರ ವಸ್ತುವಾಗಿದೆ.

ಬಲಿ

ಪುರಲೇಹಳ್ಳಿ ಬೂತಪ್ಪ ಹಾಗೂ ಬೇವಿನಹಳ್ಳಿ ಕರಿಯಮ್ಮಳಿಗೆ ಸಲ್ಲಿಸುವ ಧಾರ್ಮಿಕ ಸೇವೆಗಳಲ್ಲಿ ಬಲಿಕಾರ್ಯ ಅತೀ ಮುಖ್ಯವಾದದ್ದು. ಪುರಲೇಹಳ್ಳಿ ಬೂತಪ್ಪನಿಗೆ ಪ್ರತೀ ದಿನ ಬಲಿಯ ಕಾರ್ಯ ನಡೆಯುತ್ತಲೇ ಇರುತ್ತದೆ. ಮಂಗಳವಾರ ಹಾಗೂ ಶನಿವಾರ ಹೆಚ್ಚಾಗಿ ನಡೆಯುತ್ತದೆ. ಯುಗಾದಿ ಹಬ್ಬದ ಮರುದಿನ ಬೂತಪ್ಪನ ಜಾತ್ರೆಯ ಸಂದರ್ಭದಲ್ಲಿ ಪ್ರಾಣಿಗಳ ಬಲಿ ಕೊಡಲಾಗುತ್ತದೆ. ಆ ದಿನದಂದು ರಕ್ತವು ನೋಡುಗರಿಗೆ ಭಯ ಹುಟ್ಟಿಸುವಂತ ದೃಶ್ಯ ಏರ್ಪಟ್ಟಿರುತ್ತದೆ. ಸಾಮಾನ್ಯವಾಗಿ ಕೋಳಿ, ಕುರಿ, ಮೇಕೆಗಳನ್ನು ಬಲಿ ಕೊಡಲಾಗುತ್ತದೆ. ಜುಂಜಪ್ಪ, ಬೂತಪ್ಪನಿಗೆ ಪ್ರತೀ ಯುಗಾದಿಯ ಮರುದಿನ ನಿನಗೆ ರಕ್ತದ ಅಭಿಷೇಕವಾಗಲಿ ಎಂದು ಆಶೀರ್ವಾದಿಸಿರುವನೆಂದು ಜನಪದರು ನಂಬಿದ್ದಾರೆ. ಬೇವಿನಹಳ್ಳಿ ಕರಿಯಮ್ಮಳಿಗೂ ಇದೇ ರೀತಿ ಬಲಿಯ ಕಾರ್ಯ ನಡೆಯುತ್ತದೆ.

**ಸಾಂಸ್ಕೃತಿಕ ವೀರರ ಜಾತ್ರಾ ಮಹೋತ್ಸವಗಳು :**

ಜಾತ್ರೆ ಸಾಮೂಹಿಕವಾಗಿ ಮಾತ್ರ ನಡೆಯುವಂತಹದ್ದು. ಜಾತ್ರೆಗೆ ಬಹು ದೂರದಿಂದಲೂ ಜನ ಬಂದು ಸೇರುವರು. ಅಂದರೆ ಜಾತ್ರೆಗೆ ಅವರು ಬರಬೇಕಾದರೆ ಯಾತ್ರೆ ಮಾಡಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಜಾತ್ರೆ ಎಂಬ ಶಬ್ದ ತನ್ನ ತತ್ಸಮರೂಪವಾದ ಯಾತ್ರಾ ಎಂಬುದರ ಅರ್ಥವನ್ನು ಉಳಿಸಿಕೊಂಡಿದೆ. ಸಾಂಸ್ಕೃತಿಕ ವೀರರ ಜಾತ್ರೆಗಳು ಇಲ್ಲಿಯ ಸ್ಥಳೀಯ ಐತಿಹಾಸಿಕ, ಧಾರ್ಮಿಕ. ಸಾಂಸ್ಕೃತಿಕ ಮಹತ್ವವನ್ನು ಪರಿಚಯಿಸುವ ಮಹತ್ವದ ದಾಖಲೆಗಳಾಗಿವೆ. ವೀರರ ಮೌಲ್ಯ, ನಂಬಿಕೆ, ಸಂಪ್ರದಾಯಗಳನ್ನು ಆಚರಣೆಯಲ್ಲಿ ಉಳಿಸುವ ಜೀವಂತವಾಗಿಸುವ ಕೆಲಸವನ್ನು ಜಾತ್ರಾ ಮಹೋತ್ಸವಗಳು ಮಾಡುತ್ತವೆ. ಸಾಮಾಜಿಕ ಭಾವೈಕ್ಯತೆಯನ್ನು ಬೆಳೆಸುವ ಮಹತ್ವದ ಪಾತ್ರವನ್ನೂ ವಹಿಸುತ್ತವೆ. ವೀರರ ಧಾರ್ಮಿಕ ಆರಾಧನಾ ಸ್ಥಳಗಳಲ್ಲಿ ಇವು ನಡೆಯುತ್ತವೆ. ಈ ಸಂದರ್ಭಗಳಲ್ಲಿ ವೀರಮ್ಮ, ಜುಂಜಪ್ಪ, ಎತ್ತಪ್ಪ, ರಂಗನಾಥನ ಕುರಿತ ಕಾವ್ಯಗಳನ್ನು, ಪದಗಳನ್ನು ಹಾಡಲಾಗುತ್ತದೆ. ವೀರರು ರೂಪಿಸಿದ ಸಂಪ್ರದಾಯಗಳನ್ನು ಆಚರಿಸುವುದರೊಂದಿಗೆ ಅವರಿಗೆ ಗೌರವ ತೋರುವ

ಸಮಾರಂಭ ಆಗಿದೆ. ಇಲ್ಲಿಯ ಬಹುತೇಕ ಜಾತ್ರೆಗಳು ಸ್ಥಳೀಯ ವೀರರ ಸಂಬಂಧವಾಗಿ ಹುಟ್ಟು ಪಡೆದವುಗಳು ಎಂಬುದು ಗಮನಾರ್ಹ. ಅವುಗಳಲ್ಲಿ ಪ್ರಮುಖವಾಗಿ ಮರಡೀಗುಡ್ಡ, ಮಾಗೋಡು, ಗಿಡಗನಹಳ್ಳಿ, ಪಟ್ಟನಾಯಕನ ಹಳ್ಳಿ, ಬರಗೂರು, ಕಳುವೊರಹಳ್ಳಿ, ತಾವರೆಕೆರೆ ಮೊದಲಾದವುಗಳು ಈ ಜಾತ್ರಾ ಮಹೋತ್ಸವಗಳ ಆಚರಣಾ ವಿಧಾನ ಆಚರಿಸುವ ಕಾಲ, ವಿಧಿ ವಿಧಾನಗಳನ್ನು ಇಲ್ಲಿ ಅಧ್ಯಯನ ಮಾಡಬಹುದಾಗಿದೆ.

**ಮಾಗೋಡು ರಂಗನ ಜಾತ್ರೆ :**

ರಂಗನಾಥನ ಆರಾಧನಾ ಸ್ಥಳವೇ ಮಾಗೋಡು. ಇಲ್ಲಿ ವರ್ಷಕ್ಕೊಮ್ಮೆ ಮಾರ್ಗಶಿರ ಮಾಸದ ಶುದ್ಧ ಪೌರ್ಣಮಿಯ ಮೊದಲ ಅಮಾವಾಸೆಯ ದಿನದಂದು ಆರಂಭವಾದ ಈ ಜಾತ್ರೆ (ಫೆಬ್ರವರಿ ತಿಂಗಳು) ಎಂಟು ದಿನಗಳ ಕಾಲ ನಡೆಯುತ್ತದೆ.

ಮೊದಲ ಕಾರ್ಯಕ್ರಮವಾಗಿ ಜಲದಿ ಎಂದರೆ ಗಂಗಾಸ್ನಾನ ಶನಿವಾರದಂದು ಗರುಡೋತ್ಸವ, ನೂರೊಂದು ಎಡೆ ಹಾಕುವುದು, ಸೋಮವಾರ ಹೂವಿನ ರಥೋತ್ಸವ. ಇದು ಕರ್ನಾಟಕದಲ್ಲೇ ಹೂವಿನ ರಥೋತ್ಸವಕ್ಕೆ ಹೆಸರುವಾಸಿಯಾದದ್ದು ಈ ದಿನ ಲಕ್ಷಾಂತರ ಜನ ಕಲೆಯುತ್ತಾರೆ. ಈ ದಿನದಂದು ಪೂಜಾರಿ ಮುಳ್ಳಿನ ಪಲ್ಲಕ್ಕಿಯ ಮೇಲೆ ಮಲಗಿ ಸೇವೆ ಸಮರ್ಪಿಸುತ್ತಾನೆ. ಮಂಗಳವಾರ ಅಕ್ಕಿ ಅಳೆಯುವುದು, ಬುಧವಾರ ಮಂಡೆಸೇವೆ, ಗುರುವಾರ ಅನ್ನ ಸಂತರ್ಪಣೆ, ಶುಕ್ರವಾರ ಜಾಡಿ ಲೆಕ್ಕಾಚಾರ ಎಂದರೆ ದೇವರ ಹುಂಡಿಯನ್ನು ಹೊಡೆದು ಹಣಕಾಸಿನ ಲೆಕ್ಕವನ್ನು ಮಾಡುವುದು, ಶನಿವಾರ ಮರುಪೂಜೆ ಹಾಗೂ ಪಂಜಿನಸೇವೆ ನಂತರ ಜಂಡೇವು ಮರ ಇಳಿಸುವುದು ಮೊದಲಾದ ಕಾರ್ಯಗಳು ನಡೆಯುತ್ತವೆ. ಮಗುವಿನ ತುಲಾಭಾರ ಎಂದರೆ ಮಗುವಿನ ತೂಕದ ಹೂವನ್ನು ದೇವರ ರಥೋತ್ಸವಕ್ಕೆ ಕೊಡುವ ಕಾರ್ಯಗಳು ನಡೆಯುತ್ತವೆ.

ಮಾಗೋಡು ಗೊಲ್ಲರ ಹಟ್ಟಿಯಲ್ಲಿ ಐದಾರು ಎಕರೆ ಪ್ರದೇಶದಲ್ಲಿರುವ ರಂಗನಾಥನ ದೇವಾಲಯದಲ್ಲಿ ಕಾಡುಗೊಲ್ಲರ ದೈವಗಳಾದ ಬೂತಪ್ಪ, ಎಲ್ಲಮ್ಮ, ಚಿತ್ರದೇವರ ಗುಡಿಗಳೂ ರಂಗನಾಥ ದೇವಾಲಯದ ಆವರಣದಲ್ಲೇ ಇವೆ. ರಾಜ್ಯದಲ್ಲಿಯೇ ಅತಿ ದೊಡ್ಡ ಹೂವಿನ ತೇರು ಎಂದು ಹೆಸರಾಗಿರುವ ಈ ಜಾತ್ರೆಗೆ ಆಂಧ್ರ, ಕರ್ನಾಟಕ, ಮಹಾರಾಷ್ಟ್ರಗಳಿಂದ ಭಕ್ತರು ಬರುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ಜನಪದ ಕಲಾವಿದರಾದ ಜೋಗೇರ ದಾಸನ್ನ, ಕಂಬಣ್ಣ, ಚಿತ್ರಪ್ಪ, ಈರಜ್ಜಿ ಮೊದಲಾದವರು ಪದಗಳನ್ನು ಹಾಡುತ್ತಾರೆ. ರಂಗನಾಥನ ಕಥೆ ಮಾಡುತ್ತಾರೆ. ಜಾತ್ರೆ ಕ್ರಮವಾಗಿ ಈ ರೀತಿಯಲ್ಲಿ ನಡೆಯುತ್ತವೆ.

ಜಲದಿ : ಜಾತ್ರೆ ಪ್ರಾರಂಭವಾದ ಮೊದಲ ದಿನ ಎಂದರೆ ಶನಿವಾರದಂದು ಮುಂಜಾನೆ ರಂಗನಾಥನ ಜೊತೆಗೆ ಎಲ್ಲಮ್ಮ, ಚಿತ್ರದೇವರು, ಬೂತಪ್ಪ ದೇವರುಗಳನ್ನು ಹತ್ತಿರದ ಕೆರೆಯಂಗಳಕ್ಕೆ ಉತ್ಸವದೊಂದಿಗೆ ಕರೆದೊಯ್ಯುತ್ತಾರೆ. ಹಳ್ಳದಲ್ಲಿ ಹೊಸದಾಗಿ ಚಿಲುಮೆ ತೋಡಿ ಹೊಸ ನೀರಿನಲ್ಲಿ

ದೇವರುಗಳನ್ನು ತೊಳೆಯುತ್ತಾರೆ. ವೀರರ ಆಯುಧಗಳಾದ ಲೋಹದ ಕೋಲು, ಕುದುರೆ, ಆನೆ ಮೊದಲಾದವುಗಳನ್ನು ಪೂಜಾರಿಯ ನೇತೃತ್ವದಲ್ಲಿ ತೊಳೆಯುತ್ತಾರೆ. ನಂತರ ಹೊಳೆಯ ದಡದಲ್ಲಿ ದೇವರುಗಳನ್ನಿಟ್ಟು ಗಂಗೆಗೆ ಹೊಸ ವಸ್ತ್ರವಿಟ್ಟು ಎಲೆ, ಅಡಿಕೆ, ಹೂ ಹಣ್ಣು, ಬಳೆ, ಬಿಚ್ಚೋಲೆ, ಕುಂಕುಮ, ನೆನೆಗಡಲೆ, ಮೊದಲಾದವುಗಳನ್ನಿಟ್ಟು ಗಂಗಾಪೂಜೆ ಸಲ್ಲಿಸುತ್ತಾರೆ. ನಂತರ ಮಂಗಳ ವಾದ್ಯಗಳೊಡನೆ ನಡೆಮಡಿಯ ಮೇಲೆ ವಾಪಸ್ಸಾಗುತ್ತಾರೆ. ಅರ್ಧದಾರಿಯಲ್ಲಿ ಒಂದು ಮರಿಯನ್ನು ಬಲಿಕೊಡುತ್ತಾರೆ.

**ಗರುಡೋತ್ಸವ :** ಭಾನುವಾರದ ದಿನದಂದು ಗರುಡ ವಾಹನವನ್ನು ಹೊಸ ನೀರಿನಲ್ಲಿ ತೊಳೆದು ತೇರಿನ ಮೇಲಿಟ್ಟು ಅದರ ಮೇಲೆ ರಂಗನಾಥನನ್ನಿಟ್ಟು ಅಲಂಕರಿಸಿ ಮೆರವಣಿಗೆ ಮಾಡುತ್ತಾರೆ.

**ಹೂವಿನ ರಥೋತ್ಸವ :** ಜಾತ್ರೆ ಪ್ರಾರಂಭವಾದ ಮೂರನೇ ದಿನ ಸೋಮವಾರದಂದು ಹೂವಿನ ತೇರು ನಡೆಯುತ್ತದೆ. ದೊಡ್ಡದಾದ ಕಲ್ಲುಗಾಲಿ ರಥಕ್ಕೆ ಹೂವಿನಿಂದ ಅಲಂಕರಿಸುತ್ತಾರೆ. ಈ ಸಂದರ್ಭದಲ್ಲಿ ಹರಕೆ ಹೊತ್ತವರು ದೇವರಿಗೆ ಹೂ ಹಾಕಿಸುವ ಹರಕೆ ತೀರಿಸುತ್ತಾರೆ. ಮಗುವಿನ ತೂಕ ನಾಣ್ಯ, ಹೂ ಕೊಡುವ ತುಲಾಭಾರ ಸೇವೆ ನಡೆಯುತ್ತದೆ. ಈ ದಿನದಂದು ದೇವಾಲಯದ ಮುಂದೆ ಒಂದು ದೊಡ್ಡ ಹೂವಿನ ರಾಶಿಯೇ ನಿಂತಿರುತ್ತದೆ. ಮಧ್ಯಾನದ ಹೊತ್ತಿಗೆ ತೇರಿನ ಗಾಲಿಗೆ ವಿವಿಧ ಬಗೆಯ ಬಣ್ಣದ ಅನ್ನದಿಂದ ಶಾಂತಿ ಮಾಡುತ್ತಾರೆ. ನಂತರ ವಿಶೇಶವಾಗಿ ಬ್ರಾಹ್ಮಣರು ರಂಗನಾಥನನ್ನು ಅಲಂಕರಿಸಿದ ತೂಗು ಮರದ ಉಯ್ಯಾಲೆಯ ಮೇಲಿಟ್ಟು ತೂಗುತ್ತಾರೆ. ಇದನ್ನು ಉಯ್ಯಾಲೋತ್ಸವ ಎನ್ನುತ್ತಾರೆ. ಕಲಾವಿದರು ರಂಗನಾಥನ ಮೇಲೆ ಪದ ಹಾಡುತ್ತಾರೆ. ಪೂಜಾರಿ ಜಾಲಿ ಹಾಗೂ ಕಾರೆ ಮುಳ್ಳುಗಳಿಂದ ತುಂಬಿದ ಪಲ್ಲಕ್ಕಿ ಮೇಲೆ ಮಲಗಿ ಮುಳ್ಳಿನ ಪಲ್ಲಕ್ಕಿ ಸೇವೆ ಸಲ್ಲಿಸುತ್ತಾನೆ. ದಾಸಯ್ಯ ಉರಿವ ಪಂಜನ್ನಿಡಿದು ದೊಡ್ಡದಾದ ಶಂಖವನ್ನು ಊದುತ್ತಾನೆ. ಇವನನ್ನು ಪಂಜಿನ ದಾಸಯ್ಯ ಎನ್ನುತ್ತಾರೆ. ಮಧ್ಯಾನ್ಹ ಎರಡು ಗಂಟೆಯ ಹೊತ್ತಿಗೆ ಮಡಿ ತೇರು ನಡೆಯುತ್ತದೆ. ಬೀದಿಯಿಂದ ಒಂದು ಫರ್ಲಾಂಗ್ ದೂರದವರೆಗೆ ಎಳೆಯುತ್ತಾರೆ. ನಂತರ ರಾತ್ರಿ ಹತ್ತು ಗಂಟೆಗೆ ಮೂಲಗುಡಿಯ ಹತ್ತಿರ ಮತ್ತೆ ರಥವನ್ನು ಎಳೆಯುತ್ತಾರೆ. ಇದನ್ನು ಮೈಲಿಗೆ ತೇರು ಎನ್ನುತ್ತಾರೆ. ಮಧ್ಯರಾತ್ರಿಯ ನಂತರ ತೇರು ಮೂಲ ಸ್ಥಾನವನ್ನು ಸೇರುತ್ತದೆ. ಆಗ ಬೆಳಗಿನಿಂದಲೂ ಉಪವಾಸ ವ್ರತ ಆಚರಿಸಿದವರು ವ್ರತವನ್ನು ಬಿಟ್ಟು ಪೂಜೆ ಸಲ್ಲಿಸುತ್ತಾರೆ.

**ಆಂಜನೇಯ ಉತ್ಸವ :** ಮಂಗಳವಾರ ರಾತ್ರಿ ಹತ್ತುಗಂಟೆಯ ಹೊತ್ತಿಗೆ ಗ್ರಾಮದ ಆಂಜನೇಯನನ್ನು ತೊಳೆದು ಅಲಂಕರಿಸಿ ಚಿಕ್ಕ ರಥದ ಮೇಲಿಟ್ಟು ಊರಿನ ಬೀದಿಗಳಲ್ಲಿ ಉತ್ಸವ ಮಾಡಿ ಮೂಲ ಗುಡಿಗೆ ಸೇರಿಸುತ್ತಾರೆ. ನಂತರ ರಂಗನಾಥ, ಚಿತ್ರದೇವರು, ಎಲ್ಲಮ್ಮ, ಬೂತಪ್ಪ ದೇವರುಗಳ ಉತ್ಸವ ನಡೆಯುತ್ತದೆ.

**ಮಂಡೆಸೇವೆ :** ದೂರದೂರಗಳಿಂದ ಬಂದ ಭಕ್ತರು ಬುಧವಾರ ಬೆಳಗ್ಗೆ ಎಂಟು ಗಂಟೆಯಿಂದಲೇ ಮಂಡೆಸೇವೆ ಸಲ್ಲಿಸಲು ಪ್ರಾರಂಭಿಸುತ್ತಾರೆ. ತಮ್ಮ ಕಷ್ಟ ಕಾಲದಲ್ಲಿ ಹರಕೆ ಹೊತ್ತ ಸಾವಿರಾರು ಜನ ತಲೆಗೂದಲನ್ನು ಕೊಟ್ಟು ಭಕ್ತಿ ಬಾವದಿಂದ ಹರಕೆ ತೀರಿಸುತ್ತಾರೆ.

**ಹರಿಸೇವೆ :** ಜಾತ್ರೆ ಪ್ರಾರಂಭವಾದ ಐದನೇ ದಿನ ಗುರುವಾರದಂದು ನಡೆಯುತ್ತದೆ. ಅಡಿಗೆಯ ಕಾರ್ಯದಲ್ಲಿ ಎಲ್ಲರೂ ಸ್ವಯಂ ಪ್ರೇರಣೆಯಿಂದ ಭಾಗವಹಿಸುತ್ತಾರೆ. ರಾತ್ರಿಯಿಂದಲೇ ಪ್ರಾರಂಭವಾಗುವ ಅಡಿಗೆ ಕೆಲಸ ಬೆಳಗಾಗುವ ಹೊತ್ತಿಗೆ ಪೂರ್ಣಗೊಂಡಿರುತ್ತದೆ. ಮೊದಲು ಕಂಬದ ರಾಯನಿಗೆ ನೂರೊಂದು ಎಡೆ ಹಾಕಿ, ಹಾಲು, ಮೊಸರು, ಬಾಳೆಹಣ್ಣುಗಳನ್ನಿಟ್ಟು ನೈವೇದ್ಯ ಮಾಡಿದ ನಂತರ ಜನರಿಗೆ ಬಡಿಸುತ್ತಾರೆ. ಸಂಜೆಯತನಕ ಪ್ರಸಾದ ಸೇವನೆ ನಡೆಯುತ್ತದೆ.

**ಜಾಡಿಲೆಕ್ಕ :** ಆರನೇ ದಿನ ಶುಕ್ರವಾರದಂದು ಕರಿಯ ಕಂಬಳಿ ಹಾಸಿ ಗ್ರಾಮದ ಮುಖಂಡರು, ಪೂಜಾರಿಗಳು, ಗೌಡರು, ಕಟ್ಟೆಮನೆ ಯಜಮಾನರು ಎಲ್ಲರೂ ಒಟ್ಟಾಗಿ ಸೇರಿ ಕುಳಿತು ಜಾತ್ರೆಯ ಸಂದರ್ಭದಲ್ಲಿ ಬಂದ ಹರಕೆ, ಕಾಣಿಕೆ ರೂಪದ ಹಣ, ವಸ್ತು, ವಡವೆಗಳನ್ನು ಸಂಶಯ ಬರದ ರೀತಿಯಲ್ಲಿ ಲೆಕ್ಕಾಚಾರ ಮಾಡಿ ದೇವಸ್ಥಾನದ ಖರ್ಚು ವೆಚ್ಚಗಳಿಗಾಗಿ ಅದನ್ನು ಬಳಸುತ್ತಾರೆ. ಅದೇ ದಿನದಂದು ದೇವಾಲಯದ ಕಾಣಿಕೆ ಹುಂಡಿಯನ್ನು ಹೊಡೆದು ಲೆಕ್ಕಚಾರ ಮಾಡುತ್ತಾರೆ.

**ಮರುಪೂಜೆ :** ಶನಿವಾರ ಸಂಜೆ ಚಿಕ್ಕ ರಥವನ್ನು ಅಲಂಕರಿಸಿ ರಂಗನಾಥ, ಚಿತ್ರದೇವರು ಎಲ್ಲಮ್ಮ, ಬೂತಪ್ಪ, ಆಂಜನೇಯರನ್ನಿಟ್ಟು ಗಣೆ, ಬೆಳ್ಳಿ, ಕೋಲು ಕುದುರೆಗಳೊಂದಿಗೆ ಪದ ಹೇಳುತ್ತಾ ಕುಣಿಯುತ್ತಾ ರಾತ್ರಿಯೆಲ್ಲಾ ಉತ್ಸವ ನಡೆಸಿ ಬೆಳಗಾಗುವ ಹೊತ್ತಿಗೆ ದೇವರನ್ನು ಗುಡಿ ತುಂಬಿಸುತ್ತಾರೆ. ಇದು ಜಾತ್ರೆಯ ಕೊನೆಯ ಉತ್ಸವವಾಗಿದೆ.

**ಜಾಡೆವು ಇಳಿಸುವುದು :** ಜಾತ್ರೆಯ ಕೊನೆಯ ದಿನ ಭಾನುವಾರದಂದು ರಥಕ್ಕೆ ಕಟ್ಟಿದ ಕಂಬಗಳು, ಅಲಂಕಾರದ ವಸ್ತುಗಳನ್ನು ಬಿಚ್ಚಿ ಅವರವರ ವಸ್ತು ವಡವೆಗಳನ್ನು ಅವರವರಿಗೆ ತಲುಪಿಸುತ್ತಾರೆ. ಗ್ರಾಮಸ್ತರು ಒಟ್ಟಾಗಿ ಎಲ್ಲಾ ಕೆಲಸ ಕಾರ್ಯಗಳನ್ನು ಮಾಡಿ ಮುಗಿಸುತ್ತಾರೆ. ಹೀಗೆ ಎಂಟು ದಿನಗಳ ವಿಜೃಂಭಣೆಯ ಜಾತ್ರೆಗೆ ತೆರೆಬೀಳುತ್ತದೆ.

**ಕಳುವೋರಹಳ್ಳಿ ಜುಂಜಪ್ಪನ ಜಾತ್ರೆ :**

ಕಳುವೋರಹಳ್ಳಿಯಿಂದ ಎರಡೂವರೆ ಕಿ.ಮಿ ದೂರದಲ್ಲಿರುವ ಜುಂಜಪ್ಪನ ಗುಡ್ಡೆಯ ಹತ್ತಿರ ಪ್ರತೀ ವರ್ಷದ ದೀಪಾವಳಿ ಸಮ್ಮುಖದಲ್ಲಿ ಒಂದು ವಾರ ವಿಜೃಂಭಣೆಯ ಜಾತ್ರೆ ನಡೆಯುತ್ತದೆ. ಈ ಜಾತ್ರೆಯಲ್ಲಿ ಜಾಂಡೇವು ಹಾರಿಸುವುದು, ಹಾಲು ಮೀಸಲು ಕರೆಯುವುದು, ದೇವರಿಗೆ ಗಂಗಾಸ್ನಾನ ಮಾಡಿಸುವುದು, ಹರಕೆಗಳನ್ನು ತೀರಿಸುವುದು. ದೀಪ ಏರಿಸುವುದು ಮೊದಲಾದ ಕಾರ್ಯಕ್ರಮಗಳು ನಡೆಯುತ್ತವೆ.[೨] ದೇವಸ್ಥಾನದ ಎದುರಿನಲ್ಲಿ ಎತ್ತರವಾದ ಜಾಂಡೇವಿನ

ಕಂಬವನ್ನು ಸಿಲ್ಲಿಸಿ ಜಾಂಡೇವನ್ನು ಹಾರಿಸುತ್ತಾರೆ. ಜಾಂಡೇವು ಬಾವುಟ ಕಾವಿಯ ಬಣ್ಣಬಿಟ್ಟಿರುತ್ತದೆ. ಜಾತ್ರೆ ಪ್ರಾರಂಭಿಸಿದ್ದರ ಸಂಕೇತವಾಗಿ ಜಾಂಡೇವನ್ನು ಹಾರಿಸುತ್ತಾರೆ. ಅನಂತರ ಪೂಜಾರರು ಮತ್ತು ಕೆಲವರು ಭಕ್ತರು ಹತ್ತಿರದಲ್ಲಿರುವ ಕಲ್ಯಾಣಿಗೆ ವಾದ್ಯ ಸಮೇತ ದೇವರ ಉತ್ಸವ ಮೂರ್ತಿಯನ್ನು ಕರೆದುಕೊಂಡು ಹೋಗಿ ಗಂಗಾಸ್ನಾನ ಮಾಡಿಸಿಕೊಂಡು ಬರುತ್ತಾರೆ.[೧೭] ಭಕ್ತರು ಒಂದು ವಾರ ಮೊದಲೇ ಹಸು, ಕುರಿ, ಮೇಕೆ ಇವುಗಳ ಹಾಲನ್ನು ಕರೆದು, ಕಾಯಿಸಿ, ಹೆಪ್ಪಿಟ್ಟು, ಮೊಸರು ಮಾಡಿ ಬೆಣ್ಣೆಯನ್ನು ತೆಗೆದು ಬೆಣ್ಣೆಯನ್ನು ಕಾಯಿಸಿ ತೆಗೆದು ತುಪ್ಪವನ್ನು ಶೇಖರಿಸಿ ಪ್ರತ್ಯೇಕವಾಗಿ ತೆಗೆದಿಟ್ಟಿರುತ್ತಾರೆ. ಈ ಮೀಸಲು ತುಪ್ಪವನ್ನು ಜಾತ್ರೆಗೆ ತರುತ್ತಾರೆ. ದೇವಸ್ಥಾನದ ಮುಂಭಾಗದಲ್ಲಿ ಆರೇಳು ಅಡಿಗಳಷ್ಟು ಎತ್ತರವಾಗಿರುವ, ಮೂರು ಅಡಿಗಳಷ್ಟು ಸುತ್ತಳತೆ ಇರುವ ಹಿತ್ತಾಳೆಯ ದೀಪದ ಕಂಬವನ್ನು ಇಟ್ಟು ಇದಕ್ಕೆ ಎಣ್ಣೆ, ಬತ್ತಿ ಹಾಕಿ ಹಚ್ಚಿರುತ್ತಾರೆ. ಭಕ್ತಾಧಿಗಳು ಜಾತ್ರೆಗೆ ಬರುವಾಗ ಹಣ್ಣು ಕಾಯಿಗಳನ್ನು ಮಾಡಿಸಿಕೊಳ್ಳುವ ಮೊದಲು ಈ ದೀಪಕ್ಕೆ ತಾವು ತಂದಿರುವ ಮೀಸಲು ತುಪ್ಪವನ್ನು ಹಾಕುತ್ತಾರೆ.

ಜನರು ತಮ್ಮ ಮನೆಯಲ್ಲಿ ಯಾರಿಗಾದರೂ ಹಾವು, ಚೇಳು, ಮಂಡುಗಪ್ಪೆ ಕಡಿದಿದ್ದಾಗ ಅಥವಾ ದನಕರುಗಳಿಗೆ ಉಣ್ಣೆ ಹತ್ತಿದ್ದಾಗ ಅದು ವಾಸಿಯಾದರೆ ಜುಂಜಪ್ಪನಿಗೆ ಹರಕೆ ಒಪ್ಪಿಸುವುದಾಗಿ ಹರಸಿಕೊಂಡಿರುತ್ತಾರೆ. ಚಿನ್ನ ಅಥವಾ ಬೆಳ್ಳಿಯ ಹಾವು-ಚೇಳು, ಮಂಡರುಗಪ್ಪೆಗಳನ್ನು ಅಂಗಡಿಗಳಲ್ಲಿ ಇಟ್ಟು ಮಾರುವವರಿಂದ ತಮ್ಮ ಹರಕೆ ಯಾವುದಾಗಿತ್ತದೋ ಅದನ್ನು ಕೊಂಡು ದೇವರ ಗಡಿಗೆಗೆ ಹಾಕುತ್ತಾರೆ. ಚಿನ್ನದ ಹಾವನ್ನು ಹಾಕಬೇಕೆ? ಬೆಳ್ಳಿಯ ಹಾವನ್ನು ಹಾಕಬೇಕೆ ಎಂಬುದು ಅವರವರು ಮಾಡಿಕೊಂಡ ಹರಕೆಗಳನ್ನೂ, ಆರ್ಥಿಕ ಪರಿಸ್ಥಿತಿಯನ್ನು ಅವಲಂಭಿಸಿರುತ್ತದೆ. ಸಾಮಾನ್ಯವಾಗಿ ಬೆಳ್ಳಿಯಿಂದ ಮಾಡಿರುವುದನ್ನೇ ಹೆಚ್ಚು ಜನ ಹರಕೆ ಒಪ್ಪಿಸುತ್ತಾರೆ. ಹರಕೆ ಒಪ್ಪಿಸಿ ಹಣ್ಣು ಕಾಯಿಗಳನ್ನು ಮಾಡಿಸಿಕೊಂಡು ನಂತರ ದೇವರ ಉತ್ಸವ ಮೂರ್ತಿಯನ್ನು ಮೆರವಣಿಗೆ ಮಾಡುತ್ತಾರೆ. ಅಡ್ಡಣಿಗೆಯಲ್ಲಿ ಮೆರವಣಿಗೆ ಮಾಡುವ ಪದ್ಧತಿ ಇದೆ. ಜಾತ್ರೆಯ ಸಂದರ್ಭದಲ್ಲಿ ಜನರು ದೇವರನ್ನು ಪೂಜಿಸಿ ಶಾಸ್ತ್ರ ಕೇಳುತ್ತಾರೆ. ದೇವರು ಬಲಗಡೆಗೆ ಹೂ ಕೊಟ್ಟರೆ ತಾವು ಅಂದುಕೊಂಡ ಕೆಲಸ ಆಗುತ್ತದೆ, ಎಡಗಡೆಗೆ ಹೂವು ಕೊಟ್ಟರೆ ತಾವು ಅಂದುಕೊಂಡ ಕೆಲಸ ಆಗುವುದಿಲ್ಲವೆಂದು ನಂಬುತ್ತಾರೆ. ಉತ್ಸವ ಮುಗಿದ ನಂತರ ದೇವರನ್ನು ಗುಡಿತುಂಬಿಸುತ್ತಾರೆ. ಜಾಂಡೇವು ಇಳಿಸುತ್ತಾರೆ. ಅಲ್ಲಿಗೆ ಈ ವರ್ಷದ ಜಾತ್ರೆ ಮುಕ್ತಾಯವಾಗುತ್ತದೆ.

ಇದೇ ಸಂದರ್ಭದಲ್ಲಿ ಗುಬ್ಬಿ ತಾಲ್ಲೂಕಿನ ಹಾಗಲವಾಡಿಯಿಂದ ಮೂರು ಕಿ.ಮೀ. ದೂರ ಇರುವ ಜುಂಜಪ್ಪನ ಹಟ್ಟಿಯಲ್ಲಿಯೂ ಕಳುವೋರಹಳ್ಳಿಯಂತೆಯೇ ಜಾತ್ರೆ ನಡೆಯುತ್ತದೆ. ಇಲ್ಲಿನ ಎಲ್ಲಾ ಕಾರ್ಯಕ್ರಮಗಳು ಅಲ್ಲಿಯಂತೆ ಯಥಾವತ್ತಾಗಿ ನಡೆಯುತ್ತವೆ. ಇಲ್ಲಿ ದೀಪಾವಳಿಯ ಸಂದರ್ಭದಲ್ಲಿ ದೀಪ ಹಚ್ಚುವ ಮೊದಲನೆಯ ದಿನವನ್ನು 'ಹಿಂದೀವಣಿಗೆ' ಎಂದು ಕರೆಯುತ್ತಾರೆ.

ಹೀಗೆ ಹಚ್ಚಿದ ದೀಪವನ್ನು ಒಂದು ತಿಂಗಳ ಕಾಲ ಉರಿಸುತ್ತಾರೆ. ಭಕ್ತರು ಈ ಒಂದು ತಿಂಗಳ ಕಾಲದಲ್ಲಿ ಯಾವ ದಿನವಾದರೂ ಒಂದು ಹರಕೆಯನ್ನು ತೀರಿಸಿ ಹಣ್ಣುಕಾಯಿ ಮಾಡಿಸಿಕೊಂಡು ಹೋಗಬಹುದು. ಒಂದು ತಿಂಗಳಿಗೆ ಸರಿಯಾಗಿ ದೀಪವನ್ನು ಇಳಿಸುತ್ತಾರೆ. ಈ ಸಂದರ್ಭವನ್ನು 'ಕಿರು ದೀವಳಿಗೆ' ಎಂದು ಕರೆಯುತ್ತಾರೆ. ಜಾತ್ರೆ ಮುಗಿದ ನಂತರ ಚಪ್ಪರವನ್ನು ತೆಗೆದು ಹಾಕುತ್ತಾರೆ. ಹೀಗೆ ಹಾಗಲವಾಡಿ, ಕಳುವ್ರೋರಹಳ್ಳಿ ಈ ಎರಡೂ ಕಡೆ ನಡೆವ ಜುಂಜಪ್ಪನ ಜಾತ್ರೆ ಒಂದೇ ತೆರನಾಗಿರುತ್ತದೆ. ಇದೇ ಸಂದರ್ಭದಲ್ಲಿ ಬೇರೆ ಬೇರೆ ಹಳ್ಳಿಗಳಲ್ಲಿ ಸ್ಥಾಪಿಸಿಕೊಂಡಿರುವ ಜುಂಜಪ್ಪನ ಗುಡ್ಡೆ ಹಾಗೂ ಜುಂಜಪ್ಪನ, ಬಸವನ ಸಮಾದಿಗಳ ಬಳಿಯಲ್ಲಿಯೂ ದೀಪಾವಳಿಯಲ್ಲಿ ದೀಪ ಏರಿಸಿ ಜಾತ್ರೆ ಮಾಡುವುದನ್ನು ಕಾಣಬಹುದು. ಬಿಜ್ಜಂಬೆಳದ ಜುಂಜಪ್ಪನ, ಬಸವನ ಗುಡ್ಡೆಯ ಹತ್ತಿರ ಇದೇ ರೀತಿ ಜಾತ್ರೆ ನಡೆಯುತ್ತದೆ. ಸಿರಾ ತಾಲ್ಲೂಕಿನ ಹಾಲೇನಹಳ್ಳಿಯಲ್ಲಿಯೂ ಜುಂಜಪ್ಪನ ಜಾತ್ರೆ ನಡೆಯುತ್ತದೆ.

ಕಳುವ್ರೋರಹಳ್ಳಿ ಹಾಗೂ ಹಾಗಲವಾಡಿ ಈ ಎರಡೂ ಜುಂಜಪ್ಪನ ಪ್ರಮುಖ ಜಾತ್ರಾ ಕೇಂದ್ರಗಳಾಗಿದ್ದು, ಈ ಎರಡೂ ಭಾಗಗಳಲ್ಲಿ ಜಾತ್ರೆಯ ಸಂದರ್ಭದಲ್ಲಿ ಹದಿನೈದು ಸಾವಿರ ಜನ ಸೇರುತ್ತಾರೆ. ಅಂಗಡಿ ಮುಂಗಟ್ಟುಗಳು, ಕೋಲು ಪದ, ಅರೆವಾದನ, ಕಹಳೆ, ಸೋಮನ ಕುಣಿತ, ನಂದಿಧ್ವಜ ಕುಣಿತ, ಗಣೆವಾದ್ಯ, ಗಣೆಪದ, ಕುರಿಗಳನ್ನು ದೇವರ ಪೌಳಿಯ ಸುತ್ತಲು ಓಡಿಸುವ ಮೊದಲಾದ ಜಾನಪದ ಕಲೆಗಳ ಪ್ರದರ್ಶನ ನಡೆಯುತ್ತದೆ.

**ಗಂದಿಗೆ ಹಾಲು :** ಜಾತ್ರೆ ಪ್ರಾರಂಭವಾಗಿ ಜಾಂಡೇವು ಹಾರಿಸಿದ ನಂತರ ಮರಿಹಾಕಿದ ಕುರಿಯೊಂದರ ಮೊಲೆಗಳನ್ನು ಪುರುಸಮ್ಮನ ಕೆರೆಯ ನೀರಿನಲ್ಲಿ ತೊಳೆದು ಮರಿಗಳು ಹಾಲು ಕುಡಿಯದ ರೀತಿಯಲ್ಲಿ ಅದೇ ಕುರಿಯ ಸಗಣಿಯೊಂದಿಗೆ ಅದೇ ಕುರಿಯ ಹಾಲನ್ನು ಕಲೆಸಿ ಹದಮಾಡಿ ಬಟ್ಟೆಯ ತುಂಡುಗಳಿಂದ ಕುರಿಯ ಮೊಲೆಗಳಿಗೆ ಸುತ್ತಿ ಹದಮಾಡಿದ ಕುರಿ ಸಗಣಿಯನ್ನು ಸವರುತ್ತಾರೆ. ಹೀಗೆ ಶೇಖರಿಸಿದ ಮೀಸಲು ಹಾಲನ್ನು ಕರೆದು ಕಾಯಿಸಿ ಮೊಸರು, ಬೆಣ್ಣೆ, ತುಪ್ಪ ಮಾಡಿ ಜುಂಜಪ್ಪನಿಗೆ ಅರ್ಪಿಸುತ್ತಾರೆ.

**ದೊಡ್ಡ ದೀಪಾವಳಿ ಪರಿಸೆ :** ಈ ದಿನದಂದು ಅಡ್ಡಣಿಗೆ, ವಾಹನ, ಪಲ್ಲಕ್ಕಿಗಳಲ್ಲಿ ಜುಂಜಪ್ಪ ಚಿತ್ರದೇವರು, ಪುರ್ಲಹಳ್ಳಿ ಬೂತಪ್ಪ, ಬೇವಿನಹಳ್ಳಿ ಕರಿಯಮ್ಮ, ತಿಮ್ಮಪ್ಪ ಮೊದಲಾದ ದೇವರುಗಳನ್ನು ಅಲಂಕರಿಸಿ ಮೆರವಣಿಗೆ ಮಾಡುತ್ತಾರೆ. ಕಳುವ್ರೋರಹಳ್ಳಿಯಿಂದ ಜುಂಜಪ್ಪನ ಗುಡ್ಡೆಯವರೆಗೂ ಮೆರವಣಿಗೆ ಸಾಗುತ್ತದೆ.

**ದೇವರ ಗದ್ದಿಗೆ :** ಮೆರವಣಿಗೆಯಲ್ಲಿ ತಂದ ದೇವರುಗಳನ್ನು ಜುಂಜಪ್ಪನ ಗುಡ್ಡೆಯ ಹತ್ತಿರ ಗದ್ದಿಗೆ ಮಾಡುತ್ತಾರೆ. ಜಾತ್ರೆ ಮುಗಿವವರೆಗೂ ಅಲ್ಲಿಯೇ ಇರುವ ಮಜ್ಜನ ಬಾವಿಯಿಂದ ನಿತ್ಯವೂ

ನೀರನ್ನು ತಂದು ಮಜ್ಜನ ಮಾಡಿಸುತ್ತಾ ದಿನಕ್ಕೊಬ್ಬರಂತೆ ಅಥವಾ ಮೂರು ನಾಲ್ಕು ಜನರು ಸೇರಿ ಮೆರವಣಿಗೆ ಹೊರಡಿಸುತ್ತಾರೆ.

**ಮರಡಿ ರಂಗನಾಥನ ಜಾತ್ರೆ :**

ಜುಂಜಪ್ಪನ ಪರಮ ಮಿತ್ರ ಮರಡಿಗುಡ್ಡದ ರಂಗನಾಥ. ಈ ರಂಗನಾಥ ಜಾತ್ರೆ ಪ್ರತೀ ವರ್ಷ ಚೈತ್ರ ಮಾಸ (ಜನವರಿ ಅಥವಾ ಫೆಬ್ರವರಿ ತಿಂಗಳು)ದಲ್ಲಿ ಭಾರೀ ದನಗಳ ಹಾಗೂ ಜನರ ಜಾತ್ರೆ ನಡೆಯುತ್ತದೆ. ಬುಕ್ಕಾಪಟ್ಟಣ ಸಿರಾ ರಸ್ತೆಯಲ್ಲಿ ರಂಗನಾಥಪುರದ ಗುಡ್ಡದ ಮೇಲೆ ದೇವಸ್ಥಾನವಿದೆ. ಸಾಲಿಗ್ರಾಮ ಶಿಲೆಯ ಶಯನ ರೂಪದ ಭವ್ಯವಾದ ರಂಗನಾಥನ ಮೂರ್ತಿ ಇದೆ. ಕಳ್ಳಂಬೆಳ್ಳದಲ್ಲಿರುವ ಉತ್ಸವ ಮೂರ್ತಿಯನ್ನು ಮಲ್ಲಶೆಟ್ಟಿ ಹಳ್ಳಿಯ ಕುಂಚಿಟಿಗರು ಹೆಗಲ ಮೇಲೆ ಹೊತ್ತು ಗುಡ್ಡದ ಮೇಲೆ ತರುತ್ತಾರೆ. ನಂತರ ಗುಡ್ಡದ ಕೆಳಭಾಗದಲ್ಲಿರುವ ಪುರುಸಮ್ಮನ ಕೆರೆಯ ಕಲ್ಯಾಣಿಯಲ್ಲಿ ಗಂಗಾಸ್ನಾನ ಮಾಡಿಸುತ್ತಾರೆ. ನಂತರ ಉತ್ಸವ ಮೂರ್ತಿಯನ್ನು ಗುಡ್ಡದ ಮೇಲೆ ತಂದು ಉತ್ಸವ ಪೂಜೆ, ಹರಕೆ, ಅಭಿಷೇಕ ಮೊದಲಾದ ಕಾರ್ಯಕ್ರಮಗಳು ನಡೆಯುತ್ತವೆ. ಚಿಕ್ಕದಾಸರಹಳ್ಳಿಯ ದಾಸೇಗೌಡರ ನರಸಮ್ಮಜ್ಜಿ ವಂಶಸ್ತರು ರಂಗನಾಥನ ಮೂರ್ತಿಗೆ ಬಂಗಾರದ ಕೀರೀಟ ತೊಡಿಸುತ್ತಾರೆ. ಗುಡ್ಡದ ಮೇಲ್ಭಾಗಕ್ಕೆ ಹೋಗಲು ಗುಡ್ಡದ ಪಶ್ಚಿಮ ದಿಕ್ಕಿನಲ್ಲಿ ರಸ್ತೆಯನ್ನು ಮಾಡಿದ್ದಾರೆ. ಗುಡ್ಡದ ಮೇಲ್ಭಾಗದಲ್ಲಿ ನೀರು, ವಿದ್ಯುತ್, ಅಡಿಗೆ ಸಾಲೆಗಳು, ನವಗ್ರಹ ಮೊದಲಾದ ವ್ಯವಸ್ಥೆ ಮಾಡಲಾಗಿದ್ದು ಮದುವೆ, ನಾಮಕರಣ ಮೊದಲಾದ ಕಾರ್ಯಗಳೂ ನಡೆಯುತ್ತವೆ.

**ತಾವರೆಕೆರೆ ರಂಗನಾಥನ ಜಾತ್ರೆ :**

ಜುಂಜಪ್ಪನ ಏಳು ಜನ ಸ್ನೇಹಿತರಲ್ಲಿ ತಾವರೆಕೆರೆ ರಂಗನಾಥನೂ ಒಬ್ಬ. ಈ ರಂಗನಾಥನ ಜಾತ್ರೆ ಪ್ರತೀ ವರ್ಷ ತಾರಣನಾಮ ಸಂವತ್ಸರ ಮಾಘಶುದ್ಧ ಪಾಡ್ಯಮಿಯಂದು (ಫೆಬ್ರವರಿ ತಿಂಗಳು) ಬ್ರಹ್ಮರಥೋತ್ಸವ ನಡೆಯುತ್ತದೆ. ಒಂಬತ್ತು ದಿನಗಳ ಕಾಲ ನಡೆವ ಈ ಜಾತ್ರೆಯಲ್ಲಿ ಮೊದಲ ದಿನ ಅಂಕುರಾರ್ಪಣೋತ್ಸವ, ಎರಡನೇ ದಿನ ಧ್ವಜಾರೋಹಣ, ಹೋಮ, ಉತ್ಸವ, ಮೂರನೇ, ನಾಲ್ಕನೇ ದಿನಗಳಂದು ಬಲಿಹರಣ, ನಿತ್ಯ ಹೋಮ, ಐದನೇ ದಿನ ಅನ್ನ ಸಂತರ್ಪಣೆ ಕಲ್ಯಾಣೋತ್ಸವ, ಗರುಡೋತ್ಸವ, ಆರನೇ ದಿನದಂದು ನಿತ್ಯ ಹೋಮ, ಉತ್ಸವ, ಗಜೇಂದ್ರೋತ್ಸವ, ಏಳನೇ ದಿನದಂದು ಬ್ರಹ್ಮರಥೋತ್ಸವ, ನಂತರ ಅನ್ನಸಂತರ್ಪಣೆ, ಪಾನಕ ಪೂಜೆ, ಪಾರ್ವತೋತ್ಸವ, ಅವಭೃತ ಸ್ನಾನೋತ್ಸವ, ಧ್ವಜ ಅವರೋಹಣೋತ್ಸವ, ಶಯನೋತ್ಸವ, ಹೂವಿನ ಮಂಟಪೋತ್ಸವ ಮೊದಲಾದ ಕಾರ್ಯಗಳು ನಡೆಯುತ್ತವೆ.

**ಗಿಡಗನಹಳ್ಳಿ ರಂಗನಾಥ :**

ಸಿರಾ ಸೀಮೆಯಲ್ಲಿ ರಂಗನಾಥನ ಪ್ರಭಾವ ಅತೀ ಹೆಚ್ಚಾಗಿದ್ದು ಅನೇಕ ಊರುಗಳಲ್ಲಿ ಅದರಲ್ಲೂ ಮುಖ್ಯವಾಗಿ ಕ್ಯಾದಿಕುಂಟೆ ರಂಗನಾಥ, ಯಾದಲಡಕಿನ ರಂಗನಾಥ, ಬುಕ್ಕಾಪಟ್ಟಣದ ಕಾಲುವೆ ರಂಗನಾಥ, ಗುಡ್ಡದ ಹಟ್ಟಿಯ ರಂಗನಾಥ, ಮೂರು ಗುಡ್ಡದ ರಂಗನಾಥ ಮೊದಲಾದ ಸ್ಥಳಗಳಲ್ಲಿ ಜಾತ್ರೆಯೇ ನಡೆಯುತ್ತವೆ. ಒಂದೊಂದು ಸ್ಥಳದಲ್ಲಿಯೂ ಬೇರೆ ಬೇರೆ ಜನರು, ಒಕ್ಕಲಿನವರು ಜಾತ್ರೆ ನಡೆಸುತ್ತಾರೆ. ಅಲ್ಲಿ ನಡೆವ ಎಲ್ಲಾ ಕಾರ್ಯಕ್ರಮಗಳು ಒಂದೇ ರೀತಿಯಲ್ಲಿರುತ್ತವೆ. ಮೊದಲ ದಿನ ಗಂಗಾಪೂಜೆ ನಂತರ ದವನೋತ್ಸವ, ದೊಡ್ಡ ತೇರು, ಅನೇಕ ವಾಹನಗಳ ಉತ್ಸವ ಎಂದರೆ ಕುದುರೆ, ಗರುಡ, ಆನೆ ಉತ್ಸವಗಳು, ವಾದ್ಯಗಳ ಲೆಕ್ಕ ಮೊದಲಾದವು ನಡೆಯುತ್ತವೆ.

ಗಿಡಗನಹಳ್ಳಿ ರಂಗನಾಥ ಜಾತ್ರೆಯಲ್ಲಿ ವಾದ್ಯಗಳ ಲೆಕ್ಕ ಕಾರ್ಯಕ್ರಮವಿದ್ದು, ಅರೆಯವರು ಹತ್ತು ಜನ, ಕಹಳೆಯವರು ಹತ್ತು ಜನ, ಎರಡು ಡೋಲಿನವರು, ಎರಡು ಸೋಮಗಳು, ಎರಡು ಭೂತಪ್ಪಗಳು ಸೇರಿ ರಾತ್ರಿ ಹಗಲು ಪರಿಷೇಯಲ್ಲಿ ಕುಣಿಸಲಾಗುತ್ತದೆ. ಛತ್ರಿ, ಚಾಮರ, ಬಿಲ್ಲು ಹಿಡಿದು' ದೇವರ ಮೂರ್ತಿಯ ಉತ್ಸವ ಮಾಡುತ್ತಾರೆ.

**ಬರಗೂರು ವೀರಮ್ಮನ ಜಾತ್ರೆ :**

ಬರಗೂರು ವೀರಮ್ಮ ಮಹಾಸತಿ ಪರಂಪರೆಯಲ್ಲಿ ಬರುವ ವೀರ ಮಹಿಳೆಯಾಗಿದ್ದು, ಈಕೆಗೆ ಪ್ರತೀ ವರ್ಷ ವಿಜೃಂಭಣೆಯ ಉತ್ಸವ ನಡೆಯುತ್ತದೆ. ೧೯೪೫ಕ್ಕೂ ಮೊದಲು ಹೆಚ್ಚು ವೈಭವಪೂರ್ಣವಾಗಿ ನಡೆಯುತ್ತಿದ್ದಿತು. ನೂರಾರು ಬಂಡಿಕಾರರು ಭಾಗವಹಿಸುತ್ತಿದ್ದರು. ಆದರೆ ಇತ್ತೀಚೆಗೆ ಮೊದಲಿದ್ದ ವಿಜೃಂಭಣೆ ನಿಂತುಹೋಗಿದೆ ಎಂದು ಪೂಜಾರರು ಹೇಳುತ್ತಾರೆ. ಮೂರು ದಿನಗಳ ಕಾಲ ಉತ್ಸವ ನಡೆಯುತ್ತಿದ್ದು, ಗಂಗಾಪೂಜೆ, ಮಡಿಲಕ್ಕಿ ಕಟ್ಟುವ, ಮಂಡೆ ಕೊಡುವ, ಅನ್ನ ಸಂತರ್ಪಣೆ ಮೊದಲಾದ ಕಾರ್ಯಕ್ರಮಗಳು ನಡೆಯುತ್ತವೆ. ಕುಂಚಿಟಿಗರ ಲಗ್ನ ಕಾರ್ಯಗಳಲ್ಲಿ ಮುಖಂಡರುಗಳಿಗೆ ಬರುವ ವೀಳ್ಯಗಳು ಒಟ್ಟು ಏಳು ಅವುಗಳಲ್ಲಿ ಒಂದು ವೀಳ್ಯ ವೀರಮ್ಮಳಿಗೂ ಸಲ್ಲುತ್ತದೆ.

**ಗುರುಗುಂಡ ಬ್ರಹ್ಮೇಶ್ವರ ರಥೋತ್ಸವ :**

ಪಟ್ಟನಾಯಕನ ಹಳ್ಳಿ ಗುರುಗುಂಡರ ನೆನಪಿನಾರ್ಥ ಪ್ರತೀ ವರ್ಷ ಜನವರಿ ತಿಂಗಳ ಮೊದಲ ವಾರ ಈ ಜಾತ್ರೆ ಪ್ರಾರಂಭವಾಗುತ್ತದೆ. ಹದಿನೈದು ದಿನಗಳ ಕಾಲ ವೈಭವ ಪೂರ್ಣವಾಗಿ ಭಾರಿ ದನಗಳ ಜಾತ್ರೆ ಹಾಗೂ ಜನರ ಜಾತ್ರೆ ನಡೆಯುತ್ತದೆ. ಈ ಸಂದರ್ಭದಲ್ಲಿ ಮುಖ್ಯವಾಗಿ ಗಂಗಾಪೂಜೆ, ವಿಘ್ನೇಶ್ವರನ ಉತ್ಸವ, ಕೈಲಾಸೋತ್ಸವ, ನಂದೀಶ್ವರನ ಉತ್ಸವ, ಮಡಿತೇರು,

ಕಲ್ಲುಗಾಲಿ ತೇರು, ಆರತಿ ಮೊದಲಾದ ಕಾರ್ಯಕ್ರಮಗಳು ಪ್ರತೀ ದಿನ ಒಂದೊಂದರಂತೆ ನಡೆಯುತ್ತವೆ. ಈ ಜಾತ್ರೆಯ ಸಂದರ್ಭದಲ್ಲಿ ಜಾನಪದ ಕಾರ್ಯಕ್ರಮಗಳು ಹೆಚ್ಚು ನಡೆಯುತ್ತವೆ. ಪಾಳೇಗಾರ ವೇಷ, ಪದ ಹಾಡುವುದು, ಕೀಲು ಕುದುರೆ, ನಂದಿಧ್ವಜ ಕುಣಿತ, ಕೋಲಾಟ ಮೊದಲಾದ ಕಲೆಗಳು ಪ್ರದರ್ಶನಗೊಳ್ಳುತ್ತವೆ.

**ಗಂಗಾಪೂಜೆ :** ಸೋಮವಾರದ ದಿನದಂದು ಗಂಗಾಪೂಜೆಯೊಂದಿಗೆ ಜಾತ್ರೆ ಪ್ರಾರಂಭವಾಗುತ್ತದೆ. ದೇವಾಲಯದ ಮುಂದೆ ಎಡ ಪಕ್ಕದಲ್ಲಿರುವ ಬಾವಿಯ ಬಳಿಗೆ ಉತ್ಸವದೊಂದಿಗೆ ದೇವರನ್ನು ತಂದು ಆ ಬಾವಿಯ ನೀರಿನಲ್ಲಿ ತೊಳೆದು ಹೊಸ ವಸ್ತ್ರ ಉಡಿಸಿ ಅಲಂಕರಿಸಿ ಪೂಜೆ ಸಲ್ಲಿಸುತ್ತಾರೆ. ನಂತರ ವಾಹನದಲ್ಲಿಟ್ಟು ಮೆರವಣಿಗೆ ಮಾಡುತ್ತಾರೆ. ಅಂದು ಸಂಜೆಯತನಕ ರಥವನ್ನು ಬಣ್ಣಬಣ್ಣದ ಬಟ್ಟೆ, ಹೂಗಳಿಂದ ಅಲಂಕರಿಸುತ್ತಾರೆ. ಮರುದಿನ ಸಂಜೆ ಎಂಟು ಗಂಟೆಗೆ ವಿಘ್ನೇಶ್ವರನ ಉತ್ಸವ ನಡೆಯುತ್ತದೆ. ಮಠದ ದೇವಾಲಯದಿಂದ ಅರ್ಧ ಪರ್ಲಾಂಗ್ ದೂರದ ಬಸವ ಮಂಟಪದವರೆಗೂ ಉತ್ಸವ ಬರುತ್ತದೆ. ಮಧ್ಯರಾತ್ರಿಯವರೆಗೂ ಜನಪದ ಕಲೆಗಳು, ಹಾಡುಗಳು, ಕೋಲಾಟ ಮೊದಲಾದ ಮನರಂಜನೆಯ ಕಾರ್ಯಗಳು ಆಕರ್ಷಕವಾಗಿರುತ್ತವೆ.

**ಹೂವಿನ ತೇರು :** ಗುರುಗುಂಡ ಬ್ರಹ್ಮೇಶ್ವರ ಮಠದ ನಂಜಾವಧೂತ ಸ್ವಾಮಿಯವರನ್ನು ನಂಜಪ್ಪನೆಂದು ಕರೆಯುತ್ತಾರೆ. ಇವರಿಗೆ ಹೂವೆಂದರೆ ತುಂಬಾ ಪ್ರೀತಿ. ಆದ್ದರಿಂದ ಜನರು ತಮ್ಮ ಕಷ್ಟಗಳು ಪರಿಹಾರವಾಗಲೆಂದು ಹೂವಿನ ಹರಕೆ ಮಾಡಿಕೊಳ್ಳುತ್ತಾರೆ. ನಂಜಪ್ಪಯ್ಯನಿಗೆ ಹೂ ಕೊಡುವುದು ಅತ್ಯಂತ ಪುಣ್ಯದ ಕೆಲಸವೆಂದು ನಂಬುತ್ತಾರೆ. ಈ ಹೂವಿನ ತೇರಿಗೆ ಸುತ್ತಮುತ್ತಲಿನ ತಾಲ್ಲೂಕು, ಜಿಲ್ಲೆಗಳಿಂದ ಅಷ್ಟೇ ಅಲ್ಲ ನೆರೆಯ ಆಂಧ್ರ ಪ್ರದೇಶದಿಂದ ಸಹಸ್ರಾರು ಭಕ್ತರು ಬರುತ್ತಾರೆ. ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಹೂವಿನ ತೇರು ಬಸವ ಮಂಟಪದವರೆಗೆ ಬಂದು ನಂತರ ಹಿಂತಿರುಗಿ ದೇವಸ್ಥಾನದ ಬಳಿಗೆ ಎಳೆದುತರುತ್ತಾರೆ.

**ಕೈಲಾಸೋತ್ಸವ :** ಮಠದ ದೇವಾಲಯದಲ್ಲಿ ಬೃಹತ್ ಗಾತ್ರದ ಶಿವಲಿಂಗವಿದೆ. ಇದು ಶೈವ ಪರಂಪರೆಯ ಮಠವಾಗಿರುವುದರಿಂದ ಶಿವ ಪಾರ್ವತಿಯರ ವಿಗ್ರಹಗಳನ್ನು ರಥದ ಮೇಲಿಟ್ಟು ಅಲಂಕರಿಸಿ ಮೆರವಣಿಗೆ ಮಾಡುವರು. ಇದನ್ನು ಕೈಲಾಸೋತ್ಸವ ಎನ್ನುತ್ತಾರೆ.

**ನಂದಿ ಉತ್ಸವ :** ಕೈಲಾಸೋತ್ಸವದ ಮರುದಿನ ನಂದಿ ಉತ್ಸವ ನಡೆಯುತ್ತದೆ. ದೇವಾಲಯದ ಮುಂದೆ ಒಂದು ಬೃಹತ್ ಗಾತ್ರದ ನಂದಿ ವಿಗ್ರಹವಿದೆ ಹಾಗೂ ಕಂಚಿನ ವಿಗ್ರಹವೂ ಇದೆ. ಇದನ್ನು ಉತ್ಸವ ಮೂರ್ತಿ ಎನ್ನುವರು. ಇದನ್ನು ತೊಳೆದು ಅಲಂಕರಿಸಿ ಮರದಗಾಲಿ ರಥದಲ್ಲಿಟ್ಟು ಮೆರವಣಿಗೆ ಮಾಡುತ್ತಾರೆ. ಭಾರಿ ದನಗಳ ಪರಿಸೆ ಇದಾಗಿದ್ದು ರಾಸುಗಳ ವ್ಯಾಪಾರಕ್ಕೆ ಬಂದ ಸಹಸ್ರಾರು ಜನ ಈ ಉತ್ಸವದಲ್ಲಿ ಪಾಲ್ಗೊಳ್ಳುತ್ತಾರೆ. ಮರುದಿನ ನಂಜಾವಧೂತರ ಮೆರವಣಿಗೆ ವಿಗ್ರಹವನ್ನಿಟ್ಟು ಮಡಿತೇರು ಎಳೆಯುತ್ತಾರೆ.

**ಕಲ್ಲುಗಾಲಿ ರಥೋತ್ಸವ :** ಇದು ಜಾತ್ರೆ ಪ್ರಾರಂಭವಾದ ಏಳನೇ ದಿನ ಭಾನುವಾರದಂದು ನಡೆಯುತ್ತದೆ. ಜಾತ್ರೆಯ ಕೇಂದ್ರದಿಂದು ಇದಾಗಿದ್ದು ಅಂದು ಸುತ್ತಮುತ್ತಲಿನ ಹಳ್ಳಿಗಳಾದ ಕಾಮಗೊಂಡನಹಳ್ಳಿ, ಹೆಂದೊರೆ, ನಾದೂರು, ವೀರಗಾನಹಳ್ಳಿ, ಕಾಡಜ್ಜನ ಪಾಳ್ಯ, ಮೊದಲಾದ ಗ್ರಾಮಗಳಿಂದ ಆರತಿಗಳು ಬರುತ್ತವೆ. ಈ ದಿನದಂದು ಮಾತ್ರ ಮಠದೊಳಗೆ ಸ್ತ್ರೀಯರ ಪ್ರವೇಶವಿದೆ. ಉಳಿದ ದಿನಗಳಲ್ಲಿ ನಿಷೇಧವಿದೆ. ಲಕ್ಷಾಂತರ ಜನ ಸೇರುವ ಈ ರಥೋತ್ಸವ ರಾತ್ರಿ ಹತ್ತು ಗಂಟೆಗೆ ಪ್ರಾರಂಭವಾಗುತ್ತದೆ. ಬೆಳಗಿನಿಂದಲೂ ಬಾಳೆಕಂದು, ಬಟ್ಟೆ ಹೂಗಳಿಂದ ರಥವನ್ನು ಅಲಂಕರಿಸಿರುತ್ತಾರೆ. ರಾತ್ರಿ ಹತ್ತುಗಂಟೆಗೆ ನಂಜಪ್ಪಯ್ಯನ ಪ್ರತಿಮೆಯನ್ನು ತೇರಲ್ಲಿಟ್ಟು ಮಹಾ ಮಂಗಳಾರತಿ ಮಾಡಿ ಬಣ್ಣಬಣ್ಣದ ಅನ್ನವನ್ನು ಎಡೆಮಾಡಿ, ಬೂದುಗುಂಬಳಕಾಯಿ ಹೊಡೆದು ಜಯಕಾರ ಹಾಕುತ್ತಾ ರಥವನ್ನು ಎಳೆಯುತ್ತಾರೆ. ಈ ಕಲ್ಲುಗಾಲಿ ರಥೋತ್ಸವದ ಮಾರನೆ ದಿನದಿಂಧ ಜಾತ್ರೆ ಕ್ರಮೇಣ ಮುಕ್ತಾಯಗೊಳ್ಳುತ್ತದೆ.

**ಬೇವಿನಹಳ್ಳಿ ಕರಿಯಮ್ಮನ ಜಾತ್ರೆ :**

ಬೇವಿನಹಳ್ಳಿ ಕರಿಯಮ್ಮನ ಜಾತ್ರೆ ಪ್ರತಿವರ್ಷ ಯುಗಾದಿ ಹಬ್ಬದ ನಂತರ ಪ್ರಾರಂಭವಾಗುತ್ತದೆ. ಇದಕ್ಕೆ ಮುನ್ನ ಪುರಲಹಳ್ಳಿ ಬೂತಪ್ಪನ ಜಾತ್ರೆ ನಡೆಯುತ್ತದೆ. ನಂತರ ಕರಿಯಮ್ಮನ ಜಾತ್ರೆ ಪ್ರಾರಂಭವಾಗುತ್ತದೆ. ಕರಿಯಮ್ಮನ ಮೂಲ ನೆಲೆ ಚಳ್ಳಕೆರೆ ತಾಲ್ಲೂಕಿನ ತಳಕು ಗ್ರಾಮ. ಗೌರಿ ಗಣೇಶ ಹಬ್ಬದ ಸಂದರ್ಭದಲ್ಲಿ ನಡೆಯುವ ಈ ಜಾತ್ರೆ ಚಿತ್ರದುರ್ಗ ಜಿಲ್ಲೆಯ ಬಹುದೊಡ್ಡ ಮಾರಿಜಾತ್ರೆ ಎಂದೇ ಪ್ರಖ್ಯಾತವಾಗಿದೆ. ಕರ್ನಾಟಕ, ಆಂಧ್ರ ಪ್ರದೇಶದ ಗಡಿ ಭಾಗದಲ್ಲಿ ನಡೆಯುವ ಈ ಜಾತ್ರೆಗೆ ಸುಮಾರು ೨೫-೩೦ ಸಾವಿರ ಜನಸಂಖ್ಯೆ ಸೇರುತ್ತದೆ. ಏಳುನೂರು ಹಳ್ಳಿಗಳ ಭಕ್ತ ಸಮೂಹವನ್ನು ಹೊಂದಿರುವ ಬೇವಿನಹಳ್ಳಿ ಕರಿಯಮ್ಮನ ಜಾತ್ರೆಯನ್ನು ಕಾಡುಗೊಲ್ಲರು, ಕುರುಬರು, ಬೇಡರು, ಕುಂಚಿಟಿಗರು ಹರಿಜನರು ಕೂಡಿ ಐಕ್ಯತೆಯಿಂದ ಆಚರಿಸುತ್ತಾರೆ. ಜಾತ್ರೆ ಪ್ರಾರಂಭವಾಗುವುದಕ್ಕಿಂತ ಹದಿನೈದು ದಿನ ಮೊದಲೆ ಸಾರಲಾಗುತ್ತದೆ. ನಂತರ ಮಂಗಳವಾರದ ದಿನದಂದು ದೇವತೆಗೆ ಗ್ರಾಮದ ಹೊರಭಾಗದ ಹೊಳೆಯಲ್ಲಿ ಗಂಗಾಸ್ನಾನ ಮಾಡಿಸಿ ನಡೆ ಮುಡಿಯನ್ನು ಹಾಸಿಕೊಂಡು ಗ್ರಾಮಕ್ಕೆ ಕರೆತರುತ್ತಾರೆ. ಇದಕ್ಕೆ 'ಹೊಳೆ ತೆಗೆಯುವುದು' ಎನ್ನುತ್ತಾರೆ. ನಂತರ ಕಾಡುಗೊಲ್ಲ ಜನಾಂಗದವರು 'ಮೀಸಲು ಹಾಲನ್ನು' ಅರ್ಪಿಸುತ್ತಾರೆ. ಸಂಜೆ ದೇವತೆಯ ಮೆರವಣಿಗೆ, ಮಡಿಲಕ್ಕಿ ಕಟ್ಟುವ ಕಾರ್ಯಗಳು ಜರುಗುತ್ತವೆ. ಈ ಸಂದರ್ಭದಲ್ಲಿ ಮೊದಲು ಕೋಣನ ಬಲಿಯಾದ ನಂತರ ಭಕ್ತರು ತಮ್ಮ ಹರಕೆ ಹೊತ್ತ ಕೋಳಿ, ಕುರಿ, ಮೇಕೆಗಳನ್ನು ಬಲಿಕೊಡುತ್ತಾರೆ. ನಂತರ ಬಲಿಯ ರಕ್ತದಲ್ಲಿ ಅನ್ನವನ್ನು ಕಲಸಿ ಊರಿನ ಸುತ್ತಲು ಹಾಕುವ ಕೆಲಸವನ್ನು ತೋಟಿ ನೆರವೇರಿಸುತ್ತಾನೆ. ಇದನ್ನು 'ಸರಗಾಕುವುದು' (ಚರಗು ಚೆಲ್ಲುವುದು) ಎನ್ನುತ್ತಾರೆ.

ಕರಿಯಮ್ಮಳನ್ನು ಬೇವಿನಹಳ್ಳಿಯಲ್ಲಿ ಎತ್ತಪ್ಪ ಪ್ರತಿಷ್ಠಾಪಿಸಿದನೆಂದು ಪ್ರತೀತಿ ಇದೆ. ಕಾಡುಗೊಲ್ಲರ ಸಾಂಸ್ಕೃತಿಕ ವೀರ ಜುಂಜಪ್ಪನ ಕಾರ್ಯಕ್ಷೇತ್ರವಾದ ಗುಬ್ಬಿ ತಾಲ್ಲೂಕಿನ ಹಾಗಲವಾಡಿಯಲ್ಲಿಯೂ ಬೇವಿನಹಳ್ಳಿಯಲ್ಲಿಯಂತೆಯೇ ಕರಿಯಮ್ಮನ ಜಾತ್ರೆ ನಡೆಯುತ್ತದೆ. ಕ್ರಮವಾಗಿ ಗಂಗಾಸ್ನಾನ, ಹಾಲು ,ಮೀಸಲು, ಮಡಿಲಕ್ಕಿ, ಮಂಡೆಸೇವೆ, ಬಲಿ, ಬಾನ ಕಾರ್ಯಕ್ರಮಗಳು ನಡೆಯುತ್ತವೆ.

ಬೇವಿನಹಳ್ಳಿಯಲ್ಲಿ ನಡಿಯುವಂತೆಯೇ ಸಿರಾ ಸೀಮೆಯ ಬೇರೆ ಬೇರೆ ಪ್ರದೇಶಗಳಲ್ಲಿ ಸ್ಥಳೀಯ ಊರಿನ ಹೆಸರನ್ನು ಪಡೆದು ಕರಿಯಮ್ಮನ ಜಾತ್ರಾ ಮಹೋತ್ಸವಗಳು ನಡೆಯುತ್ತವೆ. ಅವುಗಳಲ್ಲಿ ಮುಖ್ಯವಾಗಿ ಸಾಕ್ಷಿಹಳ್ಳಿಯಲ್ಲಿ ಏಳೂರು ಗ್ರಾಮಸ್ಥರು ಸೇರಿ ಕರಿಯಮ್ಮನ ಜಾತ್ರೆ ಮಾಡುತ್ತಾರೆ. ಸಿರಾ ಪಟ್ಟಣ, ಗುಮ್ಮನಹಳ್ಳಿ ಗೊಲ್ಲರಹಟ್ಟಿಯಲ್ಲಿ ಕಂಡುಗದ ಕರಿಯಮ್ಮ ಎಂತಲೂ, ಕಡವಿಗೆರೆ ಕರಿಯಮ್ಮ ಎಂತಲೂ ಜಾತ್ರೆಗಳು ನಡೆಯುತ್ತವೆ.

ಕಡವಿಗೆರೆ ಕರಿಯಮ್ಮನ ಜಾತ್ರೆ ಪ್ರತೀ ವರ್ಷ ಯುಗಾದಿಯ ಸಂದರ್ಭದಲ್ಲಿ ನಡೆಯುತ್ತದೆ. ಮೊದಲು ಕರಿಯಮ್ಮಳನ್ನು ಹರಿಹರೇಶ್ವರ, ರಾಮೇಶ್ವರ ದೇವಾಲಯದಲ್ಲಿ ಗದ್ದಿಗೆ ಮಾಡುತ್ತಾರೆ. ಗಂಗಾಸ್ನಾನ, ಅಗ್ನಿಕೊಂಡ, ಬಾನ, ಕಳಸ, ಬಲಿ ಕಾರ್ಯಕ್ರಮಗಳು ಜರುಗುತ್ತವೆ. ಅಕ್ಕ ಪಕ್ಕದ ಗ್ರಾಮಗಳಾದ ಕಾರ್ಪೇಹಳ್ಳಿ, ಗೊಲ್ಲರಹಟ್ಟಿ, ಕಡವಿಗೆರೆ ಗ್ರಾಮಗಳಿಂದ ಆರತಿಗಳು ಬರುತ್ತವೆ. ಪ್ರತಿ ಗ್ರಾಮಗಳಲ್ಲಿಯೂ ಕರಿಯಮ್ಮನ ಗುಡಿಯೋ, ಪೌಳಿಯೋ ಇರುತ್ತದೆ. ವರ್ಷಕ್ಕೊಮ್ಮೆ ಉತ್ಸವ, ಜಾತ್ರೆ ನಡೆಯುತ್ತದೆ. ಹೀಗೆ ಕರಿಯಮ್ಮ ಈ ಭಾಗದ ಒಂದು ಶಕ್ತಿ ದೇವತೆಯಾಗಿಕಂಡುಬರುತ್ತದೆ.

**ಅಡಿಟಿಪ್ಪಣಿ**

೧. Charler winic dictionory of antrohopoly p.460.

೨. ಗ್ರಾಮದೇವತೆಗಳು, ಸಿದ್ದಲಿಂಗಯ್ಯ.ಪು ೭೧

೩. ಜಿ.ಶಂ.ಪ. ಕನ್ನಡ ವಿಶ್ವಕೋಶ ಸಂಪುಟ ೧ ಪುಟ ೭೦೩

೪. ಗ್ರಾಮದೇವತೆಗಳು, ಡಾ. ಸಿದ್ಧಲಿಂಗಯ್ಯ, ಪುಟ ೭೧.

೫. Standard Dictonary of folltlore mythology and legends, Vol II, Pg.1140.

೬. ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ತೀ.ನಂ.ಶಂಕರನಾರಾಯಣ, ಪುಟ ೧೨೭.

೭. ಗ್ರಾಮದೇವತೆಗಳು, ಡಾ. ಸಿದ್ಧಲಿಂಗಯ್ಯ, ಪುಟ ೭೨.

೮. ಕರ್ನಾಟಕ ಜನಪದ ಕಲೆಗಳು, ಪ್ರಕಟಣೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯. ಗೊಲ್ಲರ ಕಡಗ, ಮೀರಾಸಾಬಿಹಳ್ಳಿ ಶಿವಣ್ಣ, ಪುಟ ೧೧೮.

೧೦. ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ತೀ.ನಂ.ಶಂಕರನಾರಾಯಣ, ಪ್ರಸಾರಾಂಗ, ಮೈಸೂರು, ಪುಟ ೧೪೧

೧೧. ಲೇಖನ. ಡಾ.ಎಂ.ಎಂ.ಕಲಬುರ್ಗಿ, ಕೆಲವು ಜಾನಪದ ಧಾರ್ಮಿಕ ಆಚರಣೆಗಳು, ಹರತಿಸಿರಿ, ಪುಟ ೩೧೭.

೧೨. ದೇಸೀ, ಡಾ.ಮೊಗಳ್ಳಿ ಗಣೇಶ್, ಪುಟ ೯

೧೩. ದುರುಗ ಜಾನಪದ ಡಾ. ಮೀರಾಸಾಬಿಹಳ್ಳಿ ಶಿವಣ್ಣ. ಲೇಖನಗಣೆಯವರು ಪುಟ ೬೯.೭೦

೧೪. ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು. ತೀನಂ.ಶಂಕರನಾರಾಯಣ ಪ್ರಸಾರಂಗ ಮೈಸೂರು ಪುಟ ೧೭೭

೧೫. ಗೊಲ್ಲರ ಕಡೆ ಡಾ.ಮೀರಾಸಾಬಿಹಳ್ಳಿ ಶಿವಣ್ಣ. ಪುಟ ೯

೧೬. ಪುರುಸವ್ವನ ಕೆರೆಯ ನೀರಿನಲ್ಲಿ ಗಂಗಾಸ್ನಾನ ಮಾಡಿಸುವ ಸಂಪ್ರದಾಯ ಹಿಂದೆ ಇತ್ತು. ಆದರೆ ಪುರುಸವ್ವನ ಕೆರೆಡ್ಡೆಗೂ ಜುಂಜಪ್ಪನ ಗುಗೂಗ ನವಲತ್ತು ಕಿ.ಮೀ. ದೂರ ಇರುವುದರಿಂದ ಇದನ್ನು ಇಂದು ಕೈಬಿಡಲಾಗಿದೆ. ಆದರೂ ಮೂರು ಅಥವಾ ಐದು ವರ್ಷಕ್ಕೊಮ್ಮೆ ಅದೇ ನೀರಿನಲ್ಲಿ ಪುಣ್ಯಸ್ನಾನ ಮಾಡಿಸಲಾಗುತ್ತದೆ. ಪುರುಸವ್ವನ ಕೆರೆ ನೀರು ಕಾಡುಗೊಲ್ಲರಿಗೆ ಅತ್ಯಂತ ಪವಿತ್ರವಾದದ್ದು.

ಅಧ್ಯಾಯ ೭

## ಸಾಂಸ್ಕೃತಿಕ ವೀರ-ನಾಯಕರು ಹಾಗೂ ಚರಿತ್ರೆ

ಸಾಂಸ್ಕೃತಿಕ ವೀರ-ನಾಯಕರ ಅಧ್ಯಯನ ಶಿಷ್ಟ ಚರಿತ್ರೆಗಿಂತ ಭಿನ್ನವಾದ ಚರಿತ್ರೆಯನ್ನು ಹೇಳುತ್ತದೆ ನಾವು ಇದುವರೆಗೂ ದಾಖಲಿಸಿರುವ ರಾಜರ, ಪಾಳೇಗಾರರ ಚರಿತ್ರೆಗಿಂತ ಭಿನ್ನವಾಗಿ ಜನಸಾಮಾನ್ಯರು ಇವರ ಆಳ್ವಿಕೆಯಲ್ಲಿ ಹೇಗೆ ಸ್ವತಂತ್ರ ಅಸ್ತಿತ್ವವನ್ನು ಉಳಿಸಿಕೊಂಡಿದ್ದರು, ಆ ಅಸ್ತಿತ್ವಕ್ಕೆ ದಕ್ಕೆ ಬಂದಾಗ ರಾಜರ, ಪಾಳೇಗಾರರ ವಿರುದ್ಧವೂ ತಿರುಗಿಬೀಳುವ ಸಾಮರ್ಥ್ಯ ಹೊಂದಿದ್ದರು ಎಂಬುದನ್ನು ವೀರನಾಯಕರ ಚರಿತ್ರೆ ಹೇಳುತ್ತದೆ. ರಾಜರು, ಪಾಳೇಗಾರರಂತೆ ಇವರೂ ತಮ್ಮ ಅಸ್ತಿತ್ವವನ್ನು ಸಮಾಜದಲ್ಲಿ ಸ್ಥಾಪಿಸುವ ತವಕದಲ್ಲಿದ್ದವರು. ಪಾಳೇಗಾರರು, ರಾಜರು ತಮ್ಮದೇ ಆದ ಮಂತ್ರಿಮಂಡಲ, ರಾಜಪರಿವಾರ, ಅರಮನೆ. ಕೋಟೆ ಕೊತ್ತಲಗಳು. ಸೈನ್ಯ, ರಾಜಧಾನಿಗಳನ್ನು ಹೊಂದಿರುವಂತೆ ವೀರ-ನಾಯಕರು ಹೊಂದಿಲ್ಲ. ಇವರು ಒಂದು ರೀತಿಯ ನೆಲೆ ಇಲ್ಲದೆ ಅಲೆಮಾರಿಗಳಂತೆ ಅಲೆದಾಡುತ್ತಾ ಹೋದೆಡೆಯಲ್ಲೆಲ್ಲಾ ತಮ್ಮ ಪ್ರಭಾವ ಬೀರಿದವರು. ರಾಜರು, ಪಾಳೇಗಾರರಂತೆ ಇವರಿಗೆ ಯಾವ ಸಿರಿ, ಸಂಪತ್ತೂ ಬೇಕಾಗಿಲ್ಲ, ಬದಲಾಗಿ ತನ್ನವರು, ಅನುಯಾಯಿಗಳ ರಕ್ಷಣೆ, ಹಿತ ಇವರಿಗೆ ಮುಖ್ಯ.

ಒಂದು ಕಾಲದಲ್ಲಿ ನಡೆದುಹೋದ ಇತಿಹಾಸ, ಚರಿತ್ರೆ ಇಂದು ಮುಖ್ಯವಾಗಿರಲು ಅನೇಕಾನೇಕ ಕಾರಣಗಳಿರುತ್ತವೆ. ಅವುಗಳಲ್ಲಿ ಮೌಖಿಕತೆಯೂ ಒಂದು. ಗತಕಾಲದಲ್ಲಿ ಗತಿಸಿದ ಘಟನೆಗಳನ್ನು ಮೌಖಿಕವಾಗಿ ಉಳಿಸಿಕೊಂಡು ಬಂದಂತಹ ನಮ್ಮ ಹಿರಿಯ ತಲೆಮಾರಿನವರ ಕಥೆಗಳು ಇಂದು ಸಂಶೋಧನಾ ಅಧ್ಯಯನಕ್ಕೆ ಪ್ರಮುಖ ಆಕರವಾಗುತ್ತಿವೆ. ಮೌಖಿಕ ಸಾಹಿತ್ಯದಲ್ಲಿ ಬರುವ ಜನಪದ ಕಥೆ, ಗೀತೆ ಐತಿಹ್ಯ, ಗಾದೆ, ಒಗಟುಗಳಂತಹವು ನೆನಪಿನಾಳದಿಂದ ಇಂದು ಹೊರಗುಳಿಯುತ್ತಿವೆ. ಇಂದಿನವರೆಗೂ ಇತಿಹಾಸವನ್ನು ರಚಿಸಿದಂತಹ ಇತಿಹಾಸಕಾರರೆಲ್ಲರೂ ರಾಜ ಮಹಾರಾಜರ, ರಾಷ್ಟ್ರೀಯವಾದಿಗಳ ಇತಿಹಾಸವನ್ನು ರಚಿಸಿದರು. ಆದರೆ ಇಂದು ನಮಗೆ ಜನಸಾಮಾನ್ಯರು ರಚಿಸಿದಂತಹ ಮೌಖಿಕ ಇತಿಹಾಸವನ್ನು ಕೆದಕುವುದು ಮುಖ್ಯವಾಗುತ್ತದೆ. ಈ ಮೌಖಿಕ ಇತಿಹಾಸವನ್ನು ಕೆದಕಿದರೆ ಅದು ನಮ್ಮ ಅಕ್ಕಪಕ್ಕದ, ಸುತ್ತಮುತ್ತಲಿನ ನಮ್ಮದೇ ಪರಿಸರದ ಕಥೆಗಳನ್ನು, ದಾಖಲೆಗಳನ್ನು ಹೊರಹಾಕುತ್ತದೆ. ಹೀಗೆ ಅವರಿವರ ಬದಲಾದ ಇತಿಹಾಸ ರಚಿಸುವುದಕ್ಕಿಂತ ನಮ್ಮ ನಮ್ಮ ಇತಿಹಾಸ ರಚಿಸುವುದು ನಮಗೆ ಸೂಕ್ತವಾದದ್ದೆನಿಸಿ ಪ್ರಸ್ತುತ ನಾನು ಇಲ್ಲಿ ಸಾಂಸ್ಕೃತಿಕ ವೀರರು ಹಾಗೂ ಅವರ ಚರಿತ್ರೆಯನ್ನು ಕಟ್ಟಿಕೊಡುತ್ತಿದ್ದೇನೆ.

ದೇಜಗೌ ಹೇಳುವಂತೆ "ಪ್ರಾರಂಭದಲ್ಲಿ ಇತಿಹಾಸವೆಂದರೆ ಸ್ಥಳೀಯ ವೀರರ ಕಥೆ, ಲಾವಣಿ, ಐತಿಹ್ಯ ಇತ್ಯಾದಿಗಳನ್ನು ಆಧರಿಸಿದ ಸಂಗತಿಯೆನಿಸಿದ್ದಿತೆಂದು ಪಾಶ್ಚಿತ್ಯ ದೇಶಗಳಲ್ಲಿ ನಂಬಲಾಗಿತ್ತು" ಚರಿತ್ರೆಯನ್ನು ಅಧ್ಯಯನ ಮಾಡುವಾಗ ಮತ್ತಷ್ಟು ಪರಿಣಾಮಕಾರಿಯಾಗಲು ಜಾನಪದದಲ್ಲಿ ಬರುವ ಈ ಸಾಂಸ್ಕೃತಿಕ ವೀರರ ಅಧ್ಯಯನ ಹೆಚ್ಚು ಪ್ರಭಾವಶಾಲಿಯಾಗುತ್ತದೆ. ಚರಿತ್ರೆ ಹಾಗೂ ಜಾನಪದ ಪರಸ್ಪರ ಪೂರಕವಾಗಿ ಕೆಲಸ ಮಾಡುತ್ತವೆ. ಈ ಹಿನ್ನಲೆಯಲ್ಲಿ ಜನಪದ ಐತಿಹಾಸಿಕ ಕಾವ್ಯಗಳ ಹುಟ್ಟು, ಪ್ರಸಾರ, ಪ್ರಭಾವ ಮೊದಲಾದವುಗಳನ್ನು ಇತಿಹಾಸ ಸಂಶೋಧನೆಯಲ್ಲಿ ಅವುಗಳು ವಹಿಸುವ ಪಾತ್ರವನ್ನು ಸಂಕ್ಷಿಪ್ತವಾಗಿಯಾದರೂ ಅರಿತುಕೊಳ್ಳುವುದು ಅಗತ್ಯ. ಚಾರಿತ್ರಿಕ ವಿಷಯ ಕುರಿತ ಬರವಣಿಗೆಯಲ್ಲಿ ಜನಪದ ವೀರಸಾಹಿತ್ಯದ ಬಳಕೆ ಯಾವ ಪ್ರಮಾಣದಲ್ಲಿ ಆಗಿದೆ, ಆಗುತ್ತಿದೆ ಎಂಬುದನ್ನೂ ಇತರ ವಿಚಾರಗಳನ್ನು ತಿಳಿಯುವುದು ಉಪಯುಕ್ತವಾದ ಕ್ರಮವೇ. ಇತಿಹಾಸ ಪ್ರಜ್ಞೆಯ ಅಭಾವದ ಕಾಲದಲ್ಲಿ ನಾವು ನಾಗರೀಕ ಜೀವನದ ಇತಿಹಾಸ, ಸಂಸ್ಕೃತಿಗಳ ವಿವರಗಳನ್ನು ಸಾಮಾಜಿಕ ಜೀವನದ ಇತಿಹಾಸವನ್ನು ಜನಪದ ಸಾಹಿತ್ಯದಿಂದಲೇ ತಿಳಿಯಬೇಕಾಗುತ್ತದೆ. ಜನರ ಐಹಿಕ ಜೀವನದ ರೀತಿ-ನೀತಿಗಳು ಕಲ್ಪನೆ, ಭಾವನೆಗಳು ವೈಯಕ್ತಿಕ ಆಸೆ, ಅಭಿರುಚಿಗಳು ಸಾಮಾಜಿಕ ಕಟ್ಟು ಕಟ್ಟಳೆಗಳು, ಜೀವನ ಸೌಂದರ್ಯದ ಸಾಧನೆಗಳು ಪ್ರಾದೇಶಿಕ ಪರಿಸರಕ್ಕೆ ಸರಿಯಾಗಿ ನಡವಳಿಕೆಯಲ್ಲಿ ಮಾಡಿಕೊಂಡ ಮಾರ್ಪಾಡುಗಳು, ಕೆಲವೊಂದು ವ್ಯಕ್ತಿಗಳ ಗುಣವರ್ಣನೆಗಳು ಇವೆಲ್ಲವೂ ನಮ್ಮ ಜನಪದ ಸಾಹಿತ್ಯದಲ್ಲಿ ಸಂಶೋಧಕ ದೃಷ್ಟಿಯವರಿಗೆ ಖಂಡಿತವಾಗಿ ದೊರೆಯುವುವು.

ಸಾಂಸ್ಕೃತಿಕ ವೀರರ ಕಥೆ-ಕಾವ್ಯಗಳಲ್ಲಿ ಚಾರಿತ್ರಿಕಾಂಶಗಳನ್ನು ಗುರ್ತಿಸಿದ ವಿದ್ವಾಂಸರು ಅವುಗಳನ್ನು ೩ ಭಾಗ ಮಾಡಿದ್ದಾರೆ.[೧]

೧. ಸಮಗ್ರ ಐತಿಹಾಸಿಕ ಕಾವ್ಯಗಳು.

೨. ಅಸಮಗ್ರ ಐತಿಹಾಸಿಕ ಕಾವ್ಯಗಳು.

೩. ಅಸ್ಪಷ್ಟ ಐತಿಹಾಸಿಕ ಕಾವ್ಯಗಳು.

ಜಿ.ಶಂ.ಪ ರವರು ಐತಿಹಾಸಿಕ ಕಾವ್ಯಗಳಲ್ಲಿ ಪಿರಿಯಾ ಪಟ್ಟಣದ ಕಾಳಗ, ಸರ್ಜಪ್ಪನಾಯಕನ ಕಥೆ, ಮಾಗಡಿ ಕೆಂಪೇಗೌಡ, ಲಿಂಗರಾಜಮ್ಮ, ತರೀಕೆರೆ ರಂಗಪ್ಪನಾಯಕ, ಸೀರ್ಯಾದ ರಂಗಪ್ಪನಾಯಕ ಇವು ಮುಖ್ಯವಾದವು ಎಂದು ಹೇಳುತ್ತಾರೆ. ವೀರರ ಜೀವನವನ್ನು ಕಾವ್ಯಕ್ಕೆ ಅಳವಡಿಸಿ ವೀರ ಕಾವ್ಯಗಳನ್ನು ಬರೆಯುತ್ತಾ ಬಂದ ಸಂಪ್ರದಾಯ ನಮ್ಮಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಂಡುಬರುತ್ತದೆ. ಉದಾ: ಕುಮಾರ ರಾಮನ ಕಥೆ, ಕಂಠೀರವ ನರಸರಾಜರ ವಿಜಯ, ಅಪ್ರತಿಮ ವೀರಚರಿತ, ಚಿಕ್ಕದೇವರಾಜ ವಿಜಯ, ಕೆಳದಿ ನೃಪವಿಜಯ ಮುಂತಾದವು.

ಈತನಕ ಕರ್ನಾಟಕದಲ್ಲಿ ದೊರೆತಿರುವ ಜನಪದ ವೀರ ಸಾಹಿತ್ಯವು ಕುಮಾರರಾಮ, ಪಿರಿಯಾಪಟ್ಟಣದ ವೀರರಾಜ, ತರೀಕೆರೆಯ ಸರ್ಜಪ್ಪನಾಯಕ, ಮಾಗಡಿ ಕೆಂಪೇಗೌಡ, ಸಿರಾದ ರಂಗಪ್ಪನಾಯಕ ಚಿತ್ರದುರ್ಗದ ಮದಕರಿ ನಾಯಕ, ಬೆಳವಡಿ ಮಲ್ಲಮ್ಮ, ಕಾಸರಗೋಡು ತಿಮ್ಮಣ್ಣ, ಕೊಡಗಿನ ಲಿಂಗರಾಜಮ್ಮ, ಐಗೂರು ವೆಂಕಟಾದ್ರಿ ಭೂಪ, ನಿಂಬಯ್ಯ ದೊರೆ, ಕೋಟೆ ಚನ್ನಯ್ಯ, ಬೊಪ್ಪಾರ್ಯ, ಸೋಂದೆ ಶೂರ ಧೊಂಡೋಜಿ ವಾಘ, ಮುಂತಾದವು. ಇವುಗಳೊಡನೆ ಕಂಪಲಿ, ವಿಜಯನಗರ, ಶ್ರೀರಂಗಪಟ್ಟಣ, ಮೈಸೂರು, ಕೆಳದಿ ಅರಸರಿಗೆ ಸಂಬಂಧಿಸಿದಂತೆ ಅತ್ಯಂತ ವಿವರವಾಗಿ ಕೆಲವು ತ್ರಿಪದಿಗಳು ದೊರೆಯುತ್ತವೆ. ಕಾಲಮಾನದ ದೃಷ್ಟಿಯಿಂದ ಕುಮಾರರಾಮನಿಂದ ಆರಂಭಗೊಂಡು ಈಚಿನ ಆಂಗ್ಲಾ ಪ್ರಭುತ್ವದ ವಿರುದ್ಧ ತಿರುಗಿಬಿದ್ದು ತಮ್ಮ ಸ್ವಾತಂತ್ರ ಪ್ರಿಯತೆ, ಸ್ವಾಭಿಮಾನ ಮೆರೆದ ಕಿತ್ತೂರು ಚನ್ನಮ್ಮ, ಸಂಗೊಳ್ಳಿರಾಯಣ್ಣ ನರಗುಂದದ ಬಾಬಾ ಸಾಹೇಬ, ಸಿಂಧೂರ ಲಕ್ಷ್ಮಣ, ಹಲಗಲಿಯ ಬೇಡರು, ಬಾಲಬಸವರು, ರಾಮಿ, ಮುಂಡರಗಿ ಭೀಮರಾಯ ಇವರೇ ಮೊದಲಾದ ಕೆಲವು ಸ್ಥಾನಿಕರು ಹಾಗೂ ವೀರರುಗಳವರೆಗೆ ಈ ಸಾಹಿತ್ಯವು ಹರಿದುಬಂದಿದೆ. ಸಾಂಸ್ಕೃತಿಕ ವೀರರ ಅಧ್ಯಯನ ಆಯಾ ಭಾಗದ ಚರಿತ್ರೆಗೆ ಆಕರವಾಗಿ ನಿಲ್ಲಬಲ್ಲದು. ಪ್ರಾದೇಶಿಕ ಚರಿತ್ರೆಯ ರಚನೆಗೆ ಇದರಿಂದ ಉಂಟಾಗಬಹುದಾದ ಪ್ರಯೋಜನ ಮಹತ್ತರವಾದುದು.

ಬಯಲು ಸೀಮೆಯಲ್ಲಿ ಸ್ಥಾಪನೆಗೊಂಡ ಸಂಸ್ಥಾನಗಳಲ್ಲಿ ಚಿತ್ರದುರ್ಗ, ಸಿರಾ ದೊರೆಗಳನ್ನೇ ಕುರಿತು ಜನಪದ ಸಾಹಿತ್ಯ ಸಂಗ್ರಹವಾಗಿದೆ. ಸಾಮಾಜಿಕ ಕಥನ ಗೀತೆಗಳೂ ಅಸಂಖ್ಯಾತವಾಗಿವೆ. ಊರಿಗೊಂದರಂತೆ ಇರುವ ಕೆರೆ-ಕಟ್ಟೆ, ದೇವಾಲಯ, ಸ್ಮಾರಕಗಳ ಹಿನ್ನೆಲೆಯಲ್ಲಿ ಹುದುಗಿಹೋಗಿರುವ ವೀರರ, ಕೆಂಡ ಕೊಂಡವಾಗಿ ಮಹಾಸತಿಯರೆನಿಸಿದವರ ಕಥೆಗಳು ಹಾಡಿನ ರೂಪದಲ್ಲಿ ಪ್ರಚಾರದಲ್ಲಿವೆ. ಚರಿತ್ರೆಯ ಪಳೆಯುಳಿಕೆಗಳಾಗಿ ಉಳಿದು ಬಂದಿರುವ ಇಂತಹ ಸಾಹಿತ್ಯವನ್ನು ಸಂಶೋಧನೆಯ ಓರೆಗಲ್ಲಿಗೆ ತೀಡಿ ಖಚಿತಾಂಶಗಳನ್ನು ಗುರ್ತಿಸುವ ಕಾರ್ಯವೂ ಅಲ್ಪ ಸ್ವಲ್ಪ ನಡೆದಿದೆ.

ಬೇಡ ಜನಾಂಗಕ್ಕೆ ಸೇರಿದ ನಾಯಕರುಗಳಲ್ಲಿ ತುಮಕೂರು ಜಲ್ಲೆ ಸಿರಾದ ರಂಗಪ್ಪನಾಯಕ ಒಬ್ಬ. ಈತನನ್ನು ಕುರಿತ ಒಂದೇ ಹಾಡಿನ ಭಿನ್ನ ಕಥೆ, ಕಾವ್ಯಗಳು ದೊರೆತಿವೆ.[1] ಪ್ರತಿಯೊಂದು ಪಾಠವೂ ಘಟನೆಯ ಹಲವು ಮುಖಗಳನ್ನು ಪರಿಚಸಿಯಿಸಿರುವುದರೊಂದಿಗೆ ಹೊಸ ಅಂಶಗಳನ್ನೂ ಒದಗಿಸುತ್ತದೆ. ಇತಿಹಾಸ ಪುಟದಲ್ಲಿ ದಾಖಲಾಗಿರುವ ಈ ಪಾಳೇಗಾರರ ಚರಿತ್ರೆಯ ಶೋಧನೆಗೆ ಈ ಹಾಡುಗಳಲ್ಲಿ ವ್ಯಕ್ತವಾಗಿರುವ ಕೆಹಲವಾರು ಸಂಗತಿಗಳನ್ನು ಬಳಸಿಕೊಳ್ಳಲು ಅಡ್ಡಿಯಿಲ್ಲ. ಡಾ.ಜಿ.ಶಂ.ಪ ಹೇಳುವಂತೆ 'ಈ ಲಾವಣಿಗೆ ನಿರ್ದಿಷ್ಟ ಐತಿಹಾಸಿಕ ಆಧಾರಗಳನ್ನು ಆರೋಪಿಸಲು ಸಾಧ್ಯವಾಗುವುದಿಲ್ಲ. ಆದರೆ ಗೊತ್ತಾದ ಸ್ಥಳಗಳಲ್ಲಿ ಇಲ್ಲಿನ ಘಟನೆಗಳು ಸಂಭವಿಸಿರಬಹುದಾದ ಸಾಧ್ಯತೆಗಳನ್ನೂ ತಳ್ಳಿಹಾಕುವಂತಿಲ್ಲ' ಎಂಬ ಮಾತನ್ನು ಗಮನಿಸುವುದೂ ಅಗತ್ಯವಾಗಿದೆ. ಕ.ರಾ.

ಕೃಷ್ಣಮೂರ್ತಿ, ಡಾ.ಎಂ.ಸ್ ಸುಂಕಾಪುರ, ಮತ್ತು ದಿ. ಎಚ್.ವಿ. ವೀರನಾಯಕರುಗಳ ಸಂಗ್ರಹಗಳು ಇಂತಹ ಶೋಧನೆಗೆ ಉಪಯುಕ್ತ ಆಕರಗಳಾಗಿವೆ. ಪೂವಲ ಕೆಂಗಣ್ಣ ಮತ್ತು ಸೀರ್ಯಾದ ರಂಗಪ್ಪ ನಾಯಕರ ನಡುವಣ ವ್ಯಯಕ್ತಿಕ ದ್ವೇಷಾಸೂಯೆಗಳು ಪಶ್ಚಾತ್ತಾಪಕ್ಕೆ ತಿರುಗಿ ಅದರಿಂದ ಉಂಟಾದ ಪರಿಣಾಮವನ್ನು ಸಮರ್ಥವಾಗಿ ಚಿತ್ರಿಸುತ್ತವೆ ಈ ಪದಗಳು. ಬಿಜಾಪುರದವರು ಸಿರಾದ ಕೋಟೆಯನ್ನು ಮುತ್ತುವ ಸಂದರ್ಭವು ಭಾರತೀಯ ಇತಿಹಾಸ ಪರಂಪರೆಯ ಪ್ರತೀಕವಾಗಿ ನಿಲ್ಲುತ್ತದೆ. ದುರಂತದ ಸಂಕೇತವಾಗಿ ನಿಲ್ಲುತ್ತದೆ. "ನಾಡಿನ ಇತಿಹಾಸದ ರಚನೆಗೆ ಈ ವೀರ ಸಾಹಿತ್ಯ ಅತ್ಯುತ್ತಮ ಸಾಮಗ್ರೀಯಾಗುತ್ತದೆ. ಎಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಇಂಥ ಕೆಲಸ ಕನ್ನಡದಲ್ಲಿ ಇನ್ನೂ ಆಗಬೇಕಾಗಿದೆ" ಎನ್ನುವ ಪರಮೇಶ ಅವರು "ಈ ಜನಪದ ವೀರ ಸಾಹಿತ್ಯದಿಂದ ಇಂದಲ್ಲ ನಾಳೆ ಚರಿತ್ರ ರಚನಕಾರರು, ನಾಡಿನ ಚರಿತ್ರೆಯ ರಚನೆಗೆ ತೊಡಗಿದಾಗ ದೊರೆಯಬಹುದಾದ ಪ್ರಯೋಜನವನ್ನು ಪಡೆದಾರು! ಅಳಿದು ಹೋಗಿರುವ ನೂರಾರು ಚಕ್ರಾಧಿಪತ್ಯಗಳ, ಅಳಿದುಹೋದ ಸಹಸ್ರಾರು ಸಾರ್ವಭೌಮರ ನಶ್ವರ ಅಧಿಪತ್ಯದ ಶಾಶ್ವತ ಚರಿತ್ರೆಯ ಭವ್ಯ ಸೌಧವನ್ನು ನಿರ್ಮಿಸುವ ಬೃಹತ್ತರ ಕಾರ್ಯಕ್ಕೆ ಈ ಜನಪದ ಐತಿಹಾಸಿಕ ಗೀತೆಗಳು ಉಪಯುಕ್ತ ಸಾಮಗ್ರಿಯಾದಾವು!!"[5]

ಡಾ.ಯಲ್ಲಾಪುರ ಅವರ ದೃಷ್ಟಿಯಲ್ಲಿ ಇತಿಹಾಸ ರಚನೆಗೆ ಸಾಮಾಗ್ರಿಗಳು ಕೊರತೆಯಿರುವ ಇಂದಿನ ಸಂದರ್ಭದಲ್ಲಿ ಅವುಗಳನ್ನು ಸಂಪೂರ್ಣವಾಗಿ ತಳ್ಳಿಹಾಕಲು ಬರುವುದಿಲ್ಲ. ಇತರ ಐತಿಹಾಸಿಕ ಸಾಮಾಗ್ರಿಗಳ ಜೊತೆಗೆ ಅವುಗಳನ್ನು ಹೋಲಿಸಿದಾಗ ಒಂದು ಖಚಿತ ಅಭಿಪ್ರಾಯಕ್ಕೆ ಬರಲು ಸಾಧ್ಯವಾಗುತ್ತದೆ. ಆದುದರಿಂದ ಇತಿಹಾಸಕ್ಕೆ ಸಂಬಂಧಿಸಿದ ಲಾವಣಿಗಳನ್ನು ಒಂದೆಡೆ ಸಂಗ್ರಹಿಸಿ ಇಲ್ಲವೆ ಅವುಗಳಲ್ಲಿಯ ಮುಖ್ಯ ಭಾಗಗಳನ್ನು ಆಯ್ದುಕೊಂಡು ಪರಿಶೀಲಿಸುವುದೂ ಇಂದಿನ ಅಗತ್ಯಗಳಲ್ಲಿ ಒಂದು" "ಐತಿಹಾಸಿಕ ಪ್ರದೇಶಗಳಲ್ಲಿ ಗೀತೆಗಳು ಹುಟ್ಟುವಾಗ ಅನಿವಾರ್ಯವಾಗಿ ಆಯಾ ಪ್ರದೇಶದ ಚರಿತ್ರೆಯ ಎಳೆಗಳನ್ನೆಲ್ಲ ಅಂಟಿಸಿಕೊಂಡೇ ಜನ್ಮತಾಳುತ್ತವೆ. ಒಮ್ಮೊಮ್ಮೆ ತೀರ ನಡೆದ ಘಟನೆಗಳನ್ನೇ ಮುಖ್ಯ ವಸ್ತುವನ್ನಾಗಿ ಹೊಂದಿ ಹುಟ್ಟಿಕೊಂಡಿರುತ್ತವೆ. ಹೀಗಾಗಿ ನಾಡಿನ ಯಾವುದೇ ಭಾಗದಲ್ಲಿ ಕೋಲುಪದಗಳಿಂದ ಹಿಡಿದು ದೀರ್ಘ ಪ್ರಮಾಣದ ಕಾವ್ಯಗಳವರೆಗೆ ದಕ್ಕುವ ಸಾಹಿತ್ಯವನ್ನೆಲ್ಲ ಇಟ್ಟುಕೊಂಡು ಐತಿಹಾಸಿಕವಾಗಿ ನೋಡಬೇಕಾದುದರ ಅಗತ್ಯವೂ ಇದೆ. ಆಗ ಇತಿಹಾಸಕ್ಕೆ ಜನಪದ ಸಾಹಿತ್ಯವೂ ಕೂಡ ಆಕರವಾಗಿ ನಿಲ್ಲಬಲ್ಲದು."[6] ಇದು-ಕೃಷ್ಣಮೂರ್ತಿ ಹಸೂರರವರ ಮಾತು. ಅಂಬಳಿಕೆ ಹಿಯರಣ್ಣ ಅವರು ಜಾನಪದ ಮಹತ್ವದ ಅಂಶವೆಂದರೆ ಅದು ಐತಿಹಾಸಿಕ ದಾಖಲೆಗಳಿಲ್ಲದ ಕಡೆಗಳಲ್ಲಿ ಗತಿಸಿಹೋದ ಬದುಕಿನ ಸಾರವನ್ನು ಉಳಿಸಿಕೊಂಡು ಬರುತ್ತದೆ. ಈ ಅರ್ಥದಲ್ಲಿ ಅದು ವರ್ತಮಾನಕ್ಕೆ ಭೂತವನ್ನು ಸೇರಿಸುವ ಕೊಂಡಿ. ಐತಿಹಾಸಿಕ ದಾಖಲೆಗಳು ಲಭ್ಯವಿರುವ ಕಡೆಗಳಲ್ಲಿ ಕಂಠಸ್ಥ ಇತಿಹಾಸವನ್ನು ದೊರಕಿಸಿಕೊಡುವ

ಪ್ರಯುತ್ನವನ್ನೂ ಮಾಡುತ್ತದೆ. ಈ ಕಂಠಸ್ಥ ಇತಿಹಾಸದಲ್ಲಿ ಪ್ರಜಾ ಸತ್ತಾತ್ಮಕವಾದ ನಿರೂಪಣೆ ಇರುತ್ತದೆ. ಎಷ್ಟೋ ವೇಳೆ ಚರಿತ್ರಕಾರರು ಮತ್ತು ಪತ್ರಿಕೋದ್ಯಮಿಗಳು ಗ್ರಹಿಸಿದ್ದಕ್ಕಿಂತ ಹೆಚ್ಚು ಮಹತ್ವದ ವಿಚಾರಗಳು ಆ ನಿರೂಪಣೆಗಳಿರುತ್ತವೆ" ಎಂದಿರುವರು. "ಚರಿತ್ರೆಯ ಮೇಲೆ ಜನಪದ ಕಾವ್ಯಗಳು ಯಾವ ಬೆಳಕನ್ನು ಚೆಲ್ಲುವುದಿಲ್ಲ ಎಂದು ನಿರಾಕರಿಸಲಾಗುವುದಿಲ್ಲ" ಎಂಬ ಡಾ.ಜೀಶಂಪ ಅವರ ಮಾತನ್ನು ಇಲ್ಲಿ ಗಮನಿಸಬೇಕು. ಜಾನಪದ ವೀರ ಸಾಹಿತ್ಯ ಮತ್ತು ಇತಿಹಾಸಗಳ ನಡುವಣ ಸಂಬಂಧ ಕುರಿತು ರಷ್ಯಾದ ಪ್ರಸಿದ್ಧ ಸಾಹಿತಿ ಮ್ಯಾಕ್ಸಿಂಗಾರ್ಕಿ ಅವರು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ದೇಜಗೌ ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ. ಗಾರ್ಕಿ ಅವರು ಹೇಳಿದಂತೆ ಒಂದು ರಾಜಮನೆತನದ ಮೂಲವನ್ನು ಹುಡುಕುವಾಗ, ಒಂದು ಸಂಗ್ರಾಮದ ವಿವರಗಳನ್ನು ಕೊಡುವಾಗ ರಾಜ್ಯದ ಸಾಂಸ್ಕೃತಿಕ, ಸಾಮಾಜಿಕ ಸ್ಥಿತಿಗತಿಗಳನ್ನು ವಿಶ್ಲೇಷಿಸುವಾಗ ಯಾವ ಚರಿತ್ರಕಾರರೂ ವಿಫಲವಾಗಿ ದೊರೆಯುವ ಜಾನಪದ ಸಾಮಗ್ರಿಯನ್ನು ಬಳಸಿಕೊಂಡಂತಿಲ್ಲ. ಅದು ಕಗ್ಗವೆಂದು, ವ್ಯರ್ಥ ಕಲ್ಪನೆಯೆಂದು, ಅವೈಜ್ಞಾನಿಕವೆಂದು ಮೂಗು ಮುರಿಯುವುದುಂಟು. ವಾಸ್ತವಿಕವಾಗಿ ಇತಿಹಾಸ ನಿರ್ಮಿಸುವಂತಹ ವ್ಯಕ್ತಿಗಳು ರಾಜರಲ್ಲ, ನಾಯಕರಲ್ಲ, ಸಾಮಾನ್ಯ ಜನಪದರು. ಸಾಮಾನ್ಯ ಜನ ನಾಯಕರನ್ನು ರಾಜರನ್ನು ಸೃಷ್ಟಿ ಮಾಡುತ್ತಾರೆ. ಚರಿತ್ರೆಗೆ ಮೊದಲು ಜಾನಪದ. ಅವೆರಡಕ್ಕೂ ಸಾವಯವ ಸಂಬಂಧವಿದೆ. ಅವೆರಡೂ ಜೊತೆ-ಜೊತೆಯಾಗಿಯೇ ಕೈ ಕೈ ಹಿಡಿದು ಮುಂದುವರೆಯುತ್ತಿವೆ. ಜನತಾ ಕವಿಗಳು ಸೃಷ್ಟಿಸಿದ ವೀರ ಸಾಹಿತ್ಯಕ್ಕೆ ಸಮತಾವಾದಿ ತವರೆನಿಸಿದ ಪರಿಸರದಲ್ಲಿ ಜನಸಾಮಾನ್ಯರ ಭಾವನೆಗಳನ್ನು ಹಸಿಯಾಗಿ ಅರಿಯಲೆತ್ನಿಸಿದ ಮಹಾ ಲೇಖಕನೊಬ್ಬನು ನೀಡಿರುವ ಪ್ರಶಸ್ತಿ ಎಂದರೆ ಇದೇ! ಒಟ್ಟಿನಲ್ಲಿ ಉದಾಹರಣಾರ್ಥಕವಾಗಿ ಈ ಬಗೆಯ ಅಭಿಪ್ರಾಯಗಳನ್ನು ಸಾಕಷ್ಟು ಸಂಗ್ರಹಿಸಿ ತೋರಿಸಬಹುದು.

ಸಾಂಸ್ಕೃತಿಕ ವೀರರ ಅಧ್ಯಯನ ಒಂದು ರೀತಿಯಲ್ಲಿ ಜನಾಂಗೀಯ ಚರಿತ್ರೆಯ ಅಧ್ಯಯವಾಗಿದೆ. ಜನಾಂಗೀಯ ಚರಿತ್ರೆಯಲ್ಲಿ ಬಾಳಿ ಬದುಕಿದ ವ್ಯಕ್ತಿಗಳೇ ಇಂದು ನಮ್ಮ ಮುಂದೆ ಸಾಂಸ್ಕೃತಿಕ ನಾಯಕರಾಗಿ ನಿಂತಿದ್ದಾರೆ. ಅವರು ಜನಸಾಮಾನ್ಯರಿಗಿಂತ ಭಿನ್ನವಾಗಿ, ಆದರ್ಶವಾಗಿ ಬದುಕಿ ಹೋಗಿದ್ದಾರೆ. ತಮ್ಮ ಬದುಕಿನ ಯಾವುದೋ ಒಂದು ಸಮಸ್ಯೆಗೆ ಹೋರಾಡಿ ಮಡಿದವರಾಗಿದ್ದಾರೆ. ಉದಾಹರಣೆಗೆ, ಸಿರಾ ಪ್ರಾಂತ್ಯವನ್ನು ಆಳಿದ ಪಾಳೇಗಾರರ ಚರಿತ್ರೆಯನ್ನು ರಂಗಪ್ಪನಾಯಕನೆಂಬ ಐತಿಹಾಸಿಕ ಸಾಂಸ್ಕೃತಿಕ ವೀರನ ಅಧ್ಯಯನದೊಂದಿಗೆ ನಾವು ತಿಳಿಯಬಹುದಾಗಿದೆ. ೧೫ನೇ ಶತಮಾನದಲ್ಲಿ ಸಿರಾ ಪ್ರಾಂತ್ಯವನ್ನು ಆಳ್ವಿಕೆ ಮಾಡುತ್ತಿದ್ದ ರಂಗಪ್ಪನಾಯಕ ಸಿರಾ ಕೋಟೆಯನ್ನು ನಿರ್ಮಿಸಿದ ಕೆರೆ-ಕಟ್ಟೆಗಳನ್ನು ಕಟ್ಟಿಸಿದ ದೇವಾಲಯಗಳನ್ನು ಕಟ್ಟಿಸಿದ, ದಾನ-ದತ್ತಿಗಳನ್ನು ನೀಡಿದ ವಿಚಾರಗಳು ಬೆಳಕಿಗೆ ಬರುತ್ತವೆ. ಇತಿಹಾಸ ಎಂಬುದು ಇತಿಹಾಸದ ಪಿತಾಮಹ ಹೆರೊಡೋಟಸ್ ಪ್ರಕಾರ "ಹಿಂದೆ ಹೀಗೆ ಖಚಿತವಾಗಿ ನಡೆಯಿತು" ಎಂದು ಅರ್ಥೈಸಲ್ಪಡುವುದರಿಂದ ಈ ಸಾಂಸ್ಕೃತಿಕ

ವೀರ ರಂಗಪ್ಪನಾಯಕನ ಕಾಲದಲ್ಲಿ ಈ ರೀತಿ ನಡೆಯಿತು ಎಂದು ಇತಿಹಾಸ ಹೇಳುತ್ತದೆ. ರಂಗಪ್ಪನಾಯಕನ ಸಮಕಾಲೀನರು ಇಂತಿಂತಹವರು ಇದ್ದರು ಅವರ ಆಳ್ವಿಕೆಯ ಕ್ರಮ ಹೀಗಿತ್ತು ಎಂಬುದನ್ನು ತಿಳಿದುಕೊಳ್ಳಬಹುದು. ಅವರ ಬದುಕಿನ ರೀತಿ ಹಾಗೂ ಆ ಕಾಲದ ಬದುಕು-ಆದರ್ಶ ಮೌಲ್ಯ, ಸಮಾಜದಲ್ಲಿನ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಸ್ಥಿತಿಗತಿಗಳನ್ನ ತಿಳಿಯಬಹುದು. ಹೀಗೆ ಸಿರಾದ ಪಾಳೇಗಾರ ರಂಗಪ್ಪನಾಯಕನ ಅಧ್ಯಯನದೊಂದಿಗೆ ನಾವು ಸಿರಾ ಪ್ರಾಂತ್ಯದ ಇತಿಹಾಸವನ್ನು ತಿಳಿಯಲು ಹಾಗೂ ಪಾಳೇಗಾರರ ಆಳ್ವಿಕೆಯನ್ನು ತಿಳಿಯಲು ದಾರಿಯಾಗುತ್ತದೆ. ಹೀಗೆ ಸಾಂಸ್ಕೃತಿಕ ವೀರರ ಅಧ್ಯಯನ ಹಾಗೂ ಚರಿತ್ರೆ ಅನ್ಯೋನ್ಯ ಸಂಬಂಧವನ್ನು ಹೊಂದಿವೆ. ಒಂದನ್ನ ಬಿಟ್ಟು ಮತ್ತೊಂದಿಲ್ಲ.

ಸಿರಾ ನಗರ ನಿರ್ಮಾಣವಾದ ಇತಿಹಾಸ, ಕೋಟೆಯನ್ನು ಹೇಗೆ ಕಟ್ಟಲಾಗಿತ್ತು, ಯಾರು ಕಟ್ಟಿಸಿದರು, ಯಾರ ಸಹಾಯ ಪಡೆದು ಯಾವ ರೀತಿ ಕಟ್ಟಿದರು ಎಂಬ ವಿಚಾರವನ್ನು ಜನಪದರು ವೀರ ರಂಗಪ್ಪನಾಯಕನ ಗೀತೆ, ಕಥೆ ಲಾವಣಿಗಳಲ್ಲಿ ಈ ವಿಚಾರಗಳನ್ನು ತಂದಿದ್ದಾರೆ. ಗುಮ್ಮನಹಳ್ಳಿ ಕದನ ಲಾವಣಿಯಲ್ಲಿ ವರ್ಣಿಸಿರುವಂತೆ,

ಹುಟ್ಟುಗಲ್ಲಿನ ಮೇಲೆ| ಹುಟ್ಟೀತು ಸೀರ್ರೇವು|
ಸುತ್ತಕಾರಂಜಿ| ಹುಲಿಮುಖ|
ಸುತ್ತ ಕಾರಂಜಿ| ಹುಲಿಮುಖ| ಕೋಟೆಯ ಸುತ್ತ| ಒಪ್ಪಾದಿ| ನೆಟ್ಟಾರು ಕಸಿಮಾವು||
ಗೂಡುಗಲ್ಲಿನ ಮೇಲೆ| ಮೂಡ್ಯಾತು ಸೀರ್ರೇವು|
ಸುತ್ತ ಕಾಡೆಲ್ಲಾ| ಕಡೆಸಾನೆ|
ಸುತ್ತ ಕಾಡೆಲ್ಲಾ| ಕಡೆಸಾನೆ| ರಂಗಣ್ಣ| ಕಟ್ಟೀದ ಕೋಟೆಯಾ ಮುಗಿಲುದ್ದ||
ಹತ್ತಿ ಕಟ್ಟಿದ ಕೋಟೆ| ಚಕ್ರಬಿಂಬದ ಕೋಟೆ|
ಹತ್ತೀತು ಕೋಟೆ ಮುಗಿಲುದ್ದ|
ಹತ್ತೀತು ಕೋಟೆ| ಮುಗಿಲುದ್ದ| ರಂಗಣ್ಣನ| ಮುದ್ದಾದ ಮಗನ ಬಸರೀಲಿ||
ಕೋಟೆ ಸುತ್ತ| ಮುತ್ತ| ನೋಡು| ನುಗ್ಗೆ ಮರ|
ಕೋಟೆಗತ್ತ್ಯಾವೆ| ಗತ್ತ್ಯಾವೆ ಸರಬಳ್ಳಿ|
ಕೋಟೆ| ಗತ್ತ್ಯಾವೆ| ಸರಬಳ್ಳಿ| ರಂಗಣ್ಣನ| ಕೋಟೆಗಿನ್ನಿಲ್ಲ| ಸರಿತೂಕ||

ಗುಮ್ಮನಹಳ್ಳಿ ಕದನವಲ್ಲಿ ಕರ್ನಾಟಕ ಇತಿಹಾಸದ ಎಳೆಯೊಂದನ್ನು ಕಾಣಬಹುದಾಗಿದೆ. ಸಿರಾದ ರಂಗಪ್ಪನಾಯಕ ಹಾಗೂ ನಿಡುಗಲ್ಲು ಪಾಳೇಗಾರರನ್ನು ಕುರಿತಂತೆ ಕೆಲವು ಪ್ರಸಂಗಗಳನ್ನು

ಜಾನಪದರು ತಮ್ಮ ಮುಂದೆ ಆಗಿ ಹೋದ ಕೆಲ ಪಾಳೇಗಾರ ವೀರರನ್ನು ಇಲ್ಲಿ ಸ್ಮರಿಸಿದ್ದಾರೆ. ಗುಮ್ಮನಹಳ್ಳಿ ಕದನದಲ್ಲಿ ಸಿರಾ ಪ್ರಾಂತ್ಯವನ್ನಾಳಿದ ಪಾಳೇಗಾರರ ಚರಿತ್ರೆ ರಂಗಪ್ಪನಾಯಕನ ಬದುಕಿನೊಂದಿಗೆ ವಿವರ ಪಡೆಯುತ್ತಾ ಸಾಗುತ್ತದೆ. 'ಗುಮ್ಮನಹಳ್ಳಿ ಕದನ' ಎಂಬ ಕಾವ್ಯದಲ್ಲಿ ಸಂಪಾದಕ ವೀರನಾಯಕರು ರಂಗಪ್ಪನಾಯಕ ಚಿತ್ರದುರ್ಗ ಪಾಳೇಗಾರರ ಮೂಲದವನು ಎಂದು ಗುರ್ತಿಸುವ ಪ್ರಯತ್ನ ಮಾಡುತ್ತಾರೆ. ಆನೆಗೊಂದಿಯಿಂದ ದಕ್ಷಿಣದ ಕಡೆ ಹೊರಟ ಪಾಳೇಗಾರರಲ್ಲಿ ಚಿತ್ರದುರ್ಗದ ಪಾಳೇಗಾರರೂ ಒಬ್ಬರು. ಈ ಪಾಳೇಗಾರರ ಮೂಲದ ರಂಗಪ್ಪರಾಜು ಎಂಬ ಪಾಳೇಗಾರ. ಸಿರಾ ಸೀಮೆಗೆ ಬೇಟೆಗೆಂದು ಬಂದಿದ್ದಾಗ ಅವನ ಬೇಟೆಯ ನಾಯಿಯೊಂದನ್ನು ಮೊಲ ಅಟ್ಟಿಸಿಕೊಂಡು ಬಂತು. ಇದನ್ನು ಗಮನಿಸಿದ ರಂಗಪ್ಪರಾಜು ಇದು 'ಗಂಡುಭೂಮಿ' ಎಂದು ತಿಳಿದು 'ಮೊಲ ನಾಯಿಯನ್ನು ಅಟ್ಟಿಸಿಕೊಂಡು ಬಂದ ಭೂ ಭಾಗವನ್ನು ಗುರ್ತಿಸಿ ಇಲ್ಲಿಯೇ ಕುರಿ ಮೇಯಿಸಿಕೊಂಡು ರೊಪ್ಪಗಳಲ್ಲಿ ಜೀವನ ಸಾಗಿಸುತ್ತಿದ್ದ ಸ್ಥಳೀಯ ಗೊಲ್ಲ ಗೌಡರಾದ ಸಿರಿಯಣ್ಣ, ದೇವಣ್ಣರ ಸಹಕಾರ ಪಡೆದು ಸಿರಾ ನಗರವನ್ನು ನಿರ್ಮಿಸಿದರೆಂಬ ಐತಿಹ್ಯ ಈ ಕಾವ್ಯದಲ್ಲಿ ವ್ಯಕ್ತವಾಗಿದೆ. ರಂಗಪ್ಪರಾಜುವಿನೊಂದಿಗೆ ಪಾಳೇಗಾರರ ಆಳ್ವಿಕೆ ಪ್ರಾರಂಭವಾಗಿ ಇವನ ನಂತರ ಮಗ ಕಸ್ತೂರಿ ರಂಗಪ್ಪನಾಯಕ ಆಳ್ವಿಕೆಗೆ ಬಂದನು. ಇವನ ನಂತರ ಇವನ ಮಗ ರಂಗಪ್ಪನಾಯಕ ಆಳ್ವಿಕೆಗೆ ಬಂದನು. ಈ ರಂಗಪ್ಪನಾಯಕನೇ ಗುಮ್ಮನಹಳ್ಳಿ ಕದನದಲ್ಲಿ ಪ್ರಸ್ತಾಪಿತವಾಗಿರುವ ಪಾಳೇಗಾರ ಎಂದು ಇತಿಹಾಸಕಾರರು ಗುರ್ತಿಸುತ್ತಾರೆ.[೬]

'ಗುಮ್ಮನಹಳ್ಳಿ ಕದನ' ವನ್ನು ಕುರಿತು ಹಂಪನಾಗರಾಜಯ್ಯ ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ. "ಹದಿನೈದನೇ ಶತಮಾನದ ಆರಂಭದಲ್ಲಿ ಸಿರಾದ ರಂಗಣ್ಣ ಮತ್ತು ಪೂವಲ ಕೆಂಗಣ್ಣ ಎನ್ನುವ' ನಾಯಕರಿಬ್ಬರ ನಡುವೆ ನಡೆದ ಕರುಣಾಪೂರಿತ ಯುದ್ಧದ ವಿವರಣೆಯನ್ನು ಈ ಕೃತಿ ಒಳಗೊಂಡಿದೆ. ವೀರನಾಯಕರು ಒಬ್ಬ ಇತಿಹಾಸಕಾರರಾಗಿ ಈ ಯುದ್ಧಕ್ಕೆ ಸಂಬಂಧಿಸಿದಂತೆ ಚರಿತ್ರೆಯ ಬೇರುಗಳನ್ನು ಹುಡುಕಲು ಶ್ರಮಿಸಿದ್ದಾರೆ. ಹಾಗಾಗಿ ಈ ಕೃತಿ ಜಾನಪದವೆಂದು ಪರಿಗಣಿಸುವುದಕ್ಕಿಂತ ಮಿಗಿಲಾಗಿ ಐತಿಹಾಸಿಕವಾಗಿಯೂ ಮಹತ್ವದ್ದೆನಿಸುತ್ತದೆ".

ರಂಗಪ್ಪನಾಯಕನ ಆಳ್ವಿಕೆಯ ಕಾಲಕ್ಕಾಗಲೇ ಉತ್ತರದ ಬಿಜಾಪುರದ ಸುಲ್ತಾನರ ದಾಳಿ ದಕ್ಷಿಣದ ಕಡೆಗೆ ಕಾಲಿಡುತ್ತಿತ್ತು ಎಂಬ ಅಂಶ ಈ ಲಾವಣಿಯಲ್ಲಿ ಬೆಳಕಿಗೆ ಬರುತ್ತದೆ. ಸಿರಾ ಪ್ರಾಂತ್ಯವನ್ನು ರಂಗಪ್ಪನಾಯಕ ಆಳ್ವಿಕೆ ಮಾಡುತ್ತಿರುವಾಗ ತರೀಕೆರೆಯ ರಾಯದುರ್ಗವನ್ನು ರಂಗಪ್ಪನಾಯಕನ ಅತ್ತೆಯ ಮಗ (ರಂಗಪ್ಪನಾಯಕನ ತಂದೆ ಕಸ್ತೂರಿ ರಂಗಪ್ಪನಾಯಕನ ತಂಗಿಯ ಮಗ) ಪೂವಲ ಕೆಂಗಣ್ಣ ನಾಯಕ ಆಳ್ವಿಕೆ ಮಾಡುತ್ತಿದ್ದ. ಯಾವುದೋ ಕಾರ್ಯಕ್ಕಾಗಿ ಪೂವಲ ಕೆಂಗಣ್ಣ ಸಿರಾ ಪ್ರಾಂತ್ಯಕ್ಕೆ ಬಂದಿದ್ದಾಗ ಮಾವ ರಂಗಪ್ಪನಾಯಕ ಹಾಗೂ ಕೆಂಗಣ್ಣ ನಾಯಕರು ಜೂಜಿಗೆ ಕುಳಿತರು.

"ಸೀರ್ಯಾದ ರಂಗಣ್ಣ| ಪೂವಲ ಕೆಂಗಣ್ಣ

ಅವರಿಬ್ಬರಿಗೆ| ಒಂದು ಪಡಸಾಲೆ|

ಅವರಿಬ್ಬರಿಗೊಂದು| ಚಾವಡಿ| ಪಡಸಾಲೆ| ಅದರೊಳಗಿನ್ನು| ದಾಯ

ಪಗಡೆಯನಾಡ್ಯಾರೆ,

ನಾ ಸೋತರೆ| ನನ್ನ ರಾಯದುರ್ಗ ಕೊಡುತೀನಿ|

ನೀ ಸೋತರೆ ನಿನ್ನ ತಂಗಿ| ರಂಗೋಜಿಯ

ನೀ ಸೋತರೆ ನಿನ್ನ ತಂಗಿ| ರಂಗೋಜಿಯ| ಇಷ್ಟಾರ್ಥ ಸಲ್ಲಿಸಲು ಬಿಡಬೇಕು||"

ತಂಗಿ ರತ್ನೋಜಿಯನ್ನು ಜೂಜಿನ ಪಣವಾಗಿಡಬೇಕೆಂಬ ಮಾತಿನಿಂದ ಸಿಡಿದೆದ್ದ ಮಾವ ರಂಗಪ್ಪನಾಯಕ ಪಗಡೆಯಲ್ಲಿ ಸೋತಂತೆ ನಟಿಸಿ ರತ್ನೋಜಿಗೆ ತನ್ನ ಮಾನ ಉಳಿಸುವಂತೆ ಕೇಳಿಕೊಂಡು ಅವಳು ತನ್ನ ಎಂಜಲು ನೀರನ್ನು ಕೆಂಗಣ್ಣ ನಾಯಕನ ಮುಖಕ್ಕೆ ಎರಚಬೇಕು ಎಂದು ಹೇಳುತ್ತಾನೆ (ಕೆಲವೊಂದು ಪಠ್ಯಗಳಲ್ಲಿ ಮೂತ್ರ ಎಂದು ಹೇಳಲಾಗಿದೆ.) ತಂಗಿ ರತ್ನೋಜಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ತನ್ನ ಎಂಜಲು ನೀರನ್ನು ಕೆಂಗಣ್ಣ ನಾಯಕನಿಗೆ 'ತಿರುಪತಿ ತೀರ್ಥ ತಂದಿದ್ದೇನೆ ಭಕ್ತಿಯಿಂದ ಸ್ವೀಕರಿಸಿ' ಎಂದು ಹೇಳಿ ಕುಡಿಸುತ್ತಾಳೆ. ಎಂಜಲು ನೀರನ್ನು ಕುಡಿದು ಮಂಗನಂತಾದ ಕೆಂಗಣ್ಣ ನಾಯಕನನ್ನು ಕಂಡು ಅಣ್ಣ-ತಂಗಿಯರಿಬ್ಬರೂ ನಕ್ಕು-ನಗಾಡುತ್ತಾರೆ. ವಿಷಯ ತಿಳಿದ ಕೆಂಗಣ್ಣ ಸಿಟ್ಟಿನಿಂದ ಸೇಡು ತೀರಿಸಿಕೊಳ್ಳಲು 'ತುರುಕರಿಂದ ನಿನ್ನ ತಲೆ ಕಡಿಸುತ್ತೇನೆ' ಎಂದು ಪ್ರತಿಜ್ಞೆ ಮಾಡಿ ಹೋಗುತ್ತಾನೆ. ಇಲ್ಲಿ ಎರಡು ಪಾಳೇಪಟ್ಟುಗಳ ಬಾಂಧವ್ಯ ಕುಸಿದುಬಿದ್ದು ಯುದ್ಧಕ್ಕೆ ನಾಂದಿಯಾದ ಚರಿತ್ರೆಯನ್ನು ಕಾಣಬಹುದಾಗಿದೆ. ಈ ಇಬ್ಬರು ನಾಯಕರುಗಳ ನಡುವಿನ ಅಭಿಪ್ರಾಯ ಬಿಜಾಪುರದ ಸುಲ್ತಾನರ ದಾಳಿಗೆ ಕಾರಣವಾಗುತ್ತದೆ. ತರೀಕೆರೆ ರಾಯದುರ್ಗದ ಕೆಂಗಣ್ಣನಾಯಕ ತನ್ನ ಸಹಾಯಕ್ಕೆ ಚಿತ್ರದುರ್ಗದ ಕಸ್ತೂರಿ ರಂಗಪ್ಪನಾಯಕನನ್ನು ಬೇಡುತ್ತಾನೆ. ಇವರಿಬ್ಬರ ನಡುವೆ ಈ ಮುಂಚೆ ಹಗೆತನವಿದ್ದರೂ ಸಿರಾದ ಪಾಳೇಗಾರನನ್ನು ಮಟ್ಟಹಾಕುವ ಉದ್ದೇಶದಿಂದ ಒಂದಾಗುತ್ತಾರೆ. ಇವರಿಬ್ಬರ ಜೊತೆಗೆ ಬಿಜಾಪುರದ ಸುಲ್ತಾನರ ಸೈನ್ಯದ ನೆರವೂ ಬಂದು ಮೂರು ಬಣಗಳು ಒಟ್ಟಾಗಿ ಸಿರಾದ ರಂಗಪ್ಪನಾಯಕನ ಮೇಲೆ ದಂಡೆತ್ತಿ ಬಂದು ಸೋಲಿಸಿದ ಈ ಯುದ್ಧದ ಚಾರಿತ್ರಿಕ ಘಟನೆಯೊಂದನ್ನು 'ಗುಮ್ಮನಹಳ್ಳಿ' ಕದನ ಎಂಬ ಸಾಂಸ್ಕೃತಿಕ ವೀರನ ಲಾವಣಿಯಲ್ಲಿ ಬರುತ್ತದೆ. ಈ ಸಾಂಸ್ಕೃತಿಕ ವೀರರ ಬಗ್ಗೆ ಇರುವ ಕಥೆ, ಕವನ, ಲಾವಣಿ, ಐತಿಹ್ಯಗಳು ಇತಿಹಾಸಕಾರರಿಗೆ ಚಿನ್ನದ ಗಣಿ ಇದ್ದಂತೆ. ೧೫ನೇ ಶತಮಾನದಿಂದ ೨೦ನೇ ಶತಮಾನದವರೆಗೆ ಈ ಪ್ರಾಂತ್ಯದಲ್ಲಾದ ಇತಿಹಾಸದ ಸ್ಥಿತ್ಯಂತರಗಳ ಉಲ್ಲೇಖ ಸಿಗುತ್ತದೆ.

ಒರಗೂರು ವೀರಮ್ಮನ ಕಥೆಯಲ್ಲಿ ವೀರಮ್ಮಳ ಗಂಡ ಬೊಮ್ಮಲಿಂಗಯ್ಯ ವೇಣುಕಲ್ಲು ಗುಡ್ಡದ ಪಾಳೇಗಾರ ಕಸ್ತೂರಿ ರಂಗಪ್ಪನಾಯಕನ ದಳಪತಿಯಾಗಿದ್ದನು.[೮] ಕಾರಣಾರ್ಥವಾಗಿ ಕಸ್ತೂರಿ ರಂಗಪ್ಪ ಶ್ರೀರಂಗಪಟ್ಟಣಕ್ಕೆ ಹೋಗಿದ್ದ ಎಂಬ ವಿಚಾರ ಬರುತ್ತದೆ. ಇಲ್ಲಿ ಈ ಚಿಕ್ಕ ಪುಟ್ಟ ಪಾಳೇಗಾರರು ಶ್ರೀರಂಗಪಟ್ಟಣದ್ದ ಹೈದರಾಲಿ ಅಥವಾ ಟಿಪ್ಪುವಿನ ಆದೀನದಲ್ಲಿ ಆಳ್ವಿಕೆ ಮಾಡುತ್ತಿದ್ದಿರಬಹುದು. ಏಕೆಂದರೆ ಮುಸ್ಲೀಮರ ಪ್ರಭುತ್ವ ಈ ಹೊತ್ತಿಗಾಗಲೇ ದಕ್ಷಿಣದಲ್ಲಿ ಪ್ರಾರಂಭವಾಗಿತ್ತು ಎಂಬ ಚಾರಿತ್ರಿಕಾಂಶ ಇದರಿಂದ ವ್ಯಕ್ತವಾಗುತ್ತದೆ. ಕಸ್ತೂರಿ ರಂಗಪ್ಪನಿಗೆ ಬೊಮ್ಮಲಿಂಗಯ್ಯನೆಂಬ ದಳಪತಿ ಇದ್ದ, ಇವನು ಕಿರಿಯ ವಯಸ್ಸಿನವನು. ಪಾಳೇಗಾರ ನಾಡಿನಲ್ಲಿ ಇಲ್ಲದ ಸಂದರ್ಭ ನೋಡಿ ಪಠಾಣರು ದಾಳಿಮಾಡಿದಾಗ ಧೈರ್ಯದಿಂದ ಎದುರಿಸಿ ಶತೃಗಳನ್ನು ಹಿಮ್ಮೆಟ್ಟಿಸಿದ ಕಾರಣದಿಂದ ಸುತ್ತಮುತ್ತಲ ಪ್ರದೇಶಗಳಲ್ಲೆಲ್ಲಾ ಹೆಸರಾಗಿದ್ದ ಎಂಬ ಅಂಶ ಕಥೆಯಿಂದ ವ್ಯಕ್ತವಾಗುತ್ತದೆ. ಪಾಳೇಗಾರರನಿಗೆ 'ಹರಿಯಮ್ಮ' ಎಂಬ ರಾಣಿ ಇದ್ದಳು. ಪತಿ ಇಲ್ಲದಿದ್ದಾಗ ರಾಜ್ಯವನ್ನು ಮುನ್ನಡೆಸುವ ಜವಾಬ್ದಾರಿ ಹೊರುತ್ತಿದ್ದಳು ಎಂಬ ವಿಚಾರ ತಿಳಿದುಬರುತ್ತದೆ. ಪಠಾಣರ ದಾಳಿ ಈ ಪಾಳೇಗಾರ ಸಂಸ್ಥಾನಗಳ ಮೇಲೆ ನಡೆಯುತ್ತಿತ್ತು. ಶತೃಗಳನ್ನು ಕಲ್ಲು-ಗುಂಡುಗಳ ತೂರುವುದರ ಮೂಲಕ ಅವರ ಮನೋ ಸ್ಥೈರ್ಯವನ್ನು ಕುಗ್ಗಿಸುತ್ತಿದ್ದ ಯುದ್ಧ, ಒಂದು ರೀತಿಯ ಗೆರಿಲ್ಲಾ ಯುದ್ಧ ತಂತ್ರವನ್ನು ತಿಳಿಸುತ್ತದೆ. ಖಡಾ ಖಡ ಯುದ್ಧದಲ್ಲಿ ಸೋಲಿಸಲು ಸಾಧ್ಯವಿಲ್ಲದ ದಳಪತಿಯ ಸೈನ್ಯ ಯುದ್ಧತಂತ್ರದಿಂದ ಗೆಲುವು ಸಾಧಿಸುತ್ತದೆ.

ವೇಣುಕಲ್ಲು ಗುಡ್ಡದ ಪಾಳೇಗಾರನ ದಳಪತಿಯ ಈ ಸಾಹಸವನ್ನು ಕೇಳಿ ನಿಡುಗಲ್ಲಿನ ಪಾಳೇಗಾರ ಬೊಮ್ಮಲಿಂಗಯ್ಯನನ್ನು ತನ್ನ ಸಂಸ್ಥಾನದ ದಳಪತಿಯನ್ನಾಗಿ ನೇಮಿಸಿಕೊಳ್ಳುವ ಪ್ರಸಂಗ ಈ ಎರಡೂ ಸಂಸ್ಥಾನಗಳಾದ ವೇಣುಕಲ್ಲುಗುಡ್ಡ ಹಾಗೂ ನಿಡುಗಲು ಸಂಸ್ಥಾನಗಳ ನಡುವೆ ಇದ್ದ ಅನ್ಯೋನ್ಯ ಪ್ರೀತಿ-ವಿಶ್ವಾಸ, ಸಹಬಾಳ್ವೆಯನ್ನು ಧಾಖಲಿಸುತ್ತದೆ. ಹಾಗೂ ಎರಡೂ ಸಂಸ್ಥಾನಗಳ ನಡುವೆ ವೈವಾಹಿಕ ಸಂಬಂಧ ಇತ್ತು ಎಂಬುದನ್ನು ತಿಳಿಯಬಹುದು. ಬೊಮ್ಮಲಿಂಗಯ್ಯ ತಡಕಲೂರಿನ ಶಿವನೇಗೌಡರ ಗಂಗಪ್ಪನ ಮಗಳು ವೀರಮ್ಮಳನ್ನು ವಿವಾಹವಾಗುವುದರಿಂದ ವೀರಮ್ಮ ಸಿರಾದ ಪಾಳೇಗಾರ ವೀರರಂಗಪ್ಪ ನಾಯಕನ ಗರಡಿಯ ಮನೆಯಲ್ಲಿ ನಾನಾ ಯುದ್ಧ ವಿದ್ಯೆಗಳಲ್ಲಿ ಪಳಗಿದವಳಾಗಿದ್ದು ಇವರಿಬ್ಬರ ವಿವಾಹದಿಂದಾಗಿ ದಳಪತಿ ಬೊಮ್ಮಲಿಂಗಯ್ಯ ಈ ಮೂರೂ ಸಂಸ್ಥಾನಗಳಲ್ಲಿ ಸಂಬಂಧ ಹೊಂದಿ ಕೀರ್ತಿ-ಗೌರವಾಧರಗಳನ್ನು ಹೊಂದಿದ್ದನು. ಇವನ ಈ ಪ್ರಖ್ಯಾತಿಯನ್ನು ಕಂಡು ಸಹಿಸದ ಶತೃಗಳಾದ ಕರಿಯಪ್ಪ ಮತ್ತು ಬಳಗದವರು ಈ ಮುಂಚೆ ನಿಡುಗಲ್ಲಿನ ಪಾಳೇಗಾರನಾಗಿದ್ದ ಬೊಮ್ಮಲಿಂಗಯ್ಯನು ತಮ್ಮ ಅಧಿಕಾರವನ್ನು ಪಡೆದುಕೊಂಡಿದ್ದರಿಂದ ಅವನ ಮೇಲೆ ದ್ವೇಷ ಸಾದಿಸಿ ಕೊನೆಗೆ ಬೊಮ್ಮಲಿಂಗಯ್ಯನನ್ನು ಹತ್ಯೆ ಮಾಡುವುದು ಪಾಳೇಗಾರ ಸಂಸ್ಥಾನದಲ್ಲಿನ ಆಡಳಿತದ ಒಳ ಬಿರುಕುಗಳನ್ನು ತಿಳಿಸುತ್ತದೆ.

ವೀರಮ್ಮ ಹಾಗೂ ಅವಳ ಅತ್ತೆ ಹೊಲಕ್ಕೆ ಹೋದಾಗ ಬಾಯಾರಿಕೆಯಾಗಿ ಹಳ್ಳಕ್ಕೆ ನೀರಿಗೆ ಬರುತ್ತಾರೆ. ಇಲ್ಲಿ ದಳಪತಿಯ ಕುಟುಂಬ ಆ ಸಂದರ್ಭದಲ್ಲಿ ವ್ಯವಸಾಯ ಚಟುವಟಿಕೆಗಳಲ್ಲೂ ತೊಡಗಿದ್ದು ಹತ್ತಿ ಬೆಳೆಯನ್ನು ಬೆಳೆಯುತ್ತಿದ್ದರೆಂಬ ಅಂಶ ಅರಿವಾಗುತ್ತದೆ.

ಕಾಡುಗೊಲ್ಲ ಜನಾಂಗವೊಂದರ ಅರೆ ಅಲೆಮಾರಿ ತನದ ಎಂದರೆ ಈ ಜನಾಂಗ ಪಶುಸಂಗೋಪನೆಯನ್ನು ಮಾಡುತ್ತಿದ್ದ ಸಂದರ್ಭದಲ್ಲಿ ಹುಲ್ಲು-ನೀರಿಗಾಗಿ ಹುಡುಕುತ್ತಾ ಎಲ್ಲಿ ಹುಲ್ಲು-ನೀರಿದೆಯೋ ಅಲ್ಲೆ ನಿಂತು ಬದುಕುವ ಸಂದರ್ಭದಲ್ಲಿ ಆ ಜನಾಂಗ ಎದುರಿಸಬೇಕಾದ ಸಮಸ್ಯೆಗಳು ಹಾಗೂ ಅಪಾಯದ ಅಂಚಿನಲ್ಲಿದ್ದ ಜನಾಂಗದ ರಕ್ಷಣೆಗಾಗಿ ಪಣತೊಟ್ಟು, ಅಪಾಯದಿಂದ ಪಾರುಮಾಡಿ ಆ ಜನಾಂಗಕ್ಕೆ ಕಟ್ಟುಪಾಡುಗಳನ್ನು ನೇಮಿಸಿದ ಐತಿಹಾಸಿಕ ಚರಿತ್ರೆಯೊಂದನ್ನು ಎತ್ತಪ್ಪ, ಜುಂಜಪ್ಪ, ಚಿತ್ರದೇವರ ಕಥೆ, ಕಾವ್ಯಗಳು ತಿಳಿಸುತ್ತವೆ. ಮೀರಾಸಾಬಿಹಳ್ಳಿ ಶಿವಣ್ಣನವರು ಅಭಿಪ್ರಾಯಪಡುವಂತೆ ಪ್ರಾಚೀನ ಮಾನವನ ಮೂಲಭೂತ ಕಸುಬುಗಳಲ್ಲಿ ಒಂದಾದ, ಸಂಮೃದ್ಧ ಪಶುಪಾಲಕ ಸಂಸ್ಕೃತಿಯ ಹಿನ್ನೆಲೆಯಿಂದ ಬಂದ ಈ ಸಾಂಸ್ಕೃತಿಕ ವೀರರು, ಕಾಡುಗೊಲ್ಲ ಜನಾಂಗದ ಅಳಿದುಹೋದ ಪಶುಪಾಲಕ ಸಂಸ್ಕೃತಿಯ ಪಳೆಯುಳಿಕೆಗಳೂ ಆಗಿದ್ದಾರೆ.'

ಉತ್ತರದಿಂದ ದಕ್ಷಿಣದ ಕಡೆ ಪ್ರಯಾಣ ಬೆಳೆಸಿ ಬಂದ ಈ ಕಾಡುಗೊಲ್ಲ ಜನಾಂಗ ಇತರ ಬ್ಯಾಡ ಹಾಗೂ ಕುಂಚಿಟಿಗ ಜನಾಂಗ್ಗದ ಮಧ್ಯೆ ಸಂಘರ್ಷವನ್ನು ಎದುರಿಸಬೇಕಾಗಿ ಬರುವ, ಭೂ ಒಡೆಯರಾದ ಬೇಡ ಹಾಗೂ ಕುಂಚಿಟಿಗ ಜನಾಂಗದವರ ಮೇಲೆ ಅನಿವಾರ್ಯವಾಗಿ ಹೊರಗಿನಿಂದ ಬಂದ ಈ ಜನಾಂಗದವರು ಸಂಘರ್ಷ ಇಲ್ಲವೆ ಸಂಧಾನದ ಮೂಲಕ ಬದುಕಬೇಕಾದ ಸಂದರ್ಭವೊಂದರ ಚರಿತ್ರೆಯನ್ನು ಈ ಕಾಡುಗೊಲ್ಲರ ಕಾವ್ಯಗಳು ಹೇಳುತ್ತವೆ. ತಮ್ಮ ಜನಾಂಗದ ಶೀಲ-ಮಡಿವಂತಿಕೆ, ಆಚಾರ-ವಿಚಾರಗಳ ಸುರಕ್ಷತೆಗಾಗಿ ಈ ಸಾಂಸ್ಕೃತಿಕ ನಾಯಕರು ಜನ್ಮತಳೆದಂತೆ ಕಾಣುತ್ತದೆ. ಈ ನಾಯಕರುಗಳ ಉದ್ದೇಶ ಜನಾಂಗೀಯ ರಕ್ಷಣೆಯಾಗಿದ್ದರೂ ಕೆಲವೊಂದು ಸಂದರ್ಭದಲ್ಲಿ ಮಾನವೀಯ ಗುಣಗಳಿಗಾಗಿ ಹೋರಾಡಿದವರಾದ್ದರಿಂದ ಈ ನಾಯಕರು ಇತರ ಜನಾಂಗದವರಿಂದಲೂ ಗೌರವ ಆರಾಧನೆಗೆ ಒಳಗಾಗಿದ್ದಾರೆ. ಸ್ವತ್ತುಗಳನ್ನು ಹೆಚ್ಚಿಸಿಕೊಳ್ಳುವ, ಸ್ವತ್ತುಗಳನ್ನು ನಾಶಪಡಿಸುವ ಈ ಉತ್ಪಾದನಾ ವ್ಯವಸ್ಥೆಯಲ್ಲಿನ ಬಿರುಕನ್ನು ಹೇಳುತ್ತವೆ. ಈ ಬಿರುಕನ್ನು ಕಾಡುಗೊಲ್ಲ ಹಾಗೂ ಬೇಡ ಜನಾಂಗದ ನಡುವೆ ಕಾಣುತ್ತೇವೆ. ಹಾಗೂ ಅದರಂತೆ ಮ್ಯಾಸ ನಾಯಕರು, ಊರ ನಾಯಕರು, ಕುಲ-ಬೆಡಗುಗಳಲ್ಲಿಯೂ ಈ ಸಂಘರ್ಷವಿದೆ. ಉದಾ: ಮಾರೇನ ಗೊಲ್ಲರಿಗೂ (ಜುಂಜಪ್ಪನ ಕುಲ) ಹಾಗೂ ಕಂಬೆರ ಗೊಲ್ಲರಿಗೂ ನಡುವೆ ನಡೆವ ಸಂಘರ್ಷವನ್ನು ಜುಂಜಪ್ಪನ ಕಾವ್ಯ ಸಾಧರವಾಗಿ ವಿವರಿಸುತ್ತದೆ.

ತಮ್ಮ ಪಶು ಸಂಪತ್ತಿನೊಂದಿಗೆ ಹುಲ್ಲುಗಾವಲಿನಿಂದ ಹುಲ್ಲುಗಾವಲಿಗೆ ಅಲೆಯುತ್ತಾ, ಆಯಾ ಪ್ರದೇಶದ ಪಾಳೇಗಾರರೊಂದಿಗೆ ಕಾಡುಗಳಲ್ಲಿದ್ದ ಬೇಡರೊಂದಿದೆ ಸಂಘರ್ಷ ಮಾಡುತ್ತಾ, ಕಾಡು

ಮೃಗಗಳೊಂದಿಗೆ ಸೆಣಸಾಡುತ್ತಾ, ಪ್ರಾಣವನ್ನೇ ಪಣವಾಗಿಟ್ಟು ಬದುಕಿದವರು. ಅನಿವಾರ್ಯವಾದಾಗ ಪ್ರಾಣವನ್ನೇ ತೃಣವಾಗಿ ಪರಿಗಣಿಸಿದವರು, ಯಾವತ್ತೂ ತಮ್ಮ ಶೀಲ-ಶೌಚಗಳಿಗೋಸ್ಕರ ತಮ್ಮನ್ನೇ ಬಲಿದಾನ ಕೊಟ್ಟು ಕೊಂಡವರು. ಮೋಹಗೊಂಡು ಬೆನ್ನತ್ತಿದ ಬೇಡರ ಹೆಣ್ಣುಗಳೊಂದಿಗೆ ಆಟವಾಡುತ್ತಾ ತಲೆಯೊಡೆಸಿಕೊಂಡು ಸತ್ತವರು.

ಎತ್ತಪ್ಪ ಪಶುಪಾಲಕ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬಂದವನು. ಇಡೀ ಕಾಡುಗೊಲ್ಲ ಜನಾಂಗಕ್ಕೆ ಸಾಂಸ್ಕೃತಿಕ ಸಂವಿಧಾನವನ್ನು ಕೊಟ್ಟವನು. ಗೊಲ್ಲ ಕುಲಾಚಾರದ ಕಟ್ಟುಗಳನ್ನು ರೂಪಿಸಿದವನು. ಜನಾಂಗದ ತಪ್ಪು ಒಪ್ಪುಗಳನ್ನು ವಿಂಗಡಿಸಿ ಒಂದು ದುಡ್ಡಿನಿಂದ ಇಪ್ಪತ್ತು ದುಡ್ಡಿನವರೆಗೂ ತಪ್ಪು ತೆಗೆದು ಜನಾಂಗದ ಪಾಲಿಗೆ ಪುರಾಣ ಪುರುಷನಾದವನು. ಈ ವೀರನ ಚರಿತ್ರೆಯನ್ನು ಎತ್ತಪ್ಪನ ಕಥೆ, ಕಾವ್ಯಗಳು ಹೇಳುತ್ತವೆ. ಕಾಡುಗೊಲ್ಲ ಜನಾಂಗವು ಇಂದೂ ಆಚರಿಸುತ್ತಿರುವ ಗೂಡಿನ ಹಬ್ಬದ ಚಾರಿತ್ರಿಕಾಂಶಗಳು ಈ ಎತ್ತಪ್ಪನ ಕಥೆಯಲ್ಲಿ ಬರುತ್ತವೆ.

ಕಾಡುಗೊಲ್ಲ ಜನಾಂಗದ ಮುಖಂಡನಂತಿದ್ದ ಎತ್ತಪ್ಪ ಯಾವುದಕ್ಕೂ ಹೆದರದೆ ತಾನು ಹೋದ ಕಡೆಯಲ್ಲೆಲ್ಲಾ ದಿಟ್ಟತನದಿಂದ ವರ್ತಿಸಿ ಅವರ ವಿರೋಧವನ್ನು ಕಟ್ಟಿಕೊಳ್ಳುತ್ತಾನೆ. ಉದಾ: ತುಪ್ಪಾಡಿ ಕಾವಲಿನಲ್ಲಿ ಮುನಿಶಾಪ, ಕಳ್ಳಮಡಗು ಕಾವಲಿನಲ್ಲಿ ದೇವತೆಗಳ ಶಾಪ, ಸಂಡೂರು ಕಾವಲಿನಲ್ಲಿ ಬೇಡರ ವಿರೋಧ, ಗ್ಯಾವೆ ಸೀಮೇಲಿ ಬ್ರಾಹ್ಮಣನ ವಿರೋಧ ಕಟ್ಟಿಕೊಳ್ಳುವುದು. ಅವನ ಈ ಅಕ್ರಮಣಕಾರಿ ದಿಟ್ಟ ವರ್ತನೆಯಿಂದಲೇ ಜನಾಂಗವನ್ನು ರಕ್ಷಿಸಿದ್ದು.[೧೦]

ಸಿರಾ ತಾಲ್ಲೂಕಿನ ಬೇವಿನಹಳ್ಳಿಯಲ್ಲಿ ಕರಿಯಮ್ಮನ ದೇವಸ್ಥಾನವನ್ನು ಎತ್ತಪ್ಪ ಕಟ್ಟಿಸಿದ ಎಂಬುದು ಕಥೆಯಲ್ಲಿ ಬರುತ್ತದೆ. ಇಂದೂ ಸಾವಿರಾರು ಜನ-ಜಾತ್ರೆ ನಡೆಯುವ ಜನಾಂಗದ ಪ್ರಸಿದ್ಧ ಧಾರ್ಮಿಕ ಸ್ಥಳವೊಂದರ ಪೂರ್ವಾಪರ ವಿಚಾರ ಇದರಿಂದ ವೇದ್ಯವಾಗುತ್ತದೆ. ಎತ್ತಪ್ಪ ತನ್ನ ದನ-ಕರುಗಳಿಗೆ ಕಾಲುಜ್ವರ ಕಾಣಿಸಿಕೊಂಡಾಗ ಈಗಿನ ಗೌರವಸಮುದ್ರ ಚಿತ್ರದುರ್ಗ ಜಿಲ್ಲೆ ತಳಕು (ಓಬಳಿ) ಗೌರಸಂದ್ರದ ಮಾರಮ್ಮನಿಂದ 'ಕಣಿ' ಕೇಳಿ ಖಾಯಿಲೆಗೆ ಕಾರಣವಾದ ಕರಿಯಮ್ಮಳ ಕೋಪವನ್ನು ತಡೆಯಲು ಆಕೆಗೆ ಗುಡಿಕಟ್ಟಿಸಿ ಭಕ್ತನಾಗುತ್ತಾನೆ. ಭೂಮಿ-ಚಿನ್ನಾಭರಣಗಳಿಗಿಂತ ಗೋವು ಅಂದು ಈ ಜನಾಂಗಕ್ಕೆ ದೊಡ್ಡ ಸಂಪತ್ತಾಗಿತ್ತು. ಎತ್ತಯ್ಯ ದೊರೆತನವನ್ನೂ ಮಾಡುತ್ತಾನೆ. ಕೆರೆ-ಕಟ್ಟೆಗಳನ್ನು ಕಟ್ಟಿಸುತ್ತಾನೆ. ದೊಡ್ಡಮೈಗ, ಚಿಕ್ಕಮೈಗ ಎಂಬ ಊರುಗಳನ್ನು ಕಟ್ಟಿ ಆಳುತ್ತಾನೆ. ಎತ್ತಯ್ಯನ ಆಳ್ವಿಕೆಯ ಕಾಲದಲ್ಲಿ ಗೋಕುಲಕ್ಕೆ ಕಟ್ಟು-ಕರಾರುಗಳು ಮಾಡಿ ಸ್ವಚ್ಛಂಧವಾದ ಜನಾಂಗವನ್ನಾಗಿ ರೂಪಿಸಿದ ಚರಿತ್ರೆಯ ಅಂಶಗಳು ಎತ್ತಪ್ಪನ ಕಥೆಯಲ್ಲಿ ಬರುತ್ತವೆ. ಆದ್ದರಿಂದಲೇ ಎತ್ತಯ್ಯನಿಗೆ "ದೊಡ್ಡ ಬಿರಿದಿನೋನು" ಎಂದು ಕರೆಯುತ್ತಾರೆ. ಇಂದಿಗೂ ಈ ಕಟ್ಟುಪಾಡುಗಳು ಕಾಡುಗೊಲ್ಲ ಜನಾಂಗದಲ್ಲಿ ಭಯ-ಭಕ್ತಿಯಿಂದ ಆಚರಿಸಲ್ಪಡುತ್ತಿವೆ. ಸಹಸ್ರಾರು ಭಕ್ತರನ್ನು ಪಡೆದು ಒಂದು ಪ್ರಮುಖ ಧಾರ್ಮಿಕ ತಾಣವಾದ ಪುರ್ಲಹಳ್ಳಿ ಬೂತಪ್ಪನ

ದೇವಸ್ಥಾನ ರಚನೆಯಾದ ಚಾರಿತ್ರಿಕ ಅಂಶ ಜುಂಜಪ್ಪನ ಕಾವ್ಯದಿಂದ ತಿಳಿದುಬರುತ್ತದೆ. ಜುಂಜಪ್ಪನನ್ನು ತಾಳೇದುರ್ಗಿಯ ಕಾಟದಿಂದ ಬೂತಪ್ಪ ರಕ್ಷಿಸಿದ್ದಕ್ಕಾಗಿ ಜುಂಜಪ್ಪ ಬೂತಪ್ಪನನ್ನು ಪುರಲೇಹಳ್ಳಿಯಲ್ಲಿ ಸ್ಥಾಪಿಸಿದ.

ಸಿರಾ ಪಟ್ಟಣಕ್ಕೆ 'ಸೀರ್ಯ' ಎಂಬ ಹೆಸರಿದೆ, ಈ ಸೀರ್ಯಾವನ್ನು ರಂಗಪ್ಪನಾಯಕ ಆಳುತ್ತಿದ್ದ ಎಂಬ ಇತಿಹಾಸದ ಪ್ರಸಂಗಗಳು ಕೋಡಿಹಳ್ಳಿ ಜೂಜಿನ ಬೇವಿನಮರವನ್ನು ಎತ್ತಪ್ಪ ತನ್ನ ಚಿಕ್ಕರೆಂಬೆ ಎಂಬ ತುಂಬುಗಬ್ಬವಾದ ಹಸುವನ್ನು ಹಾರಿಸುವುದಾಗಿ ಸಾಣೇಕೆರೆ ಪುಟ್ಟಣ್ಣನೊಂದಿಗೆ ಜೂಜು ಕಟ್ಟಿದಾಗ ಆ ಜೂಜಿನ ಸಾಕ್ಷಿಯಾಗಿ ಸಿರಾದ ಪಾಳೇಗಾರ ರಂಗಪ್ಪನಾಯಕ ಬರುವ ಸನ್ನಿವೇಶದಲ್ಲಿ ಉಲ್ಲೇಖಿತಗೊಂಡಿದೆ.[೧೧]

ಮುನಿಯ ಶಾಪವಿದ್ದರೂ ಎತ್ತಪ್ಪ ಸಂಡೂರಿನ ಕಾವಲಿಗೆ ಹುಲ್ಲು-ನೀರಿಗಾಗಿ ಹೋಗುವುದು ಭೀಕರ ಬರಗಾಲವನ್ನು ಸೂಚಿಸುತ್ತದೆ. ಇಂತಹ ಸಂದರ್ಭದಲ್ಲಿ ಯಾವ ಶಾಪವನ್ನೂ ಲೆಕ್ಕಿಸದೆ ದನ-ಕರುಗಳ ಹಿತರಕ್ಷಣೆಯೇ ಗೊಲ್ಲಗೌಡನಿಗೆ ಮುಖ್ಯವಾಗುತ್ತದೆ.

ಕಾಡುಗೊಲ್ಲ ಜನಾಂಗದ ಮೊದಲ ಸಾಂಸ್ಕೃತಿಕ ನಾಯಕ ಎತ್ತಪ್ಪನಾದರೆ ಆನಂತರ ಜುಂಜಪ್ಪ ಬರುತ್ತಾನೆ. ಜುಂಜಪ್ಪ ಎತ್ತಪ್ಪನಿಗಿಂತಲೂ ಪ್ರಸಿದ್ಧ ಪವಾಡಪುರುಷನಾಗಿದ್ದಾನೆ. ಎತ್ತಪ್ಪನೇ ಮುಂದಿನ ಜನ್ಮದಲ್ಲಿ ಜುಂಜಪ್ಪನಾಗಿ ಹುಟ್ಟಿದ್ದಾನೆ ಎಂದು ಎತ್ತಪ್ಪನ ಕಥೆಯಲ್ಲಿ ಬರುತ್ತದೆ. ಎತ್ತಪ್ಪನ ಹಿಂಬಾಲಕರಾದ ಎತ್ತಪ್ಪನ ಬಾವಮೈದುನ ಹಾಗೂ ಮಾರು ಮುತ್ತರು ಕ್ರಮವಾಗಿ ಮಾರಣ್ಣ, ಮೈಲಣ್ಣರಾಗಿ ಹುಟ್ಟುತ್ತಾರೆ.

ಚಿತ್ರದುರ್ಗ ಹಾಗೂ ತುಮಕೂರು ಜಿಲ್ಲೆಯ ಇತಿಹಾಸವನ್ನು ಜಾನಪದೀಯವಾಗಿ ಅಧ್ಯಯನ ಮಾಡಲು ಎತ್ತಪ್ಪನಕಥೆ ಮಹತ್ವ ಪೂರ್ಣವಾದದ್ದಾಗಿದೆ. ಪಾಳೇಗಾರರು, ಅವರ ಕಾಲ, ಅವರ ಆಡಳಿತ ಪ್ರದೇಶಗಳು, ಗಡಿಭಾಗಗಳು, ಮಾಡಿದ ಯುದ್ಧಗಳ ಬಗ್ಗೆ ಸ್ವಲ್ಪ ಮಟ್ಟಿನ ಚಾರಿತ್ರಿಕ ದಾಖಲೆಗಳನ್ನು ಈ ಎತ್ತಯ್ಯನ ಕಥೆ ಒದಗಿಸುತ್ತದೆ. ಅದರಲ್ಲೂ ಸಂಡೂರು, ತಳಕಿನಗುಡ್ಡ, ಕಳ್ಳಮಡಗು, ಬೇವಿನಹಳ್ಳಿ, ಹುಲಿಕುಂಟೆ ಪ್ರದೇಶಗಳ ಪ್ರಾದೇಶಿಕ ಚರಿತ್ರೆಯ ದೃಷ್ಟಿಯಿಂದ ಅತ್ಯಂತ ಮಹತ್ವವನ್ನು ಪಡೆದುಕೊಳ್ಳುತ್ತದೆ.

ಪಶುಪಾಲನ ಸಂಸ್ಕೃತಿ ಸಂಪೂರ್ಣ ನಿರ್ಮಾಣಗೊಂಡ ಘಟ್ಟದಲ್ಲಿ ನಿಂತು ಹಳೆಯದನ್ನು ಮೆಲುಕು ಹಾಕುತ್ತಾ ಚಿಂತಿಸುವ ವಿಶಿಷ್ಟ ಕಾವ್ಯವೆಂದು ಪುರುಷೋತ್ತಮ ಬಿಳಿಮಲೆ ಅಭಿಪ್ರಾಯ ಪಡುತ್ತಾರೆ. ಮುಂದುವರೆದು ವಲಸೆಗಾರ, ಪಶುಪಾಲಕರ ಅರೆ ವಲಸೆಗಾರರ ಮತ್ತು ಕೃಷಿ ವಲಸೆಗಾರರ, ಪಶುಪಾಲಕರ ಬಗ್ಗೆ ಆಳವಾದ ಅಧ್ಯಯನವನ್ನು ಮಾಡುತ್ತದೆ ಎಂದಿದ್ದಾರೆ.[೧೨] ಇತಿಹಾಸ-ಪುರಾಣದೊಂದಿಗೆ ಬೆಸೆದುಕೊಂಡಿರುವ ಒಂದು ಭೋಗೋಳಿಕ ಪರಿಸರದ ಜೀವನವನ್ನು

ಜಾನಪದ ನೆಲೆಯಲ್ಲಿ ಎತ್ತಪ್ಪನ ಕಥೆ ಒಡಮೂಡಿಸುತ್ತದೆ. ಬೇಟೆ ಮತ್ತು ಪಶುಪಾಲಕ ಸಂಸ್ಕೃತಿಗಳ ಮುಖಾಮುಖಿಯನ್ನು ಪ್ರತಿಪಾದಿಸುತ್ತದೆ. ತುಮಕೂರು ಹಾಗೂ ಚಿತ್ರದುರ್ಗ ಜಿಲ್ಲೆಯ ಇತಿಹಾಸ-ಚರಿತ್ರೆ-ಪುರಾಣ ಈ ಎಲ್ಲಾ ಅಂಶಗಳು ಜಾನಪದ ನೆಲೆಯಲ್ಲಿ ಒಗ್ಗೂಡಿವೆ. ಇಲ್ಲಿನ ದಾಖಲೆಗಳು ಚಿತ್ರದುರ್ಗ ಹಾಗೂ ಸಿರಾ ಸೀಮೆಯತ್ತ ಹೊಸ ನೋಟವನ್ನು ನೀಡುತ್ತವೆ. ಸಿರಾ ಸೀಮೆಯ ಒಂದು ಬುಡಕಟ್ಟು ಉಪಸಂಸ್ಕೃತಿಯ ಸ್ಥಿತ್ಯಂತರವನ್ನು ಕಾಣಬರುದಾಗಿದೆ. ನಾಗರೀಕತೆಯ ಸೋಂಕು ತಗುಲಿ ಉಪಸಂಸ್ಕೃತಿಗಳು ನಾಶವಾಗುತ್ತಿರುವ ಈ ಸಂದರ್ಭದಲ್ಲಿ ಈ ಸಾಂಸ್ಕೃತಿಕ ನಾಯಕರ ಅಧ್ಯಯನ ಚರಿತ್ರೆಯ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿದೆ. ಚರಿತ್ರೆಯನ್ನು ಹೊಸ ನಿಟ್ಟಿನಲ್ಲಿ ಅರಿಯುವ, ಕಟ್ಟುವ ಕೆಲಸದಲ್ಲಿ ಜಾನಪದೀಯ ದೃಷ್ಟಿಕೋನದ ಅಗತ್ಯದತ್ತ ಈ ಅಧ್ಯಯನ ಬೊಟ್ಟುಮಾಡುತ್ತದೆ.

ಸಿರಾ ಸೀಮೆಯ ಮತ್ತೊಬ್ಬ ಸಾಂಸ್ಕೃತಿಕ ವೀರ ಬೊಪ್ಪರಾಯನ ಐತಿಹ್ಯಗಳಲ್ಲಿ ವ್ಯವಸಾಯ ಹಾಗೂ ಪಶುಪಾಲನೆ ಚಟುವಟಿಕೆಗಳಲ್ಲಿ ತೊಡಗಿದ ಜನಾಂಗವೊಂದರ ಮೇಲೆ ತುರುಕರ ದಾಳಿಯಾಗಿ ಅವರು ಈ ಜನಾಂಗದ ಆಸ್ತಿಪಾಸ್ತಿಗಳನ್ನು ಕೊಳ್ಳೆ ಹೊಡೆದದ್ದಲ್ಲದೆ ಜನಾಂಗದ ಪಾವಿತ್ರತೆಯನ್ನು ಕೆಡಿಸಲು ಮುಂದಾದಾಗ ಮಾನ-ಪ್ರಾಣ ರಕ್ಷಣೆಯ ದೃಷ್ಟಿಯಿಂದ ಕುಂಚಿಟಿಗ ಜನಾಂಗ ಉತ್ತರ ಭಾರತದಿಂದ ದಕ್ಷಿಣದ ಕಡೆಗೆ ವಲಸೆ ಬರುವ ಸಂದರ್ಭದಲ್ಲಿ ವೀರಖ್ಯಾತರಾಯ, ಎರಡುಕೆರೆಮಾರ, ಗೂಳಿಗಾಳ ಗರ್ಭಗೌಡ, ಕೊಡಲಿ ಮಾರಪ್ಪ, ಜಲದಿ ಬೊಪ್ಪರಾಯ, ಕಟ್ಟಿಗೆ ಮಾರಣ್ಣ ಮಲಗೊಂಡಶಿಂಗ್ರಿಯೇ ಮೊದಲಾದವರು ಮುಂದಾಳತ್ವವನ್ನು ವಹಿಸಿದ್ದಾರೆ.[೧೩] ದಾರಿಯುದ್ದಕ್ಕೂ ಇವರು ಆತಂಕದಲ್ಲಿದ್ದ ತಮ್ಮ ಜನಾಂಗಕಕ್ಕೆ ಧೈರ್ಯ ಬುದ್ಧಿವಾದಗಳನ್ನು ಹೇಳುತ್ತಾ ಎದುರಾದ ತೊಂದರೆಗಳನ್ನು ಜೈಸುತ್ತಾ ಅನೇಕ ಊರು, ಪಟ್ಟಣ, ನದಿಗಳನ್ನು ದಾಟಿ ತಮ್ಮ ಎಲ್ಲಾ ಕರಿ, ತುರಗ, ಕಂಪ್ಳಳ ಸಹಿತ ಪ್ರಯಾಣ ಮಾಡಿ ದಾರಿಯಲ್ಲಿ ಸಿಕ್ಕಿದ ಆನೆಗೊಂದಿ ಪಟ್ಟಣದಲ್ಲಿ ನಿಂತು ಅಲ್ಲಿ ಕೆಲಕಾಲವಿದ್ದು ಚೇಳೂರಿಗೆ ಬಂದು ಅಲ್ಲಿ ೪೮ ಕುಲವೂ ಶಾಸನ ಹೊರಡಿಸಿ ಅಲ್ಲಿಂದ ಕದರಿಗೆ ಪ್ರಯಾಣ ಬೆಳೆಸಿ ಅಲ್ಲಿ ನೆಲೆನಿಂತರೆಂಬ ಐತಿಹ್ಯವಿದೆ. ಕುಂಚಿಟಿಗ ಜನಾಂಗವೊಂದರ ಸಾಂಸ್ಕೃತಿಕ ನಾಯಕ ಬೊಪ್ಪರಾಯ ಈ ಸಂದರ್ಭದಲ್ಲಿಯೇ ಎಂದರೆ ಆತಂಕ, ತಳಮಳದಲ್ಲಿ ಸಿಕ್ಕಿ ಹಾಕಿಕೊಂಡು ಸಂಕಷ್ಟವನ್ನು ಎದುರಿಸುತ್ತಾ ಪಾವಿತ್ರ ರಕ್ಷಣೆಗಾಗಿ ದಕ್ಷಿಣದ ಕಡೆ ಪ್ರಯಾಣ ಬೆಳೆಸಿದ ಸಂದರ್ಭದಲ್ಲಿ ದಾರಿಯಲ್ಲಿ ಎದುರಾದ ನದಿಯನ್ನು ದಾಟಲು ಈ ಬೊಪ್ಪರಾಯರ ಸಹಾಯ ಮಾಡಿದ್ದಾನೆ. ಇವನ ಈ ಸಹಾಯಕ್ಕೆ ಕೃತಜ್ಞತೆಯಾಗಿ ಮುಂದೆ ಈ ಜನಾಂಗ ಇವನನ್ನು ತಮ್ಮ ಸಾಂಸ್ಕೃತಿಕ ನಾಯಕನಂತೆ ಸ್ವೀಕರಿಸಿ ಗೌರವಾಧರಗಳನ್ನು ಇಂದಿಗೂ ಸಲ್ಲಿಸುತ್ತಾ ಬಂದಿರುವ ಜನಾಂಗವೊಂದರ ಚಾರಿತ್ರಿಕ ಸ್ಥಿತ್ಯಂತರವನ್ನು ಜಲದಿ ಬೊಪ್ಪರಾಯನೆಂಬ ಈ ಸಾಂಸ್ಕೃತಿಕ ವೀರನ ಅಧ್ಯಯನದಿಂದ ತಿಳಿಯಬಹುದಾಗಿದೆ. ಜಲದಿಯನ್ನು ಭೇದಿಸಿ ದಾರಿ

ತೋರಿಸಿಕೊಟ್ಟ ಬೊಪ್ಪರಾಯ ಮುಂದೆ ಜಲದಿ ಬೊಪ್ಪರಾಯನೆಂದೇ ಹೆಸರಾಗುತ್ತಾನೆ. ಈ ಐತಿಹ್ಯ ವಡ್ನಗೆರೆ ವೀರನಾಗಮ್ಮಳ ಕಥೆಯಲ್ಲಿ ಉಲ್ಲೇಖಿತವಾಗಿದೆ. ತನ್ನ ಪ್ರಾಣವನ್ನು ತೆತ್ತು ಜನಾಂಗದ ರಕ್ಷಣೆ ಮಾಡಿದ ಕಾರಣ ಜಲದಿ ಬೊಪ್ಪರಾಯ ಎಂದು ಖ್ಯಾತನಾದನು. ಇಂದಿಗೂ ಕುಂಚಿಟಿಗ "ಜನಾಂಗದ ಜಲದೇನೋರು" ಎಂಬ ಗೋತ್ರ ಇವನ ಈ ಕಥೆಯನ್ನೇ ಹೇಳುತ್ತದೆ.[೧೪]

ಬೊಪ್ಪರಾಯನನ್ನು ಕುರಿತು ಅಧ್ಯಯನ ಮಾಡುವಾಗ ಕುಂಚಿಟಿಗ ಜನಾಂಗದ ಇತಿಹಾಸದ ವಿವರಗಳು ದೊರೆಯುತ್ತವೆ. "ಕುರುಬ ಕೆಟ್ಟು ಕುಂಚಿಟಿಗನಾದ" ಎಂಬ ಗಾದೆಮಾತೊಂದು ಕೆಲವು ಪ್ರದೇಶಗಳಲ್ಲಿ ಅಸ್ತಿತ್ವದಲ್ಲಿದೆ. ಈ ಗಾದೆಗೆ ಆಧಾರವೆಂಬಂತೆ ಬೊಪ್ಪರಾಯನ ಚರಿತ್ರೆಯಲ್ಲಿಯೂ ಬೊಪ್ಪರಾಯ ಮೂಲತಃ ಕುರುಬರವನು ಎಂದು ಕೆಲವು ಐತಿಹ್ಯಗಳು ಹೇಳುತ್ತವೆ. ಹೀಗಾಗಿ ಈ ಎರಡೂ ಜನಾಂಗಗಳ ಮೂಲ ಒಂದೇ ಆಗಿದೆ. ಒಂದೇ ಶಾಖೆಯಿಂದ ಕವಲೊಡೆದಿದೆ. ಇಂದು ವಕ್ಕಲಿಗ ಜಾತಿಯ ಪ್ರಧಾನ ಶಾಖೆಗಳಲ್ಲೊಂದಾದ ಈ ಕುಂಚಿಟಿಗ ಜನಾಂಗ ಪ್ರತ್ಯೇಕವಾಗಿ ವ್ಯವಸಾಯವನ್ನೇ ಪ್ರಧಾನ ಕಸುಬನ್ನಾಗಿ ಹೊಂದಿ ಬದುಕುತ್ತಿದ್ದಾರೆ. ಕುರುಬ ಜನಾಂಗ ಕೃಷಿಗೆ ಪೂರಕವಾದ ಪಶುಪಾಲನೆ (ಕುರಿಸಾಕಾಣೆ)ಯನ್ನು ಅವಲಂಬಿಸಿಕೊಂಡು ಬಂದಿದೆ. ಆದರೆ ಕುಂಚಿಟಿಗ ಜನಾಂಗದ ಇಂದಿನ ಸದಸ್ಯರು ತಮ್ಮ ಕುರುಬ ಮೂಲವನ್ನು ಹೇಳಿಕೊಳ್ಳಲು ಹಿಂಜರಿಯುತ್ತಾರೆ.

ಸಿರಾ ಸೀಮೆಯಲ್ಲಿ ಹೆಚ್ಚಾಗಿ ಕಂಡುಬರುವ ಕುಂಚಿಟಿಗ ಜನಾಂಗೀಯ ಚರಿತ್ರೆಗೆ ಈ ಅಧ್ಯಯನ ಜನಪದೀಯ ದಾಖಲೆಗಳನ್ನು ಒದಗಿಸುತ್ತದೆ. ಚಿತ್ರದುರ್ಗ, ತುಮಕೂರು, ಪ್ರಾಂತ್ಯಗಳಲ್ಲಿ ಹೆಚ್ಚಾಗಿ ನೆಲೆಸಿರುವ ಕುಂಚಿಟಿಗರು, ಕಾಡುಗೊಲ್ಲರು, ಕುರುಬರು, ಮ್ಯಾಸಬೇಡರು ಈ ಎಲ್ಲಾ ಜನಾಂಗದ ಮೂಲವು ಒಂದೇ ಬಗೆಯ ವಲಸೆಯ ಕಥೆಯನ್ನು ಹೇಳುತ್ತವೆ. ಇವರೆಲ್ಲಾ ದೆಹಲಿಯಿಂದ ಹೊರಟು ಗಂಗಾನದಿಯನ್ನು ದಾಟಿಕೊಂಡು ದಕ್ಷಿಣಕ್ಕೆ ಬಂದು ಈಗ ಇರುವ ಭಾಗಗಳಲ್ಲಿ ನೆಲಸಿದರೆಂದು ಹೇಳಿಕೊಳ್ಳುತ್ತಾರೆ.[೧೫] ಇದಕ್ಕೆ ಐತಿಹ್ಯಗಳು, ಲಿಖಿತ ಮಾಹಿತಿಗಳೂ ದೊರೆಯುತ್ತವೆ. ಅನೇಕ ಸಂಸ್ಕೃತಿ ಚಿಂತಕರು ಹಾಗೂ ಮೀರಾ ಸಾಬಿಹಳ್ಳಿ ಶಿವಣ್ಣರಂತಹ ಇತಿಹಾಸ ಚಿಂತಕರೂ ಇದೇ ಅಭಿಪ್ರಾಯವನ್ನು ತಳೆಯುತ್ತಾರೆ.[೧೬] ಕುಂಚಿಟಿಗ ಜನಾಂಗದ ಸಾಂಸ್ಕೃತಿಕ ವೀರ ಬೊಪ್ಪರಾಯ ಮೂಲತಃ ಕುರಿ ಕಾಯುವ ಕುರುಬನೆಂದೂ ಇವನು ದ್ವಾರಕಾಪುರದಿಂದ ಬಂದ ಕುಂಚಿಟಿಗ ಜನಾಂಗದವರಿಗೆ ಗಂಗೆಯನ್ನು ದಾಟಲು ತನ್ನನ್ನೇ ಬಲಿಕೊಟ್ಟುಕೊಂಡು ಸಹಾಯ ಮಾಡಿದನು. 'ನನ್ನ ಮುಂಡಕ್ಕೆ ನಿಮ್ಮ ಕುಂಚಿಟಿಗ ಕುಲದ ಹೆಣ್ಣು ಕೊಟ್ಟು ಮದುವೆ ಮಾಡಬೇಕೆಂಬ' ಶರತ್ತಿನಿಂದ ಸಹಾಯ ಮಾಡಿದನೆಂದು ಐತಿಹ್ಯ ಹೇಳುತ್ತದೆ.[೧೭]

ಕಾಡುಗೊಲ್ಲ ಜನಾಂಗದಲ್ಲಿ ಐತ್ತಪ್ಪನ ನಂತರ ಬರುವ ಮತ್ತೊಬ್ಬ ಸಾಂಸ್ಕೃತಿಕ ವೀರ ಜುಂಜಪ್ಪ. ಜುಂಜಪ್ಪನ ಕಾವ್ಯದಲ್ಲಿ ಕಾಡುಗೊಲ್ಲ ಜನಾಂಗದ ಅವಿಭಾಜ್ಯ ಅಂಗವಾದ ಬೇಟೆ,

ಆಹಾರ ಸಂಗ್ರಹಣೆ, ಪಶುಪಾಲನೆ, ಹುಲಿ, ಚಿರತೆ, ಹಾವು, ಚೇಳುಗಳ ಸಹಜ ಲೋಕ ಅನಾವರಣವಾಗುತ್ತದೆ. ಅರೆ ಅಲೆಮಾರಿಗಳಾಗಿ ಒಂದುಕಡೆ ನೆಲೆಗೊಳ್ಳಲು ನಡೆಸಿದ ತವಕದಲ್ಲಿರುವ ಹಾಗೂ ಆ ಸಂದರ್ಭದ ಘರ್ಷಣೆಗಳನ್ನು ಹೇಳುವಂತಹದ್ದು. ಮೊದಲಿಗೆ ಪೂರಾ ಅಲೆ ಮಾರಿಗಳಾಗಿಯೇ ಜೀವನ ಸಾಗಿಸುತ್ತಿದ್ದ ಇವರು ಕ್ರಮೇಣ ಹಟ್ಟಿಗಳನ್ನು ಕಟ್ಟಿಕೊಂಡತೆ ಜುಂಜಪ್ಪನ ಕಾವ್ಯದಿಂದ ವ್ಯಕ್ತವಾಗುತ್ತವೆ. ಈ ಜುಂಜಪ್ಪನ ಕಾವ್ಯದಲ್ಲಿ ಎರಡು ಅಂಶಗಳು ಮುಖ್ಯವಾಗುತ್ತವೆ. ಒಂದುಕಡೆ ಈ ಕಾಡುಗೊಲ್ಲರನ್ನು ಸಹಿಸದ ಬೇಟೆಗಾರ ಸಮೂಹ, ಮತ್ತೊಂದು ಕಡೆ ಇವರ ಹುಲ್ಲುಗಾವಲುಗಳನ್ನು ಕ್ರಮೇಣ ಬೇಸಾಯ ಭೂಮಿಯಾಗಿ ಪರಿವರ್ತಿಸುತ್ತಾ ಬಂದ ಕೃಷಿ ವರ್ಗಗಳು ಇವರ ನಡುವೆ ತಮ್ಮ ಅಸ್ತಿತ್ವಕ್ಕಾಗಿ ಪರದಾಡುವಂತೆ ಕಂಡುಬರುವುದು ಒಂದು ಅಂಶವಾದರೆ ತಮ್ಮದೇ ಕುಲದ ಇತರೆ ಬೆಡಗುಗಳ ಅಸೂಯೆಯನ್ನು ಗೆಲ್ಲುವುದು ಮತ್ತೊಂದು ಅಂಶ. ಮಾರೆನವರ ಗೊಲ್ಲರ ದನಗಳು ಬೆಳೆದು ಹೆಚ್ಚಾಗುವುದನ್ನು ಕಂಬೇರ ಗೊಲ್ಲರು ಸಹಿಸುವುದಿಲ್ಲ. ಜುಂಜಪ್ಪನಿಗೂ ಜುಂಜಪ್ಪನ ಸೊದರ ಮಾವಂದಿರಿಗೂ ಸದಾ ನಡೆಯುವ ಹೋರಾಟ ಇಂಥದ್ದೇ.

ಜುಂಜಪ್ಪನ ಕಾವ್ಯವು ಅಡವಿಯ ಜೀವನಕ್ಕೆ ಒಗ್ಗಿಹೋದ ಗೊಲ್ಲ ಗೌಡರುಗಳ ೩ ತಲೆಮಾರುಗಳ ಕಥೆಯನ್ನು ಅವರ ಅತ್ಯಂತ ಪ್ರಾಚೀನತೆಯ ಜೀವನ ವಿಧಾನದ ಹೆಣಿಗೆಯೊಡನೆ ಬಣ್ಣಿಸುತ್ತದೆ. ತಮ್ಮ ಅಸಂಖ್ಯಾತ ದನಗಳ ಸಾಕಾಣೆಗಾಗಿ ಮೇವು-ನೀರಿನ ಹೊಸ ನೆಲೆಗಳನ್ನು ಹುಡುಕುತ್ತಾ ಹೊರಟು ಆ ದಿಕ್ಕಿನ ಎಡರು-ತೊಡರುಗಳನ್ನೆಲ್ಲಾ ತಾವೇ ಧೈರ್ಯದಿಂದ ನಿವಾರಿಸಿಕೊಳ್ಳುತ್ತಲೇ ಈ ದನಗಾಹಿ ವೀರರು ಮುನ್ನುಗ್ಗಬೇಕಾಗುತ್ತಿತ್ತು. ಅನೇಕ ವೇಳೆ ಮಡದಿ-ಮಕ್ಕಳ ಯೋಗಕ್ಷೇಮದ ಕಡೆಗೂ ಕಣ್ಣಾಡಿಸಲು ತಮಗೆ ಬಿಡುವು ಸಿಗುವುದಿರಲಿ ತಿಂಗಳುಗಟ್ಟಲೆ ಅವರನ್ನೆಲ್ಲಾ ತೊರೆದು ಬಹು ದೂರದಲ್ಲಿ ಕಂಡು-ಕೇಳರಿಯದ ಜಾಗಗಳಲ್ಲಿ ತಾತ್ಕಾಲಿಕವಾಗಿ ನೆಲೆಸಬೇಕಾಗುತ್ತಿತ್ತು. ಆ ಸಂದರ್ಭದೊಳಗೆ ತಮ್ಮ ದೈನಂದಿನ ಬದುಕಿನಲ್ಲಿ ಬೆರೆತುಹೋದ ಬಗೆ, ಬಗೆಯ ಗೋವುಗಳು, ಹಾಲು-ಮೊಸರು, ಬೆಣ್ಣೆ, ಕೊಳಲು, ಕೊಡಲಿ, ಕಂಬಳಿ, ಕೋಲು, ಮೆಟ್ಟು ಮುಂತಾದ ವಿವರಗಳನ್ನು ಕೊಡುತ್ತದೆ. ಇತರ ಜನವರ್ಗದಿಂದ ತಮ್ಮನ್ನು ಪ್ರತ್ಯೇಕಿಸಿಕೊಂಡ ಜನಾಂಗವೊಂದರ ಸಾಂಸ್ಕೃತಿಕ ಸ್ವರೂಪದ ಚಾರಿತ್ರಿಕ ಸೂಕ್ಷ್ಮತೆಗಳನ್ನು ಈ ಕಾವ್ಯ ಕಟ್ಟಿಕೊಡುತ್ತದೆ. ಜೊತೆಗೆ ಒಂದೇ ಜನಾಂಗದೊಳಗಡೆಯೇ ವ್ಯಕ್ತಿತ್ವ ವಿಕಸನ ಹಾಗೂ ಸಾಮಾಜಿಕ ಏಳ್ಗೆಯನ್ನು ಸಹಿಸದೆ ದಬ್ಬಾಳಿಕೆ ಮತ್ತು ದೌರ್ಜನ್ಯದ ದಾರಿಯನ್ನು ಹಿಡಿದ ಶಕ್ತಿಗಳ ವಿರುದ್ಧ ಬಾಲಕನೊಬ್ಬ ಸಿಡಿದೇಳುವ ಕಥೆಯನ್ನು ಒಳಗೊಂಡಿದೆ. ಈ ಕಾವ್ಯ ಪ್ರಾರಂಭವಾಗುವುದೇ ವರ್ಣಸಂಕರದ ಸಂದರ್ಭದೊಂದಿಗೆ. ಭೂಸುರರಾದ ಬ್ರಾಹ್ಮಣರ ಗಂಗೆಮಾಳಮ್ಮನನ್ನು ಚಿತ್ತರದೇವರು ಮದುವೆಯಾಗುವ ಪ್ರಸಂಗ ಶ್ರೇಣೀಕೃತ ಭಾರತದ ಜಾತಿ ವ್ಯವಸ್ಥೆಯಲ್ಲಿ ಮೇಲ್ಪುದಿಯಲ್ಲಿರುವ

ಬ್ರಾಹ್ಮಣರನ್ನು ಈ ಬುಡಕಟ್ಟು ಕಾವ್ಯ ಪ್ರಾರಂಭದಲ್ಲೇ ಎದುರುಹಾಕಿಕೊಳ್ಳುತ್ತಿದ್ದ ಸ್ವರೂಪ ಸ್ಪಷ್ಟವಾಗುತ್ತದೆ. ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಅತ್ಯಂತ ಪ್ರಭಲರಾಗಿದ್ದ ಬ್ರಾಹ್ಮಣರ ಪ್ರತಿಷ್ಠೆಯನ್ನು ಶ್ರೇಷ್ಠತ್ವವನ್ನು ತನ್ನದೇ ಆದ ಒಂದು ವಿಧಾನದಿಂದ ಕಾಡುಗೊಲ್ಲ ಸಂಪ್ರದಾಯ ಪ್ರತಿಭಟಿಸುತ್ತಿದೆ. ಇದು ಕಲ್ಪಿತ ಕಥೆಯಂತಿದ್ದರೂ ಸಾಂಸ್ಕೃತಿಕ ಹೋರಾಟದ ಮುಖ್ಯ ಅಸ್ತ್ರ ಮತ್ತು ಮಗ್ಗಲು.

ಜುಂಜಪ್ಪ ಹುಲ್ಲುಗಾವಲುಗಳಲ್ಲಿ ದನ ಮೇಯಿಸುವಾಗ ಅನೇಕ ಪಾಳೇಗಾರರೊಡನೆ ಘರ್ಷಣೆಗೆ ಇಳಿಯುತ್ತಾನೆ. (ಸೀರ್ಯಾದ ರಂಗಣ್ಣ, ಚೇಳೂರು ರಂಗಣ್ಣ ಇತ್ಯಾದಿ) ಹೀಗೆ ಕಾಡುಗೊಲ್ಲರ, ಮ್ಯಾಸ ಬೇಡರ ಕದನದ ಚಿತ್ರಗಳು ಅತಿ ದಟ್ಟವಾಗಿ ದೊರೆಯುತ್ತಾ ಹೋಗುತ್ತವೆ. ಹೀಗಾಗಿ ಮ್ಯಾಸ ಬೇಡರಿಗಿಂತ ಕಾಡುಗೊಲ್ಲರು ಹೆಚ್ಚಾಗಿ ಪಶುಪಾಲನೆಯಲ್ಲಿ ತೊಡಗಿಕೊಂಡಿದ್ದರ ಚಿತ್ರ ದೊರೆಯುತ್ತದೆ. ಮೂಲದಲ್ಲಿ ಈ ಎರಡೂ ಜನಾಂಗಗಳು ಒಂದೇ ಆಗಿದ್ದು ಪಶುಪಾಲನೆಯಲ್ಲಿ ತೊಡಗಿದ್ದವು. ಒಮ್ಮೆ ಹೊಟ್ಟೆಯ ಹಸಿವು ತಾಳಲಾರದೆ ಚಿಕ್ಕವನೊಬ್ಬನು ಆಗತಾನೇ ಈದಿದ್ದ ಕರುವಿನ ತೊಡೆಗೆ ಬಾಯಿಹಾಕಿ ಮಾಂಸ ಕಿತ್ತಿದ್ದನ್ನು ನೋಡಿದ ಹಿರಿಯ 'ಬೇಡಬೇಡ' ಎಂದರೂ ಕೇಳದೆ ತಿಂದದ್ದರಿಂದ ಅವನನ್ನು 'ಬೇಡ' ಎಂದು ಹೊರಗಿಟ್ಟರಂತೆ ಅವನೇ ಬೇಡನಾದನೆಂಬುದು ಒಂದು ಐತಿಹ್ಯ.[೧೮] ಆದರೆ ಬೇಡನೊಂದಿಗೆ ಸೇರಿಕೊಂಡಿರುವ ಮ್ಯಾಸ ಎಂಬ ವಿಶೇಷಣ ಪದವನ್ನು ಗಮನಿಸಿದರೆ ಬಹಿಷ್ಕಾರದ ನಂತರ ಇವರು ದನಗಳನ್ನು ಮೇಯಿಸುವ ವೃತ್ತಿಯನ್ನು ಅವಲಂಭಿಸಿರುವುದನ್ನು ಸೂಚಿಸುವಂತಿದೆ. (ಮೇಯಿಸು>ಮೆಯ್ಯಿಸು>ಮ್ಯಾಸು>ಮ್ಯಾಸ) ಬೇಡವೆಂದರೂ ಕೇಳದೆ ಹಸುಕರುವಿನ ಮಾಂಸ ತಿಂದುದ್ದರಿಂದ ಬಹಿಷ್ಕಾರಕ್ಕೆ ಒಳಪಟ್ಟು ಮ್ಯಾಸ ಬೇಡನಾಗಿ ಬೇಟೆ ಸಂಸ್ಕೃತಿಗೆ ಸೇರಿದ ಸಾಂಸ್ಕೃತಿಕ ಪಲ್ಲಟಗಳನ್ನು, ಸಾಂಸ್ಕೃತಿಕ ಸ್ಥಿತ್ಯಾಂತರದ ಕಥೆಗಳನ್ನು ಈ ಜನಾಂಗದ ಕಥೆಗಳು ತಮ್ಮ ಗರ್ಭದಲ್ಲಿ ಇಟ್ಟುಕೊಂಡಿವೆ. ಜುಂಜಪ್ಪನ ಮರಣೋತ್ತರ ಮಹಿಮಾ ಪ್ರಸಂಗಗಳ ಮೂಲಕ ಜುಂಜಪ್ಪನ ಹಿರಿಯಟ್ಟಿ (ಪುರುಷವ್ವನ ಕೆರೆಯ ಸಮೀಪದಲ್ಲೇ ಇದ್ದದ್ದು) ಹಾಳಾದುದಕ್ಕೆ 'ಕೊಳ್ಳೆಯ ದಂಡು' ಕಾರಣವೆಂಬ ಮಾಹಿತಿ ನೀಡುವುದು ಅಂದಿನ ಕಾಲದ ಪಾಳೇಗಾರರ ಸೂಕ್ಷ್ಮ ರಾಜಕೀಯ ಚಿತ್ರವನ್ನು ಕೊಡುವುದರೊಂದಿಗೆ ರಾಜಕೀಯ ದುರಂತವನ್ನು, ಹಳ್ಳಿಗಳು ಹಾಳಾದುದನ್ನು ಸೂಕ್ಷ್ಮವಾಗಿ ಧ್ವನಿಸುತ್ತದೆ. ಇಲ್ಲಿ ಚೇಳೂರು ರಂಗಣ್ಣ, ಸೀರ್ಯಾದ ರಂಗಣ್ಣನ ಕಾಲದ ರಾಜಕೀಯ ಸ್ಥಿತ್ಯಂತರಗಳನ್ನು ಸೂಕ್ಷ್ಮವಾಗಿ ಗ್ರಹಿಸಬಹುದು. ಜೊತೆಗೆ ಹದಗೆಟ್ಟ ಬೇಡ-ನಾಯಕ ಸಂಬಂಧಗಳನ್ನು ಕುರಿತ ಸ್ಥೂಲ ಚಿತ್ರಣವೂ ದೊರೆಯತ್ತದೆ. ಆದರೆ ಈ ಸಂಬಂಧದ ವೈಪರೀತ್ಯಗಳು ಈರಗಾರರ ಕಥೆಗಳಲ್ಲಿ, ಎತ್ತಪ್ಪನ ಕಥೆಗಳಲ್ಲಿ ಇನ್ನಷ್ಟು ವಿವರಗಳೊಂದಿಗೆ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ. ಗೌರಸಂದ್ರ ಮಾರಮ್ಮ, ತಾಳೇದುರ್ಗಿಯಂತಹ ಅತಿಮಾನವ ಸ್ತ್ರೀ ವ್ಯಕ್ತಿತ್ವಗಳೊಂದಿಗೆ ಈ ನೆಲದ ಎಲ್ಲ ಸತ್ವ-ಸಾಮರ್ಥ್ಯ, ದೌರ್ಬಲ್ಯಗಳ ಮುದ್ದೆಯಂತಿರುವ ಕಂಬಕ್ಕ, ಚಿನ್ನಮ್ಮ, ಜಾಸಕಲ್ಲು ದೊಡ್ಡಕ್ಕ, ಬಡಚಿತ್ತಪ್ಪನ ವ್ಯಕ್ತಿತ್ವಗಳು

ಪರಿಣಾಮಕಾರಿಯಾಗಿ ಮೂಡಿಬಂದಿವೆ. ಕರುಣಾಮೂರ್ತಿಯಾದ ಹೊನ್ನಟ್ಟಿ ಆಲೆಗೌಡ, ಜುಂಜಪ್ಪನ ಕಷ್ಟಕ್ಕೆ ಮಾನವೀಯವಾಗಿ ಸ್ಪಂದಿಸುವ ಪುರ್ಲಹಳ್ಳಿ ಬೂತಪ್ಪನ ಪಾತ್ರಗಳು, ಗಿಡ್ಡೀರೆಗೌಡನಂತಹ ದುರಹಂಕಾರಿ ಭಕ್ತ, ಪೂಜಾರಿ ಚಿತ್ತಯ್ಯನಂತಹ ಅಂತರಂಗದ ಭಕ್ತರ ವಿಷಯದಲ್ಲಿ ಜುಂಜಪ್ಪನ ನಡವಳಿಕೆ ಎಷ್ಟು ಉಗ್ರವಾಗಿರಬಹುದೆಂಬುದನ್ನು ತೋರಿಸುವುದರೊಂದಿಗೆ ಕೆರಳಿ ಕೆಂಡವಾದ ಜುಂಜಪ್ಪನ ಇನ್ನೊಂದು ಮಗ್ಗುಲಿನ ಪರಿಚಯವೂ ಆಗುತ್ತದೆ. ಹುಲ್ಲು-ನೀರಿಗೋಸ್ಕರ ಬವಣೆ ಪಡುತ್ತಾ ಕಾವಲಿನಿಂದ ಕಾವಲಿಗೆ ಅಲೆಯುತ್ತಾ, ದ್ವೇಷ, ಅಸೂಯೆಗಳ ಜಂಜಾಟದಲ್ಲಿ ತೊಳಲುತ್ತಾ, ವಿರೋಧಿಗಳ ಹುಟ್ಟಡಗಿಸುತ್ತಾ, ಎಲ್ಲಿ ಹುಲ್ಲು-ನೀರು ಐತೋ ಅದೇ ನಮ್ಮ ಮನೆಮಾರು ಎನ್ನುವ ಗೊಲ್ಲ ಜೀವನದ ಸಿದ್ಧಾಂತವನ್ನು ಕಾವ್ಯಮನ ಮುಟ್ಟುವಂತೆ ಬಿಚ್ಚಿಡುತ್ತದೆ.

ಹೆಜ್ಜೆಹೆಜ್ಜೆಗೂ ಗೊಲ್ಲ ಜನಾಂಗದ ದಟ್ಟ ಸಾಂಸ್ಕೃತಿಕ ಚಿತ್ರ ನೀಡುವುದರೊಂದಿಗೆ ಜನಾಂಗದ ಸಂಪ್ರದಾಯ, ನಂಬಿಕೆ, ಆದರ್ಶಗಳಿಗೆ ಸಂಬಂಧಿಸಿದ ಯಾವುದೇ ವಿವರಗಳನ್ನು ನೀಡುತ್ತಾ ಕಾವ್ಯ ಕಾಡುಗ್ಗೊಲ್ಲರ ನಿಘಂಟಿನ ರೂಪತಳೆಯುತ್ತದೆ.[೧೯] ಜುಂಜಪ್ಪ ಕಾವ್ಯ ಜನಪದ ದೃಷ್ಟಿಯಿಂದ, ಸಾಂಸ್ಕೃತಿಕ ದೃಷ್ಟಿಯಿಂದ ಬೆಲೆಯ್ಳುಳ್ಳ ಅನೇಕ ಅಂಶಗಳನ್ನು ಒಳಗೊಂಡಿದೆ. ಕಾಡುಗೊಲ್ಲರ ಆಹಾರ, ಉಡುಪು, ಕಸುಬು, ಆಭರಣಗಳು, ಹುಟ್ಟು, ಸಾವು, ಮದುವೆ ಮೊದಲಾದ ಸಂಸ್ಕೃತಿಯ ಆದರ್ಶ ವಿನ್ಯಾಸಗಳು ಮತ್ತು ಕಡ್ಡಾಯ ವಿನ್ಯಾಸಗಳು ಎಂದು ಹೇಳಬಹುದು. ಎರಡು ಜನಾಂಗಗಳ ಸ್ನೇಹ, ಸುಮಧುರ ಸಂಬಂಧವನ್ನು ಜುಂಜಪ್ಪನ ಕಾವ್ಯದಲ್ಲಿ ಕಾಣಬಹುದು. ಕುಂಚಿಟಿಗ-ಕಾಡುಗೊಲ್ಲ ಜನಾಂಗಗಳ ನಡುವಿನ ಸಾಂಸ್ಕೃತಿಕ ಬೆಸುಗೆಯ ಧ್ಯೋತಕ ಈ ಕಾವ್ಯ.

ಜುಂಜಪ್ಪನ ಕಾವ್ಯದಲ್ಲಿ ಪ್ರಸ್ತಾಪವಾಗಿರುವಂತೆ ಒಮ್ಮೆ ಜುಂಜಪ್ಪನ ಗೋ ಸಂಪತ್ತನ್ನು ವಶ ಪಡಿಸಿಕೊಳ್ಳುವ ಮನಸ್ಸಾಗುತ್ತದೆ ಶಿರಾ ಪಾಳೇಗಾರ ರಂಗಪ್ಪ ನಾಯಕನಿಗೆ. ಹೇಗಾದರೂ ಮಾಡಿ ಪಶು ಸಂಪತ್ತನ್ನು ವಶಪಡಿಸಿಕೊಳ್ಳಲು ಪಾಳೇಗಾರ ರಂಗಪ್ಪ ಒಮ್ಮೆ ಜುಂಜಪ್ಪನ ಗೆಳೆತನ ಮಾಡಿ ಅರಮನೆಯ ಸತ್ಕಾರ ನೀಡುತ್ತಾನೆ. ಜೊತೆಗೆ ಸ್ನೇಹದಿಂದ ಪಗಡೆಯಾಟಕ್ಕೂ ಕರೆಯುತ್ತಾನೆ. ಒಂದೆರಡು ಆಟಗಳಲ್ಲಿ ಜುಂಜಪ್ಪ ಸೋತವನಂತೆ ನಟಿಸುತ್ತಾನೆ. ಆಗ ಪಾಳೇಗಾರ ರಂಗಪ್ಪ ಇದೇ ಸುಸಮಯವೆಂದು ತನ್ನ ರಾಜ್ಯವನ್ನು ಪಣಕ್ಕಿಡುತ್ತಾನೆ. ಜುಂಜಪ್ಪನೂ ತನ್ನ ಗೋ ಸಂಪತ್ತನ್ನು ಪಣಕ್ಕಿಡುತ್ತಾನೆ. ಇಲ್ಲಿ ರಂಗಪ್ಪ ಸೋತರೆ ತನ್ನ ಪಾಳೇಗಾರಿಕೆಯನ್ನು ಜುಂಜಪ್ಪನಿಗೆ ಬಿಟ್ಟುಕೊಡಬೇಕು. ಜುಂಜಪ್ಪ ಸೋತರೆ ತನ್ನ ಇಡೀ ಏಳುಗೂಡಿನ ದನವನ್ನೆಲ್ಲಾ ರಂಗಪ್ಪನಾಯಕನಿಗೆ ಒಪ್ಪಿಸಬೇಕು. ಕೊನೆಗೆ ಜುಂಜಪ್ಪನೇ ಗೆಲ್ಲುವ ಮೂಲಕ ಸಿರಾ ಪಾಳೇಗಾರಿಕೆಯನ್ನು ಪಡೆಯುತ್ತಾನೆ. ಇಲ್ಲಿ ಕಾಡುಗೊಲ್ಲ, ಬೇಡ ಜನಾಂಗಗಳ ನಡುವೆ ಸ್ವತ್ತುಗಳ ವಶಪಡಿಸಿಕೊಳ್ಳಲು ನಡೆಯುತ್ತಿದ್ದ ಹೋರಾಟವನ್ನು ಹಾಗೂ ಕುಲದ ಆಸ್ತಿಯನ್ನು ಜೂಜಿನ ಪಣಕ್ಕಿಡುವ ಬುಡಕಟ್ಟು ಜನಾಂಗದ ಗುಣವನ್ನು ಕಾಣಬಹುದು.

ಮಧ್ಯಕರ್ನಾಟಕದ ಪಶುಪಾಲನೆಯನ್ನು ಕುರಿತ ಈ ಎತ್ತಪ್ಪ-ಜುಂಜಪ್ಪ-ಚಿತ್ರದೇವರ ಕಾವ್ಯಗಳು ಬೇಟೆ ಸಂಸ್ಕೃತಿಯನ್ನು ಪ್ರತಿನಿಧಿಸುವ ಮತ್ತೊಂದು ಬುಡಕಟ್ಟಾದ ಮ್ಯಾಸ ಬೇಡರಿಗೂ, ಪಶುಪಾಲನಾ ಸಂಸ್ಕೃತಿಯನ್ನು ಪ್ರತಿನಿಧಿಸುವ ಕಾಡುಗೊಲ್ಲರಿಗೂ ನಡೆದ ಮುಖಾಮುಖಿ ಹೋರಾಟದ ಕಥೆಗಳೇ ಆಗಿವೆ. ಇವು ಸಹಜವಾಗಿ ಮುಗ್ಧರೂ, ಸೌಮ್ಯರೂ ಆದ ಕಾಡುಗೊಲ್ಲರ ಮೇಲೆ ಮ್ಯಾಸಬೇಡರು ನಡೆಸಿದ ಹಲ್ಲೆಯ ಕಥೆಗಳೇ ಆಗಿದ್ದು ಎರಡೂ ಬುಡಕಟ್ಟುಗಳ ಸಂಸ್ಕೃತಿಯನ್ನು ಅನಾವರಣಗಳಿಸುವ ಸಂಸ್ಕೃತಿಗಳ ಮುಖಾಮುಖಿಯೂ ಆಗಿದೆ. ಈ ಹಿನ್ನೆಲೆಯಲ್ಲಿ ಈ ಇಬ್ಬರ ಕಾವ್ಯಗಳು ಕಾಡುಗೊಲ್ಲರ ಸಂಸ್ಕೃತಿಯ ಎರಡು ಕಣ್ಣುಗಳಾಗಿವೆ.

ಈ ಕಾವ್ಯಗಳು ಎರಡು ವಿಶಿಷ್ಟ ಸಂಪ್ರದಾಯಗಳ ಹುಟ್ಟಿಗೆ ಕಾರಣವಾಗಿರುವುದಲ್ಲದೆ ಕಥೆ, ಗಣೆಕಥೆ, ಹೆಂಗಳೆಯರ ಸೋಬ್ಲಾನೆ ದಾಟಿಯ ತ್ರಿಪದಿಕಥೆ, ಗದ್ಯಕಥೆ ಹೀಗೆ ಹಲವಾರು ಪ್ರಕಾರಗಳಲ್ಲಿ ಸೃಜನಾತ್ಮಕವಾಗಿ ಮೈದಳೆದಿದೆ. ಜನಪದ ಪ್ರತಿಭೆಗೆ ನಿರಂತರ ಸೃಷ್ಟಿಯ ಸವಾಲನ್ನು ಎಸೆದಿದೆ. ಈ ಕಾವ್ಯಗಳು ಪಶುಸಂಪತ್ತು ವಿರಳವಾಗಿರುವ ಇಂದಿನ ಕಾಲಕ್ಕೆ ಗತಿಸಿಹೋದ ಪಶುಪಾಲಕ ಸಂಸ್ಕೃತಿಯ ಚಿತ್ರವೊಂದನ್ನು ಕೊಡುವ ಮೂಲಕ ಗೊಲ್ಲ ಜನಾಂಗದ ಭೂತಕಾಲದ ಸಾಂಸ್ಕೃತಿಕ ರಾಯಭಾರಿಯೂ ಆಗಿವೆ. ಕಳೆದ ಶತಮಾನದ ಪಶುಪಾಲನ ಸಂಸ್ಕೃತಿಯೊಂದರ ಚಿತ್ರಣ ತನ್ನೆಲ್ಲಾ ಮಗ್ಗುಲುಗಳೊಂದಿಗೆ ಇಲ್ಲಿ ಮೈತಳೆದಿದೆ. ಗೊಲ್ಲ ಜನಾಂಗದ ಇಂದಿನ ಸಾಂಸ್ಕೃತಿಕ ನಡಾವಳಿಗಳಿಗೆ ಅಸ್ತಿಭಾರ ಹಾಕಿದವನೇ ಈ ಜನಾಂಗದ ಪ್ರಥಮ ಸಾಂಸ್ಕೃತಿಕ ವೀರನಾದ ಎತ್ತಪ್ಪ. ಈ ಜನಾಂಗದ ಕರೆ-ಕಡೆಗಳನ್ನು ವಿಂಗಡಿಸಿ ಒಂದು ದುಡ್ಡಿನಿಂದ ಇಪ್ಪತ್ತು ದುಡ್ಡಿನವರೆಗೂ ತಪ್ಪು ತೆಗೆದು ಗೊಲ್ಲ ಜನಾಂಗದ ಸಾಂಸ್ಕೃತಿಕ ಸಂವಿಧಾನವನ್ನು ರೂಪಿಸಿದವನು. ಅತ್ಯಂತ ಸಜ್ಜನ, ಸರಳ ವ್ಯಕ್ತಿತ್ವದ ಎತ್ತಪ್ಪ ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಯಂತೆ ಚಿತ್ರಿತನಾಗಿದ್ದಾನೆ. ಅವನು ಬೆನವ-ಎತ್ತಯ್ಯನಾಗೇ ಉಳಿದಿದ್ದಾನೆ. ಕಟ್ಟಿಕೊಂಡ ಹೆಂಡತಿಯನ್ನು ಕಣ್ಣೆತ್ತಿಯೂ ನೋಡದ ಎತ್ತಯ್ಯ ಗುಡ್ನದ ಬೋರಿ ಎಂಬ ಮ್ಯಾಸ ಬೇತರ ಹೆಣ್ಣಿನ ಕಾಮಾಂಧತೆಗೆ ಸವಾಲಾಗುವುದರ ಮೂಲಕ ಸತ್ಯ-ಶೌರ್ಯಗಳಿಗೆ ಮತ್ತೊಂದು ಹೆಸರಾಗುತ್ತಾನೆ. ಮ್ಯಾಸರೊಂದಿಗೆ ನಡೆಯುವ ಕಾಳಗ, ಲೆತ್ತ, ಪಗಡೆಯ ಜೂಜು, ಚಿಕ್ಕರೆಂಬೆ ಎಂಬ ಗಬ್ಬದ ಹಸು ಬೇವಿನ ಮರ ಹಾರುವ ಪ್ರಸಂಗದಲ್ಲಿ ಗೆಲ್ಲುವ ಮೂಲಕ ಮ್ಯಾಸಬೇಡರ ದ್ವೇಷ ಗರಿಗೆದರಿ ಗುಡ್ನದ ಬೋರಿಯ ಚಿತಾವಣೆಯಿಂದ ಎತ್ತಪ್ಪ ಹತನಾಗುತ್ತಾನೆ. ಇದು ಎತ್ತಪ್ಪ ಮ್ಯಾಸರೊಂದಿಗೆ ನಡೆಸಿದ ದುರಂತ ಕದನದ ಕಥೆಯನ್ನು ಹೇಳುವುದರೊಂದಿಗೆ ಪಶುಪಾಲಕ ಸಂಸ್ಕೃತಿಯ ಏಳು-ಬೀಳುಗಳನ್ನು ಚಿತ್ರಿಸುತ್ತಲೇ ಗೊಲ್ಲ ಜನಾಂಗದ ಸಂಸ್ಕೃತಿ ನಡೆದುಬಂದ ಚರಿತ್ರೆಯೂ ಆಗಿಬಿಡುತ್ತದೆ.

ಎತ್ತಪ್ಪನ ಪಶುಪಾಲಕ ಪರಂಪರೆಯನ್ನು ಅತ್ಯಂತ ಅರ್ಥಪೂರ್ಣವಾಗಿ ಸಾಹಸ, ಪವಾಡಗಳ ಮೂಲಕ ಮುಂದುವರೆಸಿದ ಕಥೆಯೇ ಜುಂಜಪ್ಪನ ಕಥೆ. ಎತ್ತಪ್ಪನ ಕಥೆಯ ವಿಸ್ತಾರಕ್ಕಿಂತಲೂ

ಬಿಡು-ಬೀಸಾದ ಈ ಕಥನವಂತೂ ಅನ್ಯಾಯ-ದೌರ್ಜನ್ಯಗಳನ್ನು ಸೋದರ ಮಾವಂದಿರ ದಬ್ಬಾಳಿಕೆಯನ್ನು ಮೆಟ್ಟಿನಿಂತ ಬಾಲಕನೊಬ್ಬನ ಸಾಹಸಗಾಥೆಯೇ ಆಗಿದೆ. ಹುಟ್ಟಿನಿಂದ ಕೊನೆಯವರೆಗೂ ಜುಂಜಪ್ಪ ತನ್ನ ಅಸಾಧಾರಣ ಅಲೌಕಿಕ ವ್ಯಕ್ತಿತ್ವದ ಮೂಲಕ ಕಾವ್ಯವನ್ನು ಹೆಜ್ಜೆ-ಹೆಜ್ಜೆಗೂ ರೋಮಾಂಚಕತೆಯಿಂದ ತುಂಬಿದ್ದಾನೆ. ಎತ್ತಪ್ಪನ ಕಥೆಗೆ ಸ್ತ್ರೀಮೂಲ ದ್ವೇಷ ಕಾರಣವಾದರೆ ಜುಂಜಪ್ಪನ ಕಥೆಗೆ ಸೋದರ ಮಾವಂದಿರ ದ್ವೇಷ-ಅಸೂಯೆಗಳೇ ಕಾರಣವಾಗಿದ್ದು 'ಕರುವಿನಿಂದ ಕದನ' ಎಂಬಂತೆ ಬಡಮ್ಮೆಲನೆಂಬ ಎತ್ತಿನ ಕರುವಿನಿಂದ ಪ್ರಜ್ವಲಿಸಿ ಉರಿದು ಯಾದವೀ ಕಲಹವಾಗಿ ಸರ್ವನಾಶದಲ್ಲಿ ಅಂತ್ಯವಾಗುತ್ತದೆ. ಎಲ್ಲಿ ಹುಲ್ಲು-ನೀರಿದೆಯೋ ಅದೇ ನಮ್ಮ ಮನೆಮಾರು ಎಂಬ ಗೋಪಾಲಕ ಸಂಸ್ಕೃತಿಯ ಸಿದ್ಧಾಂತವನ್ನು ಈ ಕಾವ್ಯಗಳು ಅತ್ಯಂತ ಅರ್ಥಪೂರ್ಣವಾಗಿ ಅನಾವರಣಗೊಳಿಸುತ್ತವೆ. ಇವು ಕಾಡುಗೊಲ್ಲ ಮ್ಯಾಸ ಬೇಡರ ಮುಖಾಮುಖಿಯ ಇತಿಹಾಸದ ಕಾಲದ ತಲ್ಲಣಗಳ ಸೂಕ್ಷ್ಮವನ್ನೂ ಹುದುಗಿಸಿಕೊಂಡಿವೆ.

ಎತ್ತಪ್ಪನ ಕಾಲದ ಸಾಂಸ್ಕೃತಿಕ ಆಚರಣೆಗಳಿಗೆ ಒಂದು ಅಧಿಕೃತತೆಯನ್ನು ತಂದು ಕೊಟ್ಟಿದ್ದಲ್ಲದೆ, ಅವನ್ನು ಸಮರ್ಥವಾಗಿ ಮುಂದ್ದುವರೆಸುವುದರ ಮೂಲಕ ಜನಾಂಗದ ಅತ್ಯಂತ ಜನಪ್ರೀಯ ಸಾಂಸ್ಕೃತಿಕ ವೀರನೂ ಆದ ಜುಂಜಪ್ಪನ ಕಥೆ ಅಘಟಿತ-ಘಟಿತಾ ಘಟನಾವಳಿಗಳಿಂದ ಕೂಡಿದೆ. ಜುಂಜಪ್ಪನ ಕಥೆ. ತಾತ ದೈಮಾರ, ತಂದೆ ಕೆಂಪಿಲಿ ಮಲಿನಗೊಂಡರ ಹಿಂದಿನ ತಲೆಮಾರಿನ ಕಥೆಯೊಂದಿಗೆ ಜುಂಜಪ್ಪನ ಕಥೆ ಜುಂಜಪ್ಪನ ಮರಣಾನಂತರದ ಕಥೆಯೂ ಸೇರಿಕೊಂಡು ಆಯಾ ತಲೆಮಾರಿನ ಜನಪದ ಚರಿತ್ರೆಯ, ಸಂಸ್ಕೃತಿಯ ನಿರ್ವಚನದ ಕಥೆಯೂ ಆಗುವುದರ ಮೂಲಕ ವಿಶಿಷ್ಟವಾಗಿದೆ.

ಎತ್ತಪ್ಪ ಹಾಲು-ಹಯನಿನ ದೇವತೆಯಾದರೆ ಜುಂಜಪ್ಪ ವಿಷಾಹಾರಿ ದೇವತೆಯಾಗಿ ಹೆಸರಾಗಿದ್ದಾನೆ. ಎತ್ತಪ್ಪನ ಕಾವ್ಯಕ್ಕಿಂತಲೂ ಎಲ್ಲಾ ರೀತಿಯಿಂದಲೂ ಬೃಹತ್-ಮಹತ್ ಆದುದು ಜುಂಜಪ್ಪನ ಕಾವ್ಯ. ಇದು ದಕ್ಷಿಣ ಕರ್ನಾಟಕದ ಮಾದೇಶ್ವರನ ಕಾವ್ಯವನ್ನು ನೆನಪಿಗೆ ತರುತ್ತದೆ. ಎತ್ತಪ್ಪನ ಸಂಪ್ರದಾಯ ಪ್ರಚಾರದಲ್ಲಿದ್ದರೂ ವಿಶೇಶವಾಗಿ ತುಮಕೂರು ಜಿಲ್ಲೆಯಲ್ಲಿ ಇದರ ಪ್ರಭಾವ ಹೆಚ್ಚು. ಗಣೆ ಸಂಪ್ರದಾಯವಂತೂ ಜುಂಜಪ್ಪನ ಗಣೆ ಎಂದೇ ಖ್ಯಾತವಾಗಿದೆ. ಇದಲ್ಲದೆ ಜುಂಜಪ್ಪನ ಹೆಸರಿನಲ್ಲಿ ಬಸವನನ್ನು ಬಿಡುವ ಸಂಪ್ರದಾಯವೂ ಇದೆ. ಹೀಗೆ ಗಣೆಕಥೆ ಮತ್ತು ಬಸವ ಸಂಪ್ರದಾಯಗಳಿಗೆ ಮೂಲ ಪ್ರೇರಣೆಯನ್ನು ಒದಗಿಸಿರುವುದೇ ಜುಂಜಪ್ಪನ ಸಂಪ್ರದಾಯ. ಕಾಡುಗೊಲ್ಲರ ಸಂಸ್ಕೃತಿ ನಡೆದುಬಂದ ಹಾದಿಯನ್ನು ಚಿತ್ರಿಸುವ ಸಾಂಸ್ಕೃತಿಕ ಚರಿತ್ರೆಯೂ ಆಗುವುದರೊಂದಿಗೆ ಈ ಕಾವ್ಯವೂ ಈ ಜನಾಂಗದ ಸಾಂಸ್ಕೃತಿಕ ಏಳು-ಬೀಳಿನ ದಾಖಲೆಯೂ ಆಗಿಬಿಡುತ್ತದೆ.

ಸುಮಾರು ಕ್ರಿ.ಶ ೧೪ನೆ ಶತಮಾನದಲ್ಲಿ ಕುಂಚಟಿಗರು, ಮ್ಯಾಸಬೇಡರಂತೆ ಬಹುಶಃ ತುಂಗಭದ್ರಾನದಿಯನ್ನು ದಾಟಿ ದಕ್ಷಿಣ ಪ್ರಾಂತ್ಯಕ್ಕೆ ಬಂದ ಗೊಲ್ಲರನ್ನು ಒಂದು ಏಕಸೂತ್ರದಲ್ಲಿ

ಹಿಡಿಯಲಾಗಲಿ ನಿಯಂತ್ರಿಸಲಾಗಲಿ ಎತ್ತಪ್ಪನ ಕಾಲದವರೆಗೂ ಸಾಧ್ಯವಾಗಿರಲಿಲ್ಲ. ಜನಾಂಗ ಎಲ್ಲೆಂದರಲ್ಲಿ ಚೆಲ್ಲುವರೆದು ತನಗೆ ಬೇಕಾದ ರೀತಿಯಲ್ಲಿ ಬದುಕುತ್ತಿದ್ದುದನ್ನು ಜನಾಂಗೀಯ ಚೌಕಟ್ಟಿನೊಳಕ್ಕೆ ಅಳವಡಿಸುವ ಪ್ರಯತ್ನ ಮಾಡಿದವನೇ ಎತ್ತಪ್ಪ. ಅದಕ್ಕೆ ಅವನು ಜನಾಂಗದ ಕರೇಕಡೆಯನ್ನು ವಿಂಗಡಿಸಿದನು. ಒಂದು ದುಡ್ಡಿನಿಂದ ಹಿಡಿದು ಇಪ್ಪತ್ತು ದುಡ್ಡಿನವರೆಗೂ ತಪ್ಪುತೆಗೆದನು ಎನ್ನುವುದು. ಊರಿನಿಂದ ದೂರ ಹಟ್ಟಿಗಳಲ್ಲಿ ವಾಸಿಸುವಂತೆ, ಪಾವಿತ್ರ್ಯ ರಕ್ಷಣೆಗೋಸ್ಕರ ಕಳ್ಳೆಬೇಲಿಯ ಕಟ್ಟನ್ನು ವಿಧಿಸಿದವನೂ ಎತ್ತಯ್ಯ. ಹಂದಿ, ಕೋಳಿ ತಿನ್ನದಂತೆ, ಹಟ್ಟಿಯೊಳಕ್ಕೆ ಸೇರಿಸದಂತೆ ನೋಡಿಕೊಳ್ಳಬೇಕೆಂದು ಅಪ್ಪಣೆ ಕೊಟ್ಟವನೇ ಎತ್ತಯ್ಯ, ಸತ್ತರೂ-ಹೆತ್ತರೂ ಗುಡಿಯ ಬಾಗಿಲಿಗೆ ಕಳ್ಳೆ ಕಟ್ಟುವ ಸಂಪ್ರದಾಯವನ್ನು ತಂದವನು. ರಜೋಗುಣಾದಿ ಸೂತಕದ ನಿಯಮಗಳನ್ನು ರೂಪಿಸಿದವನು, ಮಾಸಿಕ ಸೂತಕ ಜೆನಿಗೆ ಸಂಪ್ರದಾಯಗಳನ್ನು ಹುಟ್ಟುಹಾಕಿದವನೂ ಇವನೇ ಹೀಗಾಗಿ ಇವನು ಜನಾಂಗಕ್ಕೆ ವಿಧಿಸಿದ ನಡವಳಿಕೆಗಳನ್ನು 'ಎತ್ತಪ್ಪನ ಕಟ್ಟು' ಎನ್ನುತ್ತಾರೆ.[೨೦]

ಶಿವನಿಂದ ವರ ಪಡೆದು ಅವನು ಕೊಟ್ಟ ಗೊಂಬೆಗಳನ್ನು 'ಅರಳಬತ್ತಿ' ರೂಪದಲ್ಲಿ ತಂದು ಚಿನ್ನಮ್ಮನಿಗೆ ಕೊಟ್ಟು-ದೇವರ ಬಟ್ಟಣ್ಣ ಎಂಬ ಓರಿಯ ಬಾಯಿಗೆ ಕೊಟ್ಟು, ಅದು ಹಾಕುವ ಸಗಣಿ ತೆಪ್ಪೆಯನ್ನು ಮಡಿಲೊಡ್ಡಿ ಹಿಡಿದು ತಂದು, ಆ ಸಗಣಿಯ ಗೊಬ್ಬರದಿಂದ ಬೆಳೆದ ಕಿರುಕುಸಾಲೆ ಸೊಪ್ಪನ್ನು ಕೊಯ್ದು ತಿಂದಾಗ ಮಕ್ಕಳಾಗುತ್ತವೆ ಎಂದು ವರ್ಣಿಸುವ ರೀತಿ ನಮ್ಮ ವ್ಯವಸಾಯ ಸಂಸ್ಕೃತಿಯ ಹೊಳಹುಗಳನ್ನು ಹುದುಗಿಸಿಕೊಂಡಿರುವುದನ್ನು ಕಾಣಬಹುದು.

ಮಾತನಾಡುವ ಅಲೌಕಿಕ ಶಿಶುವಾಗಿ ಜನಿಸುವ ಜುಂಜಪ್ಪ ತಾಯಿಯನ್ನು ಹಿರಿಯಟ್ಟಿಗೆ ಜನಿಗೆಗೆ ಕರೆದುಕೊಂಡು ಹೋಗುವ ಸನ್ನಿವೇಶ ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳಿಗೆ ಕೈಗನ್ನಡಿಯಾಗಿದೆ, ಹಟ್ಟಿಯಿಂದ ಹೊರಗಿದ್ದ ಸೂತಕ ನೀಗುವ ನಡಾವಳಿಗಳನ್ನೆಲ್ಲಾ ಗಮನಿಸಿದರೆ ಜುಂಜಪ್ಪನ ಕಾವ್ಯ ಕಾಡುಗೊಲ್ಲರ ಜೀವನದ ಆಚಾರ-ವಿಚಾರಗಳ ವಿಶ್ವಕೋಶದಂತಿರುವುದನ್ನು ಗಮನಿಸಬಹುದು.

ಹುಲ್ಲು ನೀರಿಗೋಸ್ಕರ ಬವಣೆ ಪಡುತ್ತಾ, ಕಾವಲಿನಿಂದ ಕಾವಲಿಗೆ ಅಲೆಯುತ್ತಾ, ದ್ವೇಷ, ಅಸೂಯೆಗಳ ಜಂಜಾಟದಲ್ಲಿ ತೊಳಲುತ್ತಾ ವಿರೋಧಿಗಳ ಹುಟ್ಟಡಗಿಸುತ್ತಾ, ಹೆಜ್ಜೆ,ಹೆಜ್ಜೆಗೂ ಗೊಲ್ಲ ಜನಾಂಗದ ದಟ್ಟ ಸಾಂಸ್ಕೃತಿಕ ಚಿತ್ರ ನೀಡುವುದರೊಂದಿಗೆ ಜನಾಂಗದ ಸಂಪ್ರದಾಯ, ನಂಬಿಕೆ, ಆದರ್ಶಗಳಿಗೆ ಸಂಬಂಧಿಸಿದ ಯಾವುದೇ ವಿವರಗಳನ್ನು ನೀಡುತ್ತಾ ಕಾವ್ಯ ಕಾಡುಗೊಲ್ಲರ ನಿಘಂಟಿನ ರೂಪ ತಳೆಯುತ್ತದೆ. ಒಂದು ಜನಾಂಗದ ದಟ್ಟ ಧಾರ್ಮಿಕ ಹಿನ್ನೆಲೆಯನ್ನು ಒದಗಿಸುತ್ತಾ ಮೂರು ತಲೆಮಾರುಗಳ ಏಳು-ಬೀಳಿನ ಚಿತ್ರಣ ಕೊಡುವುದರೊಂದಿಗೆ ಒಂದು ಜನಾಂಗದ ಇತಿಹಾಸವೂ ಆಗಿಬಿಡುತ್ತದೆ.

ಮಾಗೋಡು ರಂಗನಾಥನ ಕಥೆ ಸಾವಿರಾರು ಜನ ಸೇರುವ ಇಂದಿನ ಮಾಗೋಡು ಜಾತ್ರೆ ಚರಿತ್ರೆಯನ್ನು ಹೇಳುತ್ತದೆ.[೫೦] (ದೇವಸ್ಥಾನ ಸ್ಥಾಪನೆಯಾದ ಬಗೆ ಹಾಗೂ ಬೆಳೆದುಬಂದುದ್ದರ ಬಗ್ಗೆ ವಿವರಣೆ ಇದೆ.) ವಕ್ಕಲ ಮಕ್ಕಳಿಂದ ಪ್ರಾರಂಭವಾದ ದೇವಸ್ಥಾನ ಇಂದು ಗೊಲ್ಲ ಗೌಡರ ನೇತೃತ್ವದಲ್ಲಿ ಯಾವುದೇ ಜಾತಿ-ಬೇಧವಿಲ್ಲದೆ ಸಾವಿರಾರು ಜನ ಸೇರುವ ಜಾತ್ರೆಯಾಗಿ ಚರಿತ್ರಾರ್ಹ ಧಾರ್ಮಿಕ ತಾಣವಾಗಿದೆ. ಕುಂಚಿಟಿಗ, ಗೊಲ್ಲ, ಕುರುಬ, ಮ್ಯಾಸಬೆಡ ಜನಾಂಗಗಳು ಮೂಲತಃ ಒಂದೇ ಮೂಲದವುಗಳು ಎಂದು ಈ ಭಾಗದ ಜಾನಪದ ಕಾವ್ಯಗಳು, ಜನಾಂಗೀಯ ಇತಿಹಾಸದ ಕಥೆ-ಐತಿಹ್ಯಗಳು ಹೇಳುತ್ತವೆ. ಉತ್ತರ ಭಾರತದಿಂದ ದಕ್ಷಿಣದ ಕಡೆ ಬಂದ ಈ ಜನಾಂಗ ಮೂರು-ನಾಲ್ಕು ಪಂಗಡಗಳಾಗಿ ಒಡೆದು ಪ್ರತ್ಯೇಕ ವೃತ್ತಿ, ಸಂಪ್ರದಾಯ, ಊಟೋಪಚಾರ, ರೀತಿ-ನೀತಿಗಳನ್ನು ರೂಢಿಸಿಕೊಳ್ಳುತ್ತಾ ತಮ್ಮ ತಮ್ಮ ಸಾಂಸ್ಕೃತಿಕ ಕಟ್ಟು ಕಟ್ಟಲೆಗಳನ್ನು ರೂಪಿಸಿಕೊಂಡವು. ಈ ಕಟ್ಟು ಕಟ್ಟಲೆಗಳನ್ನು ರೂಪಿಸಿದವರೇ ಈ ಪಂಗಡಗಳ ಸಾಂಸ್ಕೃತಿಕ ವೀರರು. ಕಾಡುಗೊಲ್ಲ ಜನಾಂಗದಲ್ಲಿ ಚಿತ್ರದೇವರು, ಎತ್ತಪ್ಪ ಜುಂಜಪ್ಪ ಮೊದಲಾದವರು ಹುಟ್ಟಿಕೊಂಡರೆ, ಮ್ಯಾಸಬೇಡರಲ್ಲಿ ಪಾಳೇಗಾರರಾದ ಗಾದ್ರಿಪಾಲನಾಯ್ಕ, ಯರಮಂಚಿ ನಾಯಕ, ನಾಯಕನ ಹಟ್ಟಿ ತಿಪ್ಪೇಸ್ವಾಮಿ ಮೊದಲಾದವರು, ಕುರುಬ ಜನಾಂಗದಲ್ಲಿ ರೇವಣ್ಣಸಿದ್ದೇಶ್ವರ, ಬೀರಲಿಂಗ ಮೊದಲಾಗಿ, ಕುಂಚಿಟಿಗ ಜನಾಂಗದಲ್ಲಿ ಬೊಪ್ಪರಾಯ, ವೀರನಾಗಮ್ಮ, ವೀರಖ್ಯಾತರಾಯ, ಉಂಡೆ ಎತ್ತರಾಯ ಮೊದಲಾದವರು ಜನಾಂಗೀಯ ಸಾಂಸ್ಕೃತಿಕ ಪ್ರತಿನಿಧಿಗಾಳಾದರು. ಕುರುಬ, ಗೊಲ್ಲ, ಮ್ಯಾಸಬೇಡರ ಪಂಗಡಗಳು ತಮ್ಮ ಶೈವ ಮೂಲವನ್ನೇ ಮುಂದುವರೆಸಿದರೆ (ತಮ್ಮ ಜನಾಂಗದ ಸಾಂಸ್ಕೃತಿಕ ನಾಯಕರು ಶಿವನ ಅವತಾರ ಇಲ್ಲವೆ ಶಿವನ ಅಂಶದಿಂದ ಜನ್ಮ ತಳೆದರೆಂಬ ಕಲ್ಪನೆ) ಕುಂಚಿಟಿಗ ಜನಾಂಗದ ನಾಯಕರು ತಮ್ಮ ಶೈವ ಮೂಲದಿಂದ ವಿಷ್ಣು ಮೂಲದ ರಂಗನಾಥ ದೇವರ ಆರಾಧನೆಯನ್ನು ರೂಢಿಸಿಕೊಂಡರು. ಇದಕ್ಕೆ ರಾಮಾನುಜಚಾರ್ಯರು ಕರ್ನಾಟಕದಲ್ಲಿ ನಡೆಸಿದ ಶ್ರೀವೈಷ್ಣವ ಮತ ಪ್ರಚಾರದ ಪ್ರಭಾವವೂ ಇರಬಹುದು. ಇದಕ್ಕೆ ಆಧಾರವೆಂಬಂತೆ ರಾಮಾನುಜ ಪ್ರತಿಮೆಗಳು ಸೀಬಿ ಹಾಗೂ ಬುಕ್ಕಾಪಟ್ಟಣದ ರಂಗನಾಥನ ದೇವಾಲಯಗಳಲ್ಲಿವೆ. ಈ ರಂಗನಾಥ ಆಯಾ ಪ್ರಾದೇಶಿಕ ಹೆಸರುಗಳಿಂದ ಭಿನ್ನ ಭಿನ್ನ ಪವಾಡಗಳ ರೂಪದಲ್ಲಿ ಕಾಣಿಸಿಕೊಂಡ. ಮಾಗೋಡುರಂಗ, ಮರಡಿಗುಡ್ಡದರಂಗ, ತಾವರೇಕೆರೆರಂಗ, ಕಂಬದರಂಗ, ಕಣಿವೆರಂಗ ಇತ್ಯಾದಿಯಾಗಿ ಮಾಗೋಡುರಂಗನ ಹೆಸರಿನಲ್ಲಿ ಒಂದು ಜಾನಪದ ಕಾವ್ಯವೂ ಪ್ರಕಟಗೊಂಡಿದೆ. ಹೀಗೆ ಸಿರಾ ಸೀಮೆಯಲ್ಲಿರುವ ವಿವಿಧ ಜನಾಂಗಗಳ ಜನಾಂಗೀಯ ಇತಿಹಾಸದ ಚಾರಿತ್ರಿಕಾಂಶಗಳು ಶಿರಾಸೀಮೆಯ ಸಾಂಸ್ಕೃತಿಕ ವೀರರ ಅಧ್ಯಯನದಿಂದ ಅನಾವರಣಗೊಳ್ಳುತ್ತವೆ.

ಪಟ್ಟನಾಯಕನಹಳ್ಳಿ ಗುರುಗುಂಡ ಬ್ರಹ್ಮೇಶ್ವರರು ಈ ಸಿರಾ ಸೀಮೆಯ ಸಾಂಸ್ಕೃತಿಕ ನಾಯಕರಲ್ಲೊಬ್ಬರು. ಸಾಮಾಜಿಕ ಸೇವೆಗಾಗಿ ಮಠ ಸ್ಥಾಪಿಸಿ ಅನ್ನ-ವಿದ್ಯಾ ದಾಸೋಹ ನಡೆಸಿಕೊಂಡು

ಬರುತ್ತಾ ಇಂದು ಸಾವಿರಾರು ಭಕ್ತಾದಿಗಳನ್ನು ಪಡೆದು ಭಕ್ತಿ ಧರ್ಮದ ಧಾರ್ಮಿಕ ಸ್ಥಳವಾದ ಈ ಮಠದ ಚರಿತ್ರೆಯನ್ನು ಗುರುಗುಂಡ ಬ್ರಹ್ಮೇಶ್ವರರ ಅಧ್ಯಯನದೊಂದಿಗೆ ತಿಳಿಯಬಹುದು. ಮೂರು ಶತಮಾನಗಳ ಪ್ರಾಚೀನತೆಯನ್ನು ಪಡೆದು ಕರ್ನಾಟಕ ಮಾತ್ರವಲ್ಲದೆ ನೆರೆಯ ಆಂಧ್ರ, ತಮಿಳುನಾಡಿನಲ್ಲಿಯೂ ಭಕ್ತಾದಿಗಳನ್ನು ಹೊಂದಿರುವ ಈ ಕ್ಷೇತ್ರ ೧೭ನೇ ಶತಮಾನದ ಕೊನೆಯ ಭಾಗದಲ್ಲಿ ಮೈಸೂರು ಒಡೆಯರ ಆಶೀರ್ವಾದ, ವಿಜಯನಗರದ ಅರಸರ ಒಪ್ಪಿಗೆಯೊಡನೆ ಹೊಸಕೋಟೆಯ ತಿಮ್ಮಾರ್ಯ ಉಪದೇಶ ಹಾಗೂ ನೀಲಗಿರಿಸ್ವಾಮಿಗಳ ಆಶೀರ್ವಾದದಿಂದ, ಕೈವಾರ ನಾರಾಯಣಪ್ಪ ಶಿಷ್ಯ ಪೂವಯ್ಯನೊಡಗೂಡಿ ಮಠ ಸ್ಥಾಪಿಸಿದರು ಗುರುಗುಂಡ ಬ್ರಹ್ಮೇಶ್ವರರು ಭಿಕ್ಷಾಟನೆಯ ಮೂಲಕ ಭಕ್ತಾದಿಗಳನ್ನು ಹೆಚ್ಚಿಸುತ್ತಾ ಇಂದಿನ ಬೃಹತ್ ಮಠಕ್ಕೆ ಕಾರಣ ಪುರುಷರಾದ ಚರಿತ್ರಾರ್ಹ ಅಂಶಗಳು ತಿಳಿದುಬರುತ್ತವೆ.[೨೨] ಶ್ರೀ ಮಠದ ಪರಂಪರೆ ಶ್ರೀ ಗುರುಗುಂಡ ಬ್ರಹ್ಮೇಶ್ವರರ ನಂತರ ಐದು ತಲೆಮಾರು ಕಳೆದು ಏಳನೇ ತಲೆಮಾರಿನವರಾಗಿ ಶ್ರೀ ನಂಜಾವಧೂತರು ಪಟ್ಟಾಭಿಷಕ್ತರಾಗಿದ್ದಾರೆ.

**ಅಡಿಟಿಪ್ಪಣಿ**

೧. ಹರತಿಯಸಿರಿ, ಪ್ರೋ. ಲಕ್ಷಣ ತೆಲಗಾವಿ, ಪುಟ ೯೭೪

೨. ಅನುಬಂಧದಲ್ಲಿ ನೋಡಿ

೩. ಹರತಿಯಸಿರಿ, ಪ್ರೋ. ಲಕ್ಷ್ಮಣ ತೆಲಗಾವಿ, ಪುಟ ೯೭೪-೯೭೬

೪. ಅದೇ...

೫. ಅದೇ...

೬. ಗಮ್ಮನಹಳ್ಳಿ ಕದನ. ಹೆ.ವಿ. ವೀರನಾಯಕ, ಪುಟ ೧

೭. ಅದೇ... ಪುಟ ೭

೮. ವೀರಮಹೇಶ್ವರಿ ಅಮ್ಮಾಜಿಯವರ ಚರಿತ್ರೆ, ಎಂ.ವೀರಪ್ಪ.

೯. ದುರುಗಜಾನಪದ, ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಪುಟ ೭೭

೧೦. ಎತ್ತಪ್ಪ, ಡಾ.ಮೀರಾಸಾಬಿಹಳ್ಳಿ ಶಿವಣ್ಣ.

೧೧. ಅದೇ.... ಪುಟ ೨೫

೧೨. ಅದೇ.... ಪುಟ ೬೨

೧೩. ಕುಂಚಿಟಿಗ ಜನಾಂಗದ ಸಾಂಸ್ಕೃತಿಕ ಇತಿಹಾಸ, ಎಚ್.ಎಂ.ನಾಗರಾಜ, ಪುಟ ೬೭

೧೪. ಗೊಲ್ಲಕಡಗ, ಮೀರಾಸಾಬಿಹಳ್ಳಿ ಶಿವಣ್ಣ, ಪುಟ ೧೨೦

೧೫. ವಡ್ನಗೆರೆ ವೀರನಾಗಮ್ಮನ ಚರಿತ್ರೆ, ಎನ್.ನಾರಾಯಣರಾವ್, ೧೯೬೮

೧೬. ಗೊಲ್ಲಕಡಗ, ಮೀರಾಸಾಬಿಹಳ್ಳಿ ಶಿವಣ್ಣ, ಪುಟ ೧೨೨

೧೭. ಕುಂಚಿಟಿಗ ಜನಾಂಗದ ಸಾಂಸ್ಕೃತಿಕ ಇತಿಹಾಸ, ಎಚ್.ಎಂ.ನಾಗರಾಜ, ಪುಟ ೮೪

೧೮. ಗೊಲ್ಲಕಡಗ, ಮೀರಾಸಾಬಿಹಳ್ಳಿ ಶಿವಣ್ಣ, ಪುಟ ೮೮

೧೯. ಅದೇ... ಪುಟ ೪೩

೨೦. ಅದೇ... ಪುಟ ೨೨

೨೧. ಮಾಗೋಡು ರಂಗನ ಕಾವ್ಯ, ಡಾ.ಚಿಕ್ಕಣ್ಣಯಣ್ಣೆಕಟ್ಟೆ.

೨೨. ವಕ್ತೃ, ಶ್ರೀ.ನಂಜಾವಧೂತರು, ಪಟ್ಟನಾಯಕನಹಳ್ಳಿ ಮಠದ ಪೀಠಾಧ್ಯಕ್ಷರು.

ಅಧ್ಯಾಯ ೮

# ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಸಾಂಸ್ಕೃತಿಕ ವೀರ-ನಾಯಕರ ಅಸ್ತಿತ್ವ

ಗತಿಸಿದ ವೀರ ವನಿತೆಯರ, ವೀರಗಾರರ ಮಾಸ್ತಿಕಲ್ಲು, ವೀರಗಲ್ಲುಗಳು, ಶಾಸನಗಳು ನೂರಾರು ಕಂಡು ಬರುತ್ತವೆ. ಇವೆಲ್ಲಾ ಒಬ್ಬೊಬ್ಬ ವೀರರ ಬಗೆಗೆ ಒಂದೊಂದು ವೀರತ್ವದ ಕಥೆಯನ್ನು ಹೇಳುವಂತವು. ಇವುಗಳ ಬಗೆಗೆ ಸ್ಥಳೀಯ ಗ್ರಾಮಸ್ತರಲ್ಲಿ ಲೌಕಿಕ ಅಲೌಕಿಕ ಕಥೆಗಳು ಕಟ್ಟಲ್ಪಟ್ಟಿವೆ. ಮತ್ತೆ ಕೆಲವುಗಳ ಬಗೆಗೆ ಮಾಹಿತಿಯೇ ಇಲ್ಲದೆ ವೀರರ ವೀರತ್ವದ ಪಳೆಯುಳಿಕೆಗಳಾಗಿ ನಿಂತಿವೆ. ಇಂತಹ ವೀರಗಲ್ಲು, ಮಾಸ್ತಿಗಲ್ಲುಗಳು ಸಿರಾಸೀಮೆಯ ನಾರಾಯಣಪುರ, ಬರಗೂರು, ಮದಲೂರು, ವೀರಬೊಮ್ಮನಹಳ್ಳಿ, ದ್ವಾರಾಳು, ತಡಕಲೂರು, ನಾದೂರು, ಲಿಂಗದಹಳ್ಳಿ, ಅಲ್ಲೂರು, ಹೇಮಾವತಿ, ದಂಡಿಕೆರೆ ಮೊದಲಾದ ಗ್ರಾಮಗಳಲ್ಲಿ ಹೆಚ್ಚೆಚ್ಚು ಕಂಡು ಬರುತ್ತವೆ. ಇವುಗಳು ಊರಲ್ಲಿ, ಊರಿನ ಹೊರಭಾಗದ ಹೊಲಗಳಲ್ಲಿ ರಸ್ತೆ ಅಂಚಿನಲ್ಲಿ, ಮುರುಕಲು ಮಂಟಪ, ಪೌಳಿಗಳಲ್ಲಿ ನೆಲೆಗೊಂಡಿದ್ದು ದಿನೇ ದಿನೆ ಹಾಳಾಗುತ್ತಿವೆ. ಕೆಲವು ಧಾರ್ಮಿಕ ಭಾವನೆಯಿಂದ ದೈವತ್ವವನ್ನು ಪಡೆದು ಆರಾಧನೆಗೊಳ್ಳುತ್ತಿವೆ. ಆ ವೀರಗಲ್ಲುಗಳ ವೀರರ ಬಗೆಗೆ ಏನೂ ತಿಳಿಯದಿದ್ದರೂ ಅವರಿಗೆ ಗೌರವಿಸುವ ಪೂಜಿಸುವ ಗ್ರಾಮೀಣ ಮುಗ್ದ ಜನ ಅವರ ವೀರ ಮರಣಕ್ಕೆ ತಲೆಬಾಗುತ್ತಾರೆ. ಪ್ರಜ್ಞವಂತರು ಕೆಲವು ಹಳ್ಳಿಗಳಲ್ಲಿ ಇವುಗಳನ್ನು ರಸ್ತೆಪಕ್ಕದಲ್ಲೇ ಶಾಲೆಗಳ ಹತ್ತಿರವೂ ನೆಟ್ಟು ರಕ್ಷಿಸುತ್ತಲೂ ಇದ್ದಾರೆ. ರೈಸ್‌ರವರು ಸಂಪಾದಿಸಿರುವ ಎಫಿಗ್ರಾಫಿಯೂ ಕರ್ನಾಟಕ ೧೨ರಲ್ಲಿನ ಶಾಸನಗಳಲ್ಲಿ ಕೆಲವು ವೀರಗಲ್ಲು ಶಾಸನಗಳಾಗಿವೆ.[೧] ಅವುಗಳೆಂದರೆ ಹೇಮಾವತಿ ಗ್ರಾಮದ ಪೂರ್ವಕ್ಕೆ ಪಂಪಯ್ಯನ ಮಾನ್ಯದ ಹೊಲದಲ್ಲಿ ಇದ್ದ ವೀರಗಲ್ಲು ಶಾಸನ (೨೯), ಮದಲೂರು ಕಲ್ಲೇಶ್ವರ ದೇವಾಲಯದ ಮುಂದೆ ಬಿದ್ದಿರುವ ವೀರಗಲ್ಲು ಶಾಸನ (೪೩) ಅದೇ ದೇವಾಲಯದ ಬಳಿ ನೆಟ್ಟ ಮತ್ತೊಂದು ಶಾಸನ (೪೪), ನಾದೂರಿನ ರಾಮೇಶ್ವರ ದೇವಾಲಯದ ಬಳಿ ಇರುವ ವೀರಗಲ್ಲು ಶಾಸನ (೫೪), ನಾದೂರು ಹೋಬಳಿ ನಾರಾಯಣಪುರಕ್ಕೆ ದಕ್ಷಿಣದಲ್ಲಿ ಕದುರಪ್ಪನ ದೇವಸ್ಥಾನದ ಬಳಿ ಇರುವ ಐದನೇ ವೀರಗಲ್ಲು ಶಾಸನ (೫೫,೫೬,೫೭,೫೮,೫೯)ಗಳು, ನಾದೂರು ಹೋಬಳಿ ಹೊಸೂರು ಗ್ರಾಮದ ಮದ್ದಕ್ಕನಹಳ್ಳಿ ಗಡಿಯಲ್ಲಿ ನೆಟ್ಟ ವೀರಗಲ್ಲು ಶಾಸನ (೬೦) ಸಿರಾ ಮಜರೆ ನರಸಿಂಗರಾಯರ ಪಾಳ್ಯದ ಬಳಿ ಪುಟ್ಟಿ ಬಂಡೆಯ ಮೇಲಿನ ಶಾಸನ (೭೮) ನಾದೂರು ಹೊಬಳಿ ರತ್ನಸಂದ್ರ ಗ್ರಾಮದಲ್ಲಿ

ಚಿಕ್ಕೋಬನ ಹೊಲದ ಬದುವಿನಲ್ಲಿ ಬಿದ್ದಿರುವ ವೀರಗಲ್ಲು ಶಾಸನ (೭೮) ಮೇಲುಕುಂಟೆ ಗ್ರಾಮದ ಭೈರೇದೇವರ ದೇವಾಲಯದ ಬಳಿ ನೆಟ್ಟ ವೀರಗಲ್ಲು ಶಾಸನ (೮೮) ಅಗ್ರಹಾರ ಹೋಬಳಿ ಬೋರಸಂದ್ರ ಗ್ರಾಮಕ್ಕೆ ಉತ್ತರದಲ್ಲಿ ಲಕ್ಕಮ್ಮನ ತೋಪಿಗೆ ಪಶ್ಚಿಮ ಭಾಗದಲ್ಲಿ ನೆಟ್ಟಿರುವ ವೀರಗಲ್ಲು ಶಾಸನ (೯೯) ಹಾಗೂ ಸಿರಾ ೧೨೪ನೇ ಶಾಸನಗಳು ವೀರಗಾರರ ಬಗೆಗೆ ಬೆಳಕನ್ನು ಚಲ್ಲುವ ಶಾಸನಗಳಾಗಿವೆ. ಇವುಗಳಲ್ಲಿ ಕೆಲವು ಇಂದು ಆ ಸ್ಥಳಗಳಲ್ಲಿ ಕಂಡುಬರುವುದೇ ಇಲ್ಲ. ಮತ್ತೆ ಕೆಲವು ಸುಸ್ಥಿತಿಯಲ್ಲಿದ್ದರೆ ಕೆಲವು ಅಕ್ಷರಗಳೇ ಕಾಣದಷ್ಟು ಹಾಳಾಗಿವೆ. ಇವುಗಳನ್ನು ಸಂಗ್ರಹಿಸುವ ಕಾಲಕ್ಕಾಗಲೇ ಎಂದರೆ ಸುಮಾರು ನೂರು ವರ್ಷಗಳ ಹಿಂದೆಯೇ ಇವುಗಳ ಮೇಲಿನ ಅಕ್ಷರಗಳು ಜೀರ್ಣಗೊಂಡಿದ್ದು ಸಂಪೂರ್ಣ ವಿವರಗಳು ತಿಳಿದು ಬರುವುದಿಲ್ಲ. ಈ ವೀರಗಲ್ಲಿನ ವೀರರುಗಳು ಕೆಲವರು ಹೆಣ್ಣಿನ ಮಾನ ರಕ್ಷಣೆಗಾಗಿ ಹೋರಾಡಿ ಮಡಿದವರು. ಉದಾಹರಣೆ: ಮದಲೂರಿನ ಕಲ್ಲೇಶ್ವರ ದೇವಾಲಯದ ಮುಂದೆ ಬಿದ್ದಿರುವ ವೀರಗಲ್ಲು ಶಾಸನ ಕೆಲವರು ಗೋವುಗಳ ರಕ್ಷಣೆಗಾಗಿ ಹೋರಾಡಿ ಮಡಿದವರು ಕೆಲವರು ಕಳ್ಳರೊಂದಿಗೆ ಕೆಲವರು ಯುದ್ಧಗಳಲ್ಲಿ ಕಾದಿ ಮಡಿದವರು. ಇವರ ಪತ್ನಿಯರು ಸತಿಯಾಗುವ ಮೂಲಕ ವೀರ ವನಿತೆಯರಾಗಿ ಉಳಿದುಕೊಂಡಿದ್ದಾರೆ.

ವೀರರ ಹೆಸರಿನ ಹತ್ತಾರು ಗ್ರಾಮಗಳೂ ಉಂಟು. ವೀರರ ಹೆಸರನ್ನಿಡಲು ಕಾರಣವೇನು ಎಂದು ಕೆಲವು ಗ್ರಾಮಗಳಲ್ಲಿ ತಿಳಿದು ಬಂದರೆ ಮತ್ತೆ ಕೆಲವು ಗ್ರಾಮಗಳಲ್ಲಿ ತಿಳಿಯುವುದಿಲ್ಲ. ಆ ವೀರರ ಹೆಸರಿನ ಗ್ರಾಮಗಳೆಂದರೆ,

**ಸಿರಾ ತಾಲ್ಲೂಕಿನಲ್ಲಿರುವ ಗ್ರಾಮಗಳ ವಿವರಗಳು**

| ಹೋಬಳಿಗಳು | ಗ್ರಾಮಗಳು |
|---|---|
| ಕಸಬಾ | ಮುದ್ದರಂಗನಹಳ್ಳಿ, ಬೊಪ್ಪನಡು, ರಂಗನಾಥಪುರ, ರಂಗನಹಳ್ಳಿ ಜುಂಜರಾಮನಹಳ್ಳಿ. |
| ಹುಲಿಕುಂಟೆ | ಚಿಕ್ಕವೀರನಹಳ್ಳಿ, ಬೋಪ್ಪರಾಯನ ಪಾಳ್ಯ, ವೀರನ ಹಳ್ಳಿ, ರಂಗಾಪುರ, ದಿಬ್ಬದ ವೀರಬೋಮ್ಮನಹಳ್ಳಿ. |
| ಗೌಡಗೆರೆ | ಗುಡ್ಡದ ರಂಗನಹಳ್ಳಿ, ರಂಗನಹಳ್ಳಿ, ಕ್ಯಾತೇ ದೇವರಹಟ್ಟಿ |
| ಕಳ್ಳಂಬೆಳ್ಳ | ಮುದ್ದುವೀರನಹಳ್ಳಿ, ರಂಗನಹಳ್ಳಿ. ಕಟಾರಿ ವೀರನಹಳ್ಳಿ ಎತ್ತಪ್ಪನಹಟ್ಟಿ. |

ವೀರರ ಕುಲ ಸಂಬಂಧಿಗಳು ವಾಸಿಸುವ ಗ್ರಾಮಗಳಿಗೆ ಆಯಾ ಕುಲದ, ಜನಾಂಗದ ವೀರರ ಹೆಸರನ್ನು ಇಟ್ಟಿರುತ್ತಾರೆ. ಉದಾಹರಣೆಗೆ ಕಾಡುಗೊಲ್ಲರು ವಾಸಿಸುವ ಹಟ್ಟಿಗಳಿಗೆ ಜುಂಜಪ್ಪಹಟ್ಟಿ,

ಚಿತ್ರದೇವರಹಟ್ಟಿ ಎಂತಲೂ, ರಂಗನಾಥನ ಒಕ್ಕಲ ಮಕ್ಕಳು ವಾಸಿಸುವ ಗ್ರಾಮಗಳಿಗೆ ರಂಗನಹಳ್ಳಿ, ರಂಗಾಪುರ, ಮುದ್ದುರಂಗನಹಳ್ಳಿ ಎಂತಲೂ ಇಟ್ಟಿದ್ದಾರೆ. ಆಯಾ ವೀರರ ದೇವಾಲಯಗಳನ್ನು ತಮ್ಮ ನಿತ್ಯ ಪೂಜೆ, ಉತ್ಸವ, ಜಾತ್ರೆಗಳನ್ನು ನೆಡೆಸಿಕೊಂಡು ಬರುತ್ತಿದ್ದಾರೆ.

ಕಳ್ಳಂಬೆಳ್ಳ ಹೋಬಳಿಯ 'ಕಾಟಾವೀರನಹಳ್ಳಿ' ವೀರನೊಬ್ಬನಿಗೆ ಇನಾಮಾಗಿ ಕೊಟ್ಟ ಗ್ರಾಮವಾಗಿದೆ. "ಈ ವೀರನ ಬಗೆಗೆ ಸಿರಾ ತಾಲ್ಲೂಕು ಕಛೇರಿಯಲ್ಲಿ ವಿವರವಿದೆ ಈ ವೀರ ಹಿಂದೆ ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಸಿರಾ ಅಮಲ್ದಾರರ ಕಛೇರಿಯ ಕಾವಲುಗಾರನಾಗಿದ್ದ ಇವನು ಯಾವಾಗಲೂ 'ಕಠಾರಿ' ಎಂಬ ಆಯುಧವನ್ನು ಹಿಡಿದು ಕಛೇರಿಯನ್ನು ಕಾಯುತ್ತಿದ್ದ. ಇವನ ಯಾವುದೊ ಒಂದು ವೀರ ಕಾರ್ಯಕ್ಕೆ ಮೆಚ್ಚಿ ಬ್ರಿಟೀಷ್ ಅಧಿಕಾರಿಯೊಬ್ಬ ಇವನಿಗೆ ಒಂದು ಹಳ್ಳಿಯನ್ನು ಇನಾಮಾಗಿ ನೀಡಿದ. ಆ ಹಳ್ಳಿಯೇ ಕಠಾರಿ ವೀರನಹಳ್ಳಿ ಇದು ಕ್ರಮೇಣ 'ಕಟಾವೀರನಹಳ್ಳಿ' ಎಂದು ರೂಪಾಂತರ ಹೊಂದಿದೆ ಇದಕ್ಕೂ ಮುನ್ನ ಈ ಊರಿಗೆ ಯಾವ ಹೆಸರಿತ್ತು ಎಂದು ತಿಳಿದುಬರುವುದಿಲ್ಲ" ಎಂದು ಇದೇ ಗ್ರಾಮದ ಪ್ರೊ.ಚಂದ್ರಣ್ಣರವರು ಅಭಿಪ್ರಾಯ ಪಡುತ್ತಾರೆ.

ಬದಲಾವಣೆ ಜಗದ ನಿಯಮ. ಈಗಿನದು ವೇಗದ ಜಾಯಮಾನ. ಇಂದಿನ ಸಾಫ್ಟ್‌ವೇರ್ ವರ್ಶನ್ ನಾಳೆ ಹಳತು. ಇವತ್ತಿನ ಜನರೇಷನ್ ಐದೇ ವರ್ಷಗಳಲ್ಲಿ ಹಿಂದಿನ ಜನರೇಷನ್ ಆಗಿ ಬಿಡುತ್ತದೇನೋ ಅನ್ನಿಸಲು ಕಾರಣಗಳೂ ಸಾಕಷ್ಟಿವೆ. ಓದಿದ ಕಾಲೇಜು ಎರಡು ವರ್ಷ ಬಿಟ್ಟು ಮತ್ತೆ ಭೇಟಿಕೊಡಿ ಅಲ್ಲಿನ ವಿದ್ಯಾರ್ಥಿಗಳ ನಡುವೆ ಪಠ್ಯ ವಿಷಯ ಬದಲಾಗಿರುತ್ತದೆ. ಪ್ರೇಮ ಪಲ್ಲವಿಸುವ ಪರಿ ಬದಲಾಗಿರುತ್ತದೆ. ತಿನ್ನುವ ತಿನಿಸು ಕುಡಿಯುವ ನೀರು ಆಡುವ ಮಾತು ಉಡುಗೆ ತೊಡುಗೆ ಬದಲಾಗಿರುತ್ತದೆ. ಕುಡಿಯುವ ನೀರಿನ ಲೋಟದ ಜಾಗದಲ್ಲಿ ಮಿನರಲ್ ಬಾಟಲ್ ಬಂದಿರುತ್ತದೆ. ಕ್ಯಾಲ್ಕ್ಯುಲೇಟರ್ ಮಾಯ ಎಲ್ಲಾ ಮೊಬೈಲ್‌ಮಯ. ಹೀಗೆಯೇ ಸಾಂಸ್ಕೃತಿಕ ವೀರರ ಅಸ್ತಿತ್ವ ಸಮಾಜದಲ್ಲಿ ಬದಲಾವಣೆಗೆ ಒಳಪಡುತ್ತಲೇ ಇರುತ್ತದೆ. ಇವರು ಬದಲಾಗುತ್ತಿರುವ ಸಮಾಜದ ಮೇಲೆ ಪ್ರಭಾವ ಬೀರುತ್ತಿರುವಂತೆ ಬದಲಾಗುತ್ತಿರುವ ಸಮಾಜವೂ ಇವರ ಅಸ್ತಿತ್ವ, ಸಂಪ್ರದಾಯ ಆಚರಣೆಗಳ ಮೇಲೆ ಪ್ರಭಾವ ಬೀರುತ್ತಿದೆ. ಅಂದು ಇದ್ದ ಆಚಾರ ವಿಚಾರ, ರೂಢಿ ಸಂಪ್ರದಾಯ ಇಂದಿನ ಜನಾಂಗಕ್ಕೆ ಒಣ ಹರಟೆಗಳಾಗಿಯೋ, ಗೊಡ್ಡು ಸಂಪ್ರದಾಯಗಳಾಗಿಯೇ ಕಾಣುತ್ತಿರುವುದು ಸಹಜ. ಎಂದೋ ಒಪ್ಪಿತವಾದ ಆಚಾರ ವಿಚಾರ ಇಂದು ಅಸಹ್ಯವಾಗಿ, ಅರ್ಥಹೀನವಾಗಿ ಕಾಣುತ್ತಿರಬಹುದು. ಬದಲಾಗುತ್ತಿರುವ ಸಮಾಜದಲ್ಲಿ ವೀರರ ಅಸ್ತಿತ್ವವೂ ಹಾಗೆಯೇ ಅವರನ್ನು ಕುರಿತಾದ ನಂಬಿಕೆ ಕಟ್ಟುಪಾಡುಗಳು ಅವರು ರೂಪಿಸಿದ ಆಚಾರ ವಿಚಾರಗಳು ಬದಲಾವಣೆ ಪಡೆದುಕೊಳ್ಳುತ್ತವೆ. ಆಧುನಿಕ ಬಂಡವಾಳಶಾಹಿ ನಾಗರೀಕತೆ, ನಾಗರೀಕರಣ ನವನಾಗರೀಕತೆ ಈ ವೀರರ ಅಸ್ತಿತ್ವವನ್ನು ಬುಡಮೇಲು ಮಾಡುತ್ತಿದೆ. ಅವರ ಮೌಲ್ಯಗಳನ್ನು ನಂಬಿಕೆ, ಸಂಪ್ರದಾಯ ನಿಯಮಗಳನ್ನು ನಿರ್ದಯವಾಗಿ ಹೊರಗೆ ಹಾಕುತ್ತಿದೆ.

ಇಂತಹ ನವನಾಗರೀಕತೆಯ ಸಂದರ್ಭದಲ್ಲಿ ಹೇಗಿದ್ದ ವೀರರು ಹೇಗಾಗಿದ್ದಾರೆ ಎಂಬುದಕ್ಕೆ ವೀರರ ಅಸ್ತಿತ್ವದ ಅಧ್ಯಯನ ಈ ಸಂದರ್ಭದಲ್ಲಿ ಅತ್ಯಂತ ಸೂಕ್ತವಾದದ್ದು.

ಅಂದಿನ ಸಮಾಜ ತಮ್ಮ ರಕ್ಷಣೆಗಾಗಿ ಜನಾಂಗದ ಒಳತಿಗಾಗಿ, ಬಾಳಿನುದ್ದಕ್ಕೂ ಹೋರಾಡಿ ಮಡಿದ, ತಮ್ಮ ಗಂಡಾಂತರಗಳನ್ನು ಪಾರುಮಾಡಿ ತಮ್ಮ ಬದುಕಿಗೆ ಒಂದು ರೀತಿ ನೀತಿಯ ಚೌಕಟ್ಟನ್ನು ನಿರ್ಮಿಸಿಕೊಟ್ಟ ತಮ್ಮದೇ ಗುಂಪಿನ ಕೆಲವೊಂದು ವ್ಯಕ್ತಿಗಳ ಹೋರಾಟದ ಬದುಕನ್ನು ಸ್ಮರಿಸುತ್ತಾ ಅವರ ವೀರ ಮರಣದ ನಂತರ ಅವರಿಗೆ ದೈವತ್ವದ ಸ್ಥಾನವನ್ನು ದೊರಕಿಸಿ ಅವರು ರೂಪಿಸಿದ ಎಲ್ಲಾ ಆಚಾರ ವಿಚಾರಗಳನ್ನು ಪಾಲಿಸಿಕೊಂಡು ಹೋಗುವುದೇ ತಾವು ಅವರಿಗೆ ಸಲ್ಲಿಸುವ ಕೃತಜ್ಞತೆ, ಗೌರವಗಳೆಂದು ಭಾವಿಸಿ ಆರಾಧಿಸಿಕೊಂಡು ಬಂದರು. ಎಲ್ಲಿಯೂ ಲೋಪಕ್ಕೆ ಅವಕಾಶ ಮಾಡಿಕೊಡಲಿಲ್ಲ. ಅವರು ಹೋರಾಡಿ ಮಡಿದ ಜಾಗಗಳನ್ನೇ ದೇವಾಲಯಗಳನ್ನಾಗಿ ಮಾಡಿಕೊಂಡು, ಅವರು ಬಳಸಿದ ವಸ್ತು ಒಡವೆಗಳನ್ನೇ ಮೂರ್ತಿಗಳನ್ನಾಗಿ ದೈವತ್ವವನ್ನು ಕಂಡುಕೊಂಡಿದ್ದರು. ತಮಗಾಗಿ ಹೋರಾಡಿ ಮಡಿದ ಆ ವ್ಯಕ್ತಿಗಳನ್ನೇ ತಮ್ಮ ನಾಯಕರನ್ನಾಗಿ ಸ್ವೀಕರಿಸಿದರು. ಆ ನಾಯಕರ ಬದುಕನ್ನು ಸ್ಫೂರ್ತಿಯಾಗಿ ಸ್ವೀಕರಿಸಿ ಅವರ ಕಾರ್ಯಗಳನ್ನು ಪವಾಡಗಳ ರೀತಿಯಲ್ಲಿ ವೈಭವೀಕರಿಸಿ ಪದಗಳನ್ನು ಕಟ್ಟಿ ಹಾಡತೊಡಗಿದರು. ತಮ್ಮ ನಿತ್ಯ ಕೆಲಸಗಳ ಮಧ್ಯೆ ಆ ಪದಗಳನ್ನು ಹಿಡಿದುಕೊಳ್ಳುವ ಮೂಲಕ ಸ್ಫೂರ್ತಿಯನ್ನು ಪಡೆಯುತ್ತಾ ಭಕ್ತಿಯನ್ನು ಸಲ್ಲಿಸುತ್ತಿದ್ದರು.

ಭಕ್ತಿ ಶ್ರದ್ಧೆಯ ಉತ್ಕಟತೆಯಲ್ಲಿ ಆ ಸತ್ತ ವೀರ ಯಾರಾದರೂ ವ್ಯಕ್ತಿಗಳ ಕನಸಿನಲ್ಲೋ, ಮೈಮೇಲೆ ಬಂದೋ ತಾನು ದೈವನಾಗಿರುವೆನೆಂತಲೂ, ತನಗೆ ಗುಡಿ ಕಟ್ಟಬೇಕೆಂತಲೂ ನುಡಿಯಿತು. ಉದಾಹರಣೆಗೆ ಮರಡಿ ಗುಡ್ಡದ ರಂಗ, ಮಾಗೋಡುರಂಗ, ಬೊಪ್ಪರಾಯ, ವೀರಮ್ಮರ ಪವಾಡ ಪ್ರಸಂಗಗಳಲ್ಲಿ ಈ ರೀತಿಯ ಕಥೆಗಳನ್ನು ಗುರ್ತಿಸಬಹುದು.

ವೀರರು ಯಾವ ಜಾತಿ ವರ್ಗಕ್ಕೆ ಸೇರಿರುವರೋ ಅವರ ವಂಶಜರೇ ಪೂಜಾ ಪರಂಪರೆಯನ್ನು ಉಳಿಸಿಕೊಂಡು ಬಂದರು. ಉದಾಹರಣೆ ಜುಂಜಪ್ಪ ಕಾಡುಗೊಲ್ಲ ವಂಶದಲ್ಲಿ ಜನಿಸಿದವನು. ಆದರೆ ಬೆಳೆದದ್ದು ಕುಂಚಿಟಿಗರ ಮನೆ ಮಠಗಳಲ್ಲಿ, ಹೀಗಾಗಿ ಇಂದು ಈ ಎರಡೂ ಜನಾಂಗದವರು ಜುಂಜಪ್ಪನನ್ನು ಆರಾದಿಸಿದರೂ ಪೂಜಿಸುವ ಪೂಜಾರಿತನದ ಹಕ್ಕು ಪಡೆದವರು ಕಾಡುಗೊಲ್ಲರು, ಇಂದು ಈ ವಿವಾದ ಕೋರ್ಟಿನ ಮೆಟ್ಟಿಲನ್ನೂ ಹತ್ತಿ ಕೊನೆಗೆ ಗಾಡುಗೊಲ್ಲರೇ ಪೂಜಾರಿತನದ ಹಕ್ಕನ್ನು ಪಡೆದುಕೊಂಡರು. ಕುಂಚಿಟಿಗರಿಗೆ ಮೊದಲ ಪೂಜೆಯ ಹಕ್ಕು ದೊರೆತಿದೆ. ಹೀಗೆ ಪೂಜಾರಿ ತನವ ಹಕ್ಕನ್ನು ಉಳಿಸಿಕೊಂಡದ್ದು ಆ ಜನಾಂಗಕ್ಕೆ ಹೆಮ್ಮೆಯ, ಗೌರವದ, ಸಾಮಾಜಿಕ ಮನ್ನಣೆಯ, ಮರ್ಯಾದೆಯ ವಿಚಾರವಾಗಿದೆ. ಕೆಲವರು ಈ ವೃತ್ತಿಗಾಗಿ ಯಾವ ಸಂಭಾವನೆಯನ್ನು

ಪಡೆಯುತ್ತಿಲ್ಲ. ಮತ್ತೆ ಕೆಲವರು ಈ ವೀರರ ಸ್ವತ್ತುಗಳನ್ನು ಉಪಯೋಗಿಸಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಕೆಲವರು ಆ ಸ್ವತ್ತುಗಳಿಂದ ಬರುವ ಆದಾಯವನ್ನು ವೀರರ ಉತ್ಸವ ಜಾತ್ರೆಗಳಿಗೆ, ಅನ್ನಸಂತರ್ಪಣೆಗೆ ಬಳಸಿಕೊಳ್ಳುತ್ತಿದ್ದಾರೆ. ಉದಾಹರಣೆಗೆ ಬರಗೂರು ವೀರಮ್ಮನ ಭಕ್ತರು ವರ್ಷಕ್ಕೊಮ್ಮೆ ದೇವಸ್ಥಾನದ ಹೆಸರಿನಲ್ಲಿರುವ ಜಮೀನಿನಿಂದ ಬರುವ ಆದಾಯದಲ್ಲಿ ಜಾತ್ರೆ ನಡೆಸುತ್ತಿದ್ದಾರೆ.

ಹಿರಿಯ ತಲೆಮಾರಿನಲ್ಲಿ ಕಾಣುವ ವೀರರ ಬಗ್ಗೆ ಗೌರವ ಭಕ್ತಿ ಶ್ರದ್ಧೆಗಳು ಕಿರಿ ತಲೆಮಾರಿನಲ್ಲಿ ಕಂಡುಬರುವುದಿಲ್ಲ. ಕೆಲವು ಸಂಪ್ರದಾಯಗಳನ್ನೇ ಬದಲಾಯಿಸುತ್ತಿದ್ದಾರೆ. ಜುಂಜಪ್ಪನ ಜಾತ್ರೆಯ ಸಂದರ್ಭದಲ್ಲಿ ಗಂಗಾಸ್ನಾನಕ್ಕಾಗಿ ಕಳುವೊರಹಳ್ಳಿಯಿಂದ ಸುಮಾರು ೫೦.೬೦ ಕಿಮಿ ದೂರದ ಪುರುಸಮ್ಮನ ಕೆರೆಗೆ ಹೊತ್ತು ತರುತ್ತಿದ್ದರು. ಆದರೆ ಇಂದು ಜುಂಜಪ್ಪನ ಗುಡ್ಡೆಯ ಹತ್ತಿರದ ಕಲ್ಯಾಣಿಯಲ್ಲಿಯೇ ಗಂಗಾಸ್ನಾನ ಮಾಡಿಸುತ್ತಾರೆ. ಮೂರು ಅಥವಾ ಐದು ವರ್ಷಗಳಿಗೊಮ್ಮೆ ಪುರುಸಮ್ಮನ ಕೆರೆಗೆ ತರುತ್ತಾರೆ. ಜುಂಜಪ್ಪ ಎತ್ತಪ್ಪರ ಮೆರವಣಿಗೆ ಮೂರ್ತಿಗಳನ್ನು ವಿದ್ಯುತ್ ಲೈನಿನ ಕೆಳಗೆ ತರಬಾರದು ಎಂಬ ನಿಯಮ ಸಡಿಲಗೊಂಡಿದೆ. ದೇವರ ಪೂಜಾರರು ಚಪ್ಪಲಿ ಹಾಕಬಾರದು, ಬಸ್ ಪ್ರಯಾಣ ಮಾಡಬಾರದು ಮೊದಲಾದ ನಿಯಮಗಳು ಸಡಿಲಗೊಂಡಿವೆ. ಜುಂಜಪ್ಪನಿಗೆ ಅಂಟು ಮುಟ್ಟಾಗದಿರಲೆಂದು ಅತ್ಯಂತ ಮಡಿ ಮೈಲಿಗೆಯಿಂದ ಊರಿನ ಹೊರ ಭಾಗಗಳಲ್ಲಿ ಕಲ್ಲು ಮುಳ್ಳೆನ್ನದೆ ಬಾಯಿಗೆ ಬಟ್ಟೆ ಕಟ್ಟಿಕೊಂಡು ಹೊತ್ತು ನಡೆಯುತ್ತಿದ್ದ ಪದ್ಧತಿ ಕಣ್ಮರೆಯಾಗಿದೆ. ಜುಂಜಪ್ಪ ಎತ್ತಪ್ಪರ ಗುಡಿಗಳು ಕೇವಲ ಪೌಳಿಗಳಾಗಿರಬೇಕು ಊರಿನ ಹೊರಭಾಗದಲ್ಲಿ ಇರಬೇಕು. ಮೇಲ್ಛಾವಣಿ ಇರಬಾರದು ಎಂಬ ನಂಬಿಕೆಗಳು ಮುರಿದು ಮೇಲ್ಛಾವಣಿ ಹಾಕುವ, ಊರ ಒಳಭಾಗದಲ್ಲೇ ಪ್ರತಿಷ್ಠಾಪಿಸುವ, ಅಂಟು ಮುಟ್ಟಿನ ಬಗೆಗೆ ನಿರ್ಲಕ್ಷ್ಯ ವಹಿಸುವುದು ಸಾಮಾನ್ಯ ಸಂಗತಿಯಾಗಿದೆ.

ಕಾಲ ಬದಲಾದಂತೆ ಸಾಂಸ್ಕೃತಿಕ ವೀರರ ಜನಪ್ರಿಯತೆ ಕುಸಿಯುತ್ತಿದೆ. ಅವರ ಸ್ಥಾನಗಳನ್ನು ಶಿಷ್ಟ ದೇವತೆಗಳಾದ ರಾಮ, ಕೃಷ್ಣ, ಶಿವ, ಆಂಜನೇಯ, ಲಕ್ಷ್ಮಿ, ಶನಿ, ವೆಂಕಟೇಶ್ವರ ಮೊದಲಾದ ದೇವತೆಗಳು ಪಡೆದುಕೊಳ್ಳುತ್ತಿವೆ. ಕೆಲವು ಭಾಗಗಳಲ್ಲಿ ವೀರರ ಗುಡಿ, ಪೌಳಿಗಳು ಸಂಪೂರ್ಣ ನಾಶವಾಗಿವೆ. ಕೇವಲ ಖಾಲಿ ಮಂಟಪ, ಅವಶೇಷಗಳು ಉಳಿದುಕೊಂಡಿವೆ. ಅಲ್ಲಿ ಪೂರ್ವದಲ್ಲಿ ಪೂಜೆಗೊಳಗಾಗುತ್ತಿದ್ದ ವೀರರುಗಳ ಹೆಸರನ್ನು ಹೇಳುವವರೂ ಇಲ್ಲವಾಗುತ್ತಿದ್ದಾರೆ.

ಸಾಂಸ್ಕೃತಿಕ ವೀರರನ್ನೇ ಎಷ್ಟೋ ಗ್ರಾಮದಲ್ಲಿ ಗ್ರಾಮದೇವತೆಗಳನ್ನಾಗಿ ಮಾಡಿಕೊಂಡ ಉದಾಹರಣೆಗಳಿವೆ. ಮಾಗೋಡುರಂಗ, ಜುಂಜಪ್ಪ, ಎತ್ತಪ್ಪ ಮೊದಲಾದವರು ಹತ್ತಾರು ಹಳ್ಳಿಗಳಿಗೆ ಗ್ರಾಮದೇವತೆಗಳಾಗಿ ಉತ್ಸವ, ಜಾತ್ರೆಗಳು ನಡೆಯುತ್ತಿವೆ. ಈ ವೀರರಿಗೆ ಜನರು

ತಮ್ಮ ತೊಂದರೆ ಸಂಕಟಗಳನ್ನು ಪಾರುಮಾಡುವಂತೆ ಕೇಳಿಕೊಳ್ಳುವುದು ಉಂಟು. ಜನ ಜಾನುವಾರಗಳಿಗೆ ಆರೋಗ್ಯ ಕೊಡುವಂತೆ, ಊರಿಗೆ ಮಳೆ ಬಾರದಿದ್ದರೆ ಮಳೆ ಎಂದು ಬರುತ್ತದೆಂದು, ಕೊಳವೆ ಭಾವಿ ತೋಡಿಸಿದರೆ ನೀರು ಬರುತ್ತದೋ, ಇಲ್ಲವೊ ಎಂದು ಹೂವು ಕೇಳುವುದು, ಖಾಯಿಲೆ ಖಸಾಲೆಗಳನ್ನು ತಡೆಯುವಂತೆ, ಪ್ರಕೃತಿ ವಿಕೋಪವನ್ನು ತಡೆಯುವಂತೆ ಮೊರೆ ಇಡುವುದು ಉಂಟು. ಆದರೆ ಶಿಷ್ಟ ದೇವತೆಗಳ ಪ್ರಭಾವ ಸಾಂಸ್ಕೃತಿಕ ವೀರರ ಮೌಲ್ಯಾಧರ್ಶಗಳನ್ನು ನುಚ್ಚುನೂರು ಮಾಡುತ್ತಿರುವುದುಂಟು. ಇದು ಮೇಲ್ವರ್ಗದವರನ್ನು ಕೆಳವರ್ಗದವರು ಅನುಸರಿಸುವ ಒಂದು ಸಾಧಾರಣ ಪ್ರಕ್ರಿಯೆ ಎಂದು ಮಾನವ ಶಾಸ್ತ್ರಜ್ಞರು ಗುರ್ತಿಸುತ್ತಾರೆ. ಆದುದರಿಂದಲೇ ತಮ್ಮ ತಮ್ಮ ಜನಾಂಗ ರಕ್ಷಣೆಗಾಗಿ ಹೋರಾಡಿ ಮಡಿದ ವೀರರನ್ನು ಇಂದು ಜನ ಅಲ್ಲಗಳೆಯುತ್ತಿದ್ದಾರೆ.

ನಾಗರೀಕತೆಯ ಭ್ರಮಾಲೋಕದಲ್ಲಿರುವ ವಾಸ್ತವ ಸಮಾಜದಲ್ಲಿ ತಾವು ಮುಂದುವರೆದವರು, ಪ್ರತಿಷ್ಠಿತರು ಎಂಬುದನ್ನು ತೋರಿಸಿಕೊಳ್ಳಲು ಜನರು ತಮ್ಮ ಜೀವನದಲ್ಲಿ ನವ ನಾಗರೀಕತೆಯ ಪ್ರದರ್ಶನಕ್ಕೆ ಸ್ಪರ್ಧೆಗೆ ಬಿದ್ದಿರುವರೋ ಎಂಬಂತೆ ಸಂಸ್ಕೃತ ಶ್ಲೋಕಗಳನ್ನು ಬಳಸಿ ಪೂಜಿಸುವ ಬ್ರಾಹ್ಮಣ ಪುರೋಹಿತರಿಂದಲೇ ಪೂಜೆ ಮಾಡಿಸುವ ಹಾಲು ತುಪ್ಪಗಳಿಂದಲೇ ಅಭಿಷೇಕ ಮಾಡುವ, ದವನ, ಗಂಧ, ಸುಗಂಧಗಳಿಂದಲೇ ಅಲಂಕರಿಸುವ, ಶಿಷ್ಟ ದೇವರುಗಳನ್ನು ಪೂಜಿಸುವಂತೆ ಪೂಜಿಸುವ ವೈದಿಕೀಕರಣದ ಸನ್ನಿವೇಶ ಕಾಣಬಹುದಾಗಿದೆ. ಎಲ್ಲೊ ಊರ ಹೊರಭಾಗದಲ್ಲಿ ವೀರರು ಮಡಿದ ಸ್ಥಳಗಳನ್ನು ಬಿಟ್ಟು ತಮಗನುಕೂಲವಾಗುವಂತೆ ಊರ ಒಳಭಾಗಕ್ಕೆ ಸ್ಥಳಾಂತರಿಸಿ ಮೂಲ ನೆಲೆಗಳನ್ನು ನಿರ್ಲಕ್ಷಿಸುತ್ತಿರುವ ಉದಾಹರಣೆಗಳಿವೆ. ಬರಗೂರು ವೀರಮ್ಮ ಸತಿಯಾದ ಸ್ಥಳ ಬರಗೂರಿನಿಂದ ಒಂದೂವರೆ ಫರ್ಲಾಂಗ್ ದೂರದ ಬಯಲಿನಲ್ಲಿದ್ದರೆ ಈಗ ಊರಿನ ಒಳಭಾಗದಲ್ಲೊಂದು ಆಕೆಯ ಗುಡಿ ಕಟ್ಟಿಸಿ, ಛತ್ರಗಳನ್ನು ಕಟ್ಟಿಸಿ ವೈಭವದಿಂದ ಮೆರವಣಿಗೆ ದೇವವರನ್ನು ಪೂಜಿಸುವರು. ದಿಬ್ಬದಿಂದ ವೀರಬೊಮ್ಮಣ್ಣನ ಮೆರವಣಿಗೆ ದೇವರನ್ನ ಮಾಡಿ ಊರ ಓಳಗೆ ರಥೋತ್ಸವವನ್ನು ಮಾಡುವರು.

ಸಾಂಸ್ಕೃತಿಕ ವೀರರ ಹೆಸರುಗಳು ಸರಿಯಿಲ್ಲ ಗ್ರಾಮ್ಯವಾಗಿವೆ ಎಂಬ ಕಾರಣದಿಂದ ವೀರಮ್ಮಳನ್ನು ಶ್ರೀ 'ವೀರಮ್ಮಾಜಿ' ಎಂತಲೂ ಜುಂಜಪ್ಪನನ್ನು 'ಜುಂಜೇಶ್ವರ' ಎಂತಲೂ, ಬೊಪ್ಪರಾಯನನ್ನು 'ಬೊಪ್ಪೇಶ್ವರ' ಎಂತಲೂ ಮರಡಿಗುಡ್ಡದ ರಂಗನಾಥನನ್ನು 'ಶ್ರೀರಂಗಧಾಮ' ಎಂತಲೂ ಮರು ನಾಮಕರಣ ಮಾಡುವರು. ಮತ್ತು ಕೆಲವರು ಈ ಮೂಲ ನಾಯಕರು ತಮ್ಮ ಮನೆದೇವರೆಂದು ಹೇಳಿಕೊಳ್ಳಲೂ ನಾಚಿಕೆಪಡುವರು. ಏನೋ ಹಿರಿಯರ ಬಲವಂತಕ್ಕೆ ವರ್ಷಕ್ಕೊಮ್ಮೆ ಸಂದರ್ಶಿಸುವರು. ಇನ್ನೂ ಕೆಲವರು ವಿದ್ಯಾವಂತರೇ ಅದು ಕಲ್ಲು ಇಂತಹದ್ದನ್ನೆಲ್ಲಾ ಏಕೆ ಪೂಜಿಸಬೇಕೆಂಬ ಉದಾಸೀನ್ಯದಿಂದ, ಆ ಕಲ್ಲುಗಳನ್ನು ಪೂಜಿಸುವವರು ಮೂರ್ಖರೆಂದೂ, ದಡ್ಡರೆಂದು ಭಾವಿಸಿ

ವ್ಯಂಗ್ಯ ದೃಷ್ಟಿಯಿಂದ ಕಾಣುವರು. ಇಂತಹವರು ಈ ವೀರರ ಪೂಜಾ ಸಂಪ್ರದಾಯದ ಹಿಂದಿನ ಸಾಂಸ್ಕೃತಿಕ ಕರುಳು ಬಳ್ಳಿಯ ಸಂಬಂಧವನ್ನೇ ಅರಿತವರಲ್ಲ. ಇಂತಹವರಿಗೆ ಮೂರ್ತಿಪೂಜೆ ಒಂದು ವ್ಯಂಗ್ಯವಾಗಿ ಕಾಣುತ್ತಿದೆ.

ಈ ಸಾಂಸ್ಕೃತಿಕ ವೀರರ ಗುಡಿ, ಗುಬ್ಬಗಳು, ಮಂಟಪಗಳು ದಿನೇ ದಿನೇ ಶಿಥಿಲವಾಗುತ್ತಾ ಜನರ ಮನಸ್ಸಿನಿಂದ ದೂರವಾಗುತ್ತಿವೆ. ಅವು ಎಲ್ಲೋ ಊರಿನ ಹೊರಭಾಗದ ಸ್ಮಶಾನದಲ್ಲೋ ಹಳೆಯ ಊರುಗಳಲ್ಲೋ, ಕೆರೆ, ಹಳ್ಳಗಳ ದಡಗಳಲ್ಲೋ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾ ಸಾಗಿವೆ. ಆ ಸ್ಥಳಗಳ ಬಗ್ಗೆ ಹೇಳುವುದಕ್ಕೂ ಮುಜುಗರ ಪಡುತ್ತಾರೆ. ಹಳೆ ತಲೆಮಾರಿಗೆ ಆ ವೀರರ ಬಗ್ಗೆ ಹೆಚ್ಚು ಭಕ್ತಿ ಗೌರವವಿದ್ದರೆ ಹೊಸ ಪೀಳಿಗೆಗೆ ಅವು ನಿರ್ಲಕ್ಷ್ಯದ, ಉದಾಸೀನ್ಯದ ಮಾತಾಗಿದೆ. ಸಾಂಸ್ಕೃತಿಕ ನಾಯಕರ ಹೆಸರುಗಳನ್ನು ಮಕ್ಕಳಿಗೆ ನಾಮಕರಣ ಮಾಡುವುದು ಭಕ್ತಿ ಗೌರವದ ವಿಚಾರವಾಗಿದ್ದದ್ದು, ಇಂದು ಕೀಳರಿಮೆಗೆ ಕಾರಣವಾಗಿದೆ. ಕೆಲವರು ತಮ್ಮ ಮೂಲ ಹೆಸರನ್ನೇ ಬದಲಾಯಿಸಿ ಇಟ್ಟುಕೊಳ್ಳುವ ಪ್ರಸಂಗಗಳೂ ಜರುಗುತ್ತಿವೆ.

ಆಧುನೀಕರಣದ ಪರಿಣಾಮವಾಗಿ ವೀರರ ಜಾತ್ರಾ ಮಹೋತ್ಸವಗಳ ಸಂದರ್ಭದಲ್ಲಿ ಪೆಟ್ರೋಮ್ಯಾಕ್ಸ್, ಟ್ಯೂಬ್‌ಲೈಟ್‌ಗಳನ್ನು ಹಿಡಿದು ಮೆರವಣಿಗೆ ಮಾಡುತ್ತಾ, ಹಿಂದಿನ ಪಂಜುಗಳು ಮರೆಯಾಗಿವೆ. ಕುಂಬಾರರ ಮಣ್ಣಿನ ಹಣತೆಗಳಿಗೆ ಬದಲಾಗಿ ವಿದ್ಯುತ್ ದೀಪಗಳು, ತಮಟೆ, ಓಲಗಗಳ ಬದಲಾಗಿ ಧ್ವನಿವರ್ಧಕಗಳು ಕೇಳಿಸುತ್ತವೆ. ವೀರರನ್ನು ಕುರಿತು ಹೆಂಗಸರು ಹೇಳುತ್ತಿದ್ದ ಪದಗಳು ಕಣ್ಮರೆಯಾಗಿವೆ. ದನ ಕರುಗಳಿಗೆ ಖಾಯಿಲೆ ಖಸಾಲೆಗಳು ಬಂದಾಗ ವೀರರಿಗೆ ಹರಕೆ ಹೋಗುತ್ತಿದ್ದ ಸಂಪ್ರದಾಯ ಕಣ್ಮರೆಯಾಗುತ್ತಿವೆ. ಗೋವುಗಳು ಹಾಲು ಕಡಿಮೆ ಕೊಟ್ಟಾಗ, ಖಾಯಿಲೆಗೆ ತುತ್ತಾದಾಗ ಅವುಗಳ ಹಾಲನ್ನು ವೀರರ ವಿಗ್ರಹಗಳಿಗೆ ಸುರಿಯುತ್ತಿದ್ದರು. ವೈದ್ಯಕೀಯ ಕ್ಷೇತ್ರದ ಬೆಳವಣಿಗೆಯಿಂದ ಈ ಎಲ್ಲಾ ಹಳೆಯ ಆಚರಣೆಗಳು ಜನಮನದಿಂದ ದೂರ ಸರಿಯುತ್ತಿವೆ. ಕಳ್ಳತನ, ಆಸ್ತಿ ಅಂತಸ್ತಿನ ಕಿತ್ತಾಟ ಮೊದಲಾದ ಅತಂತ್ರ ಸ್ಥಿತಿಯಲ್ಲಿ ವೀರರು ರೂಪಿಸಿದ ತತ್ವಗಳು ನಮ್ಮನ್ನು ಕಾಪಾಡುತ್ತವೆ ಎಂದು ನಂಬಿದ್ದವರು ಇಂದು ಪೋಲೀಸ್, ಕೋರ್ಟ್‌ಗಳಿಗೆ ಮೊರೆಹೋಗುತ್ತಿದ್ದಾರೆ.

ಕಾಡು ಪ್ರಾಣಿಗಳ ಹಾವಳಿ, ವಿಷಜಂತುಗಳು ಕಾಣಿಸಿಕೊಂಡಾಗ ಜುಂಜಪ್ಪ, ಎತ್ತಪ್ಪರಿಗೆ ಹರಕೆ ಹೊತ್ತಿದ್ದರು ಜನ ಇಂದು ಬಹುಪಾಲು ಮರೆತು ಹೋಗುತ್ತಿದ್ದಾರೆ. ಜಾತ್ರೆ ಉತ್ಸವಗಳಲ್ಲಿ ಮಾತ್ರ ವಿಷಜಂತುಗಳು ಕಾಣಿಸಿಕೊಂಡಾಗ ಹರಕೆಹೊತ್ತ ಜನ ಹಾವು, ಚೇಳು, ಮಂಡರುಗಪ್ಪೆಗಳನ್ನು ತಾಮ್ರ, ತಗಡು, ಕಬ್ಬಿಣಗಳಲ್ಲಿ ಮಾಡಿಸಿ ಜುಂಜಪ್ಪನಿಗೆ ಒಪ್ಪಿಸುವುದನ್ನು ಕಾಣಬಹುದು.

ಹೀಗೆ ಸಾಂಸ್ಕೃತಿಕ ವೀರರನ್ನು ಪೂಜಿಸುತ್ತಿದ್ದ ಜನವರ್ಗ ರಾಜಕೀಯ, ಸಾಮಾಜಿಕ, ಆರ್ಥಿಕ ಕಾರಣಗಳಿಂದ ಶಿಷ್ಟ ದೇವರುಗಳನ್ನು ಪೂಜಿಸುವ ಮೂಲಕ ತಾವೂ ಶಿಷ್ಟರೆನಿಸಿಕೊಳ್ಳಲು

ತವಕಿಸುತ್ತ ತಮ್ಮ ನಾಯಕರನ್ನು ತೆರೆಮರೆಗೆ ಸರಿಸುತ್ತಿದ್ದಾರೆ. ಈ ವೀರರ ಮರೆವಿನೊಂದಿಗೆ ಈ ಭಾಗದ ಕಾಡುಗೊಲ್ಲ, ಕುಂಚಿಟಿಗ ಜನಾಂಗಗಳ ಮೂಲ ಸಂಸ್ಕೃತಿಯೇ ಅವಸಾನವಾಗುತ್ತಿರುವ ಅಪಾಯವಿದೆ.

ಇಷ್ಟಾದರೂ ಸಾಂಸ್ಕೃತಿಕ ವೀರರು ಸಂಪೂರ್ಣ ಜನರ ಮಾನಸಿಕ ಭಾವನೆಗಳಿಂದ ಸಂಪೂರ್ಣ ದೂರವಾಗಿಲ್ಲ. ಎತ್ತಪ್ಪ ಗೋಕುಲಕ್ಕೆ ರೂಪಿಸಿದ ಕಟ್ಟುಪಾಡುಗಳು ಆ ಜನಾಂಗಕ್ಕೆ ವೇದವಾಕ್ಯಗಳು. ಸಮಾಜ ಎಷ್ಟೇ ಬದಲಾದರೂ ಆಧುನೀಕತೆ ಪ್ರವೇಶಿಸಿದರೂ, ಜಾಗತೀಕರಣ, ಖಾಸಗೀಕರಣಗಳು ಹಟ್ಟಿಗಳಲ್ಲಿ ವಾಸಮಾಡುವ ಈ ಜನಾಂಗದ ಎತ್ತಪ್ಪನ ಕಟ್ಟು ಕರಾರುಗಳ ಮೇಲೆ ಅಷ್ಟಾಗಿ ಪರಿಣಾಮ ಬೀರಿಲ್ಲ. ಕಾಡುಗೊಲ್ಲರ ಬದುಕಿನ ವಿಧಾನದಲ್ಲಿ ಎತ್ತಪ್ಪನ ವಿಧಿ ನಿಯಮಗಳು ಸಮ್ಮಿಳಿತಗೊಂಡಿವೆ. ಹುಟ್ಟು, ಸಾವು ಹಬ್ಬ ಹರಿದಿನಗಳಲ್ಲಿ ಇವು ಎಡಬಿಡದೆ ಪಾಲನೆಗೊಳ್ಳುತ್ತವೆ. ಸಂಪೂರ್ಣವಾಗಿ ತಮ್ಮತನವನ್ನು ಬಿಟ್ಟುಕೊಡಲಾರದ ಈ ಜನ ಅವುಗಳಲ್ಲೇ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾ ಇತ್ತ ಆಧುನೀಕತೆಯನ್ನು ಸ್ವೀಕರಿಸುತ್ತ ಅತ್ತ ತಮ್ಮ ಜನಾಂಗ ರಕ್ಷಕ ದೈವದಂತಿರುವ ವೀರರನ್ನು ಬಿಟ್ಟುಕೊಡಲಾರದೆ ಎರಡರ ನಡುವೆ ಒಂದು ಸಮಸ್ಥಿತಿಯ ಬದುಕನ್ನು ಕಂಡುಕೊಳ್ಳುತ್ತಿದ್ದಾರೆ. ಈ ಎತ್ತಪ್ಪನ ಕಟ್ಟುಗಳು ವೈಜ್ಞಾನಿಕವಾಗಿಯೂ ಸರಿಯಾಗಿ ಕಾಣುವ ಸ್ವಚ್ಛಂದ ನಾಗರೀಕತೆಯ ಸಂಸ್ಕೃತಿ ಲಕ್ಷಣಗಳಾಗಿಯೂ ಕಂಡುಬರುತ್ತವೆ. ಉದಾಹರಣೆ ಕೋಳಿಯಾಗಲಿ, ಹಂದಿಯಾಗಲಿ ಹಟ್ಟಿ ಒಳಗೆ ಬರದಂತೆ ನೋಡಿಕೊಂಡರೆ ಹಟ್ಟೀಲಿ ಬಂಗಾರದ ಹೊಗೆ ಹೊರಡುತ್ತೆ, ಮೂರು ದುಡ್ಡಿನಿಂದ ನಲವತ್ತೆಂಟು ದುಡ್ಡಿನವರೆಗೆ ಕರೇಕಡೆ ವಿಂಗಡಿಸಿ ಅವರ ಬದುಕಿಗೆ ಒಂದು ಸ್ವಚ್ಛವಾದ ಚೌಕಟ್ಟು ನಿರ್ಮಿಸುತ್ತಾನೆ. ಗೋವುಗಳನ್ನೇ ದೇವರಾಗಿ ಕಾಣುವ ಕಾರ್ಯವೇ ಕೈಲಾಸ ಎಂಬಂತಹ ತತ್ವ ರೂಪಿಸಿದವನು. ಜನಾಂಗದಲ್ಲಿ ಒಗ್ಗಟ್ಟಿನ ಮಹತ್ವವನ್ನು ಎತ್ತಿಹಿಡಿದ ಹಟ್ಟಿಯ ಸುತ್ತ ಕೋಟೆಯಂತೆ ಕಳ್ಳೆ ಬೇಲಿ ಹಾಕಬೇಕೆಂದವನು. ಇದು ಅವರ ರಕ್ಷಣೆಯ ದೃಷ್ಟಿಯಿಂದ ಅತಿ ಮುಖ್ಯ ಕ್ರಮ. ಹೀಗಾದರೆ ಎಂಥ ಬರಬಾರದ ಕಷ್ಟ ಬಂದರೂ ನಮ್ಮ ಗೋಕುಲ ಉಳಿಯುತ್ತೆ ಎಂದು ಬದುಕುವ ರೀತಿ ರೂಪಿಸಿದ್ದಾನೆ.

**ತಮ್ಮತನದ ರಕ್ಷಣೆ :** ಸಾಂಸ್ಕೃತಿಕ ವೀರರು ನೀಡಿದ ಮಹತ್ವದ ಕಾಣಿಕೆ ಎಂದರೆ ತಮ್ಮತನದ ರಕ್ಷಣೆ ಮಾಡಿದ್ದು ವೈಜ್ಞಾನಿಕ ಜಗತ್ತಿಗೆ ಬುನಾದಿಯಾಗಿ ನಿಂತದ್ದು. ಶಿಷ್ಟ, ಮೇಲ್ವರ್ಗದವರ ಧಾರ್ಮಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಧಾಳಿಗಳು ತಮ್ಮ ಮೇಲೆ ಆದಾಗಲೂ ವೀರರು ತಮ್ಮ ಸಂಪ್ರದಾಯ ಮತ್ತು ಪರಂಪರೆಗಳಿಂದ ತಮ್ಮ ಜನಾಂಗವನ್ನು ಉಳಿಸಿಕೊಂಡು ಬಂದರು. ತಮ್ಮ ಶೀಲ, ಸಂಸ್ಕೃತಿಯ ಸತ್ವ, ಸಾಹಸ, ಸಾಮೂಹಿಕ ಬಾಳು ಬೆಳೆಸಿಕೊಂಡು ಬಂದರು. ಉದಾಹರಣೆಗೆ ಕಾಡುಗೊಲ್ಲ ಜನಾಂಗದವರನ್ನು ಇಂದಿಗೂ ನಾವು ತಮ್ಮ ಸಂಪ್ರದಾಯಗಳನ್ನು ಬಿಡದ ಜಿಗಟು ಸ್ವಭಾವವರೆನ್ನುತ್ತೇವೆ. ಅದೇ ರೀತಿ ಕುಂಚಿಟಿಗ ಜನಾಂಗದವರೂ ಎಂದೆಂದಿಗೂ ತಮ್ಮ ಜನಾಂಗೀಯ ವೀರರಾದ ಚೋಪ್ಪರಾಯ, ಪೀರಮ್ಮ, ವೀರಬೊಮ್ಮಣ್ಣರನ್ನು ಮರೆತವರಲ್ಲ.

**ವೈಜ್ಞಾನಿಕ ಜಗತ್ತಿಗೆ ಬುನಾದಿಯಾಗಿ ನಿಂತದ್ದು :** ಬದಲಾಗುತ್ತಿರುವ ಜಗತ್ತಿನಲ್ಲಿ ಹೇಗೆ ತಮ್ಮ ಶೀಲ ಶೌರ್ಯಗಳನ್ನು ಉಳಿಸಿ, ಮಾರ್ಪಡಿಸಿಕೊಂಡು ಬರಬೇಕು, ಹೇಗೆ ಜನಾಂಗ ಬದುಕುಳಿಯಬೇಕೆಂದು ಹೇಳುವ ಮೂಲಕ ತನ್ನ ಜನಾಂಗಕ್ಕೆ ವೈಜ್ಞಾನಿಕವಾಗಿ ಬದುಕುವ ಜಗತ್ತಿಗೆ ಬುನಾದಿ ಹಾಕಿದರು. ಎತ್ತಪ್ಪ ತನ್ನ ಬತಗೆಟ್ಟಾಗ ಆ ಜಲ್ಮವನ್ನು ಕಳೆದು ಮರುಜನ್ಮದಲ್ಲಿ ಜನಾಂಗ ರಕ್ಷಣೆಗೆಂದೇ ಜುಂಜಪ್ಪನಾಗಿ ಜನಿಸಿಬಂದ.

**ಸಾಂಸ್ಕೃತಿಕ ವೀರರು ಹಾಗೂ ರಾಜಕಾರಣ :** ವೀರರ ಆರಾಧನೆಯು ಕುಲ ಬಾಂಧವರನ್ನೆಲ್ಲಾ ಆರಾಧನಾ ಸ್ಥಳದಲ್ಲಿ ಒಟ್ಟಿಗೆ ಸೇರಿಸುತ್ತದೆ. ತಮ್ಮ ದೇವರು, ಜನಾಂಗದ, ಗುಂಪಿನ ಸ್ಥಿತಿ ಗತಿಗಳ ಬಗೆಗೆ ಅವಲೋಕನ ಮಾಡಿಕೋಳ್ಳುವುದು, ಸಂಘಟನೆಗಳನ್ನು ಮಾಡಿಕೊಳ್ಳುವುದು, ಶೇರುಗಳನ್ನು ಹಾಕಿಕೊಂಡು ಧಾರ್ಮಿಕ ಕ್ರಿಯಾದಿಗಳನ್ನು ವಿಜೃಂಭಣೆಯಿಂದ ಮುಂದುವರೆಸಿಕೊಂಡು ಹೋಗುವುದು, ಸಮಾಜದ ಮುಖ್ಯವಾಹಿನಿಗೆ ಬರುವುದು, ಆ ಮೂಲಕ ತಮ್ಮ ಶಕ್ತಿಯನ್ನು ಪ್ರದರ್ಶಿಸುವುದು, ಹಂತ ಹಂತವಾಗಿ ನಡೆದುಕೊಂಡು ಬರುತ್ತಿದೆ. ಧಾರ್ಮಿಕತೆಯಿಂದ ಒಂದುಗೂಡಿ ಒಂದು ಆರ್ಥಿಕ ಶಕ್ತಿಯನ್ನು ಪಡೆದುಕೊಳ್ಳುವುದು ನಂತರ ಸಮಾಜಿಕ, ರಾಜಕೀಯ ಶಕ್ತಿ ಪಡೆಯುವ ಪ್ರಯತ್ನಗಳು ನಡೆಯುತ್ತವೆ. ತಮ್ಮ ಗುಂಪಿನ ನಾಯಕನನ್ನು ಆಯ್ಕೆ ಮಾಡಿಕೊಳ್ಳುವ ಉದ್ದೇಶದಿಂದ ಕೆಲವು ವೇಳೆ ತಮ್ಮ ಗುಂಪಿನ ವ್ಯಕ್ತಿಯಲ್ಲಿ ನಾಯಕನಾಗುವ ಅರ್ಹತೆಗಳಿಲ್ಲದಿದ್ದರೂ ಆಯ್ಕೆಯಾಗುವ ಅನಿವಾರ್ಯತೆ ತೋರುತ್ತಾರೆ. ಈ ರೀತಿ ವೀರರ ಆರಾಧನಾ ಸಮೂಹದಿಂದ ಸಾಮಾಜಿಕ, ಆರ್ಥಿಕ, ರಾಜಕೀಯ ಶೈಕ್ಷಣಿಕ ಇಚ್ಛಾಶಕ್ತಿ ಪ್ರಗತಿ ಪಥದಲ್ಲಿ ಮುನ್ನಡೆಯುತ್ತದೆ. ವೀರರ ವಂಶಜರನ್ನು ಮುಖಂಡರನ್ನಾಗಿ ನೇಮಿಸಿಕೊಳ್ಳುವುದು, ಅದಕ್ಕೆ ಪೂಜಾರರು, ಗೌಡರು ನೇಮಕವಾಗುವುದು ನಡೆಯುತ್ತದೆ. ಇವರ ವಂಶಜರಲ್ಲಿಯೇ ವೀರರ ಬಗೆಗಿನ ಕತೆ, ಐತಿಹ್ಯ ತಾಳೆಗರಿ, ತಾಮ್ರ ಶಾಸನ ಮೊದಲಾದಲುಗಳು ಇರುತ್ತವೆ. ಉದಾಹರಣೆಗೆ ಮರಡಿ ಗುಡ್ಡದ ರಂಗನಾಥನ ಒಕ್ಕಲಲ್ಲಿ, ಮಾಗೋಡು ರಂಗನಾಥ, ಜುಂಜಪ್ಪನ ಒಕ್ಕಲಿನಲ್ಲಿ ಇದನ್ನು ಕಾಣಬಹುದು.

ಜುಂಜಪ್ಪ, ಎತ್ತಪ್ಪರು ತಮ್ಮ ಜನಾಂಗಕ್ಕೆ ತನ್ನದೇ ಆದ ಮತ್ತು ವ್ಯವಸ್ಥಿತವಾದ ಸಂಪ್ರದಾಯ ಆಡಳಿತ ಕ್ರಮವನ್ನು ರೂಪಿಸಿದರು. ಈ ಸಂಘಟನೆ ಆಂತರಿಕ ಮತ್ತು ಬಾಹ್ಯ ರಕ್ಷಣೆಯ ದೃಷ್ಟಿಯಿಂದ ಇದು ಅವಶ್ಯಕವಾಗಿದೆ. ತಮ್ಮ ಗುಂಪಿನ ನಾಯಕನಿಗೆ ಎಲ್ಲಾ ರೀತಿಯಿಂದಲೂ ಗೌರವ ಕೊಡುವುದು, ಹಟ್ಟಿಯ ಯಾವುದೇ ಒಳ ಜಗಳಗಳಾದರೂ ಹಟ್ಟಿ ಪಂಚಾಯ್ತಿಯ ಮೂಲಕ ಬಗೆಹರಿಸಿಕೊಳ್ಳುತ್ತಿದ್ದರು. ಗಂಭೀರ ವಿಚಾರಗಳಿದ್ದರೆ ಗುಡಿಕಟ್ಟೆ ಮತ್ತು ಕಟ್ಟೆ ಮನೆಗಳಿಗೆ ಹೋಗುತ್ತಿದ್ದರು. ಬಿಗಿಯಾದ ಕಟ್ಟು ಕಟ್ಟಲೆಗಳು ದಂಡ ಬಹಿಷ್ಕಾರಗಳಿಗೆ ಹೆದರಿ ಬುಡಕಟ್ಟು ಸಂಸ್ಕೃತಿಯ ಸಾಮಾಜಿಕ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದರು ಹಟ್ಟಿಯ ಮುಖಂಡ ಪ್ರಮಾಣಿಕವಾಗಿ ಮತ್ತು ನಿಷ್ಪಕ್ಷ ಪಾತವಾಗಿ ಆಡಳಿತ ನಡೆಸುತ್ತಿದ್ದ. ಹಟ್ಟಿಯ

ಯಾವುದೇ ಹಬ್ಬ ಜಾತ್ರೆ ಮದುವೆ ಮಂಗಳ ಕಾರ್ಯಗಳನ್ನು ಹಟ್ಟಿಯ ಯಜಮಾನನ ಮುಖಂಡತ್ವದಲ್ಲೇ ನಡೆಯುತ್ತಿದ್ದವು. ಎಂತಹ ಕಷ್ಟ ನಷ್ಟಗಳು ಬಂದರೂ ಸಮುದಾಯದ ಗುಟ್ಟನ್ನು ಹಾಗೂ ಪಾವಿತ್ರತೆಯನ್ನು ಕಾಪಾಡಿಕೊಳ್ಳುತ್ತಿದ್ದರು. ನ್ಯಾಯ ನಿರ್ಣಯ ಮತ್ತು ರಾಜಕೀಯ ವ್ಯವಸ್ಥೆಯಲ್ಲಿ ತಪ್ಪಿತಸ್ಥರಿಗೆ ದಂಡ, ಶಿಕ್ಷೆ ಹಾಗೂ ಬಹಿಷ್ಕಾರ ವಿಧಿಸುವ ವಿಶೇಷ ಅಧಿಕಾರವನ್ನು ಹಟ್ಟಿಯ ಯಜಮಾನ ಅಥವಾ ಗೌಡನಿಗೆ ಕೊಡಲಾಗಿತ್ತು. ಕೆಲವೊಂದು ಸಲ ಇವರ ರಾಜಕೀಯ ಕ್ರಮ ಹೇಗಿತ್ತೆಂದರೆ ಹಟ್ಟಿಯ ಗೌಡ ನ್ಯಾಯ ತೀರ್ಮಾನ ಕೊಡುವಾಗ ತನ್ನ ಮಗನನ್ನೇ, ತಮ್ಮನನ್ನೇ ಸೊಸೆಯನ್ನೇ ತಪ್ಪಿತಸ್ಥರೆಂದು ತೀರ್ಮಾನಿಸಿ ದಂಡ ವಿದಿಸುತ್ತಿದ್ದರು.

ಸ್ವಾತಂತ್ರ್ಯಾನಂತರ ಪ್ರಜಾಪ್ರಭುತ್ವ ಸರ್ಕಾರ ಚುನಾವಣೆ ವ್ಯವಸ್ಥೆ ಜಾರಿಗೆ ತಂದಾಗಲೂ ಕೂಡ ಈ ಜನಾಂಗಗಳು ಮಾಡಿಕೊಂಡ ಗೌಡ ಯಜಮಾನರ ಮೇಲಿನ ಗೌರವದಿಂದ ಆತ ಸೂಚಿಸಿದ ಪಕ್ಷ ಅಥವಾ ವ್ಯಕ್ತಿಗೆ ಮತ ಹಾಕುತ್ತಾ ಬಂದರು. ಕಾಲಕ್ರಮೇಣ ಮುಖಂಡರೇ ತಮ್ಮ ಜನಾಂಗಕ್ಕೆ ದ್ರೋಹ ಬಗೆಯಲು ಪ್ರಾರಂಭಿಸಿದಾಗ ವಿದ್ಯಾವಂತ ಯುವಕರು ಪ್ರತಿಭಟನೆ ಮಾಡಬೇಕಾಯಿತು. ನಂತರ ಈ ಜನಾಂಗಗಳ ಐಕ್ಯತೆ, ನಾವು, ನಮ್ಮವರೆಂಬ ಭಾವನೆಗಳು ಕಣ್ಮರೆಯಾಗುತ್ತಾ ವಿಘಟನೆಗಳು ಪ್ರಾರಂಭವಾದವು. ಪ್ರಜಾಪ್ರಭುತ್ವ ನೀತಿ ಧೋರಣೆಗಳನ್ನು ಅರ್ಥ ಮಾಡಿಕೊಂಡ ಯುವ ಜನಾಂಗ ತಾವೇ ಚುನಾವಣೆಗೆ ನಿಲ್ಲಲು ಮುಂದಾಗಿ ಗ್ರಾಮ ಪಂಚಾಯ್ತಿ, ತಾಲ್ಲೂಕು, ಜಿಲ್ಲಾ, ವಿಧಾನಸಭೆ, ಲೋಕಸಭೆ ಚುನಾವಣೆಗಳಲ್ಲಿ ನಿಲ್ಲಲು ಮುಂದಾಗಿ ಗೆದ್ದು ಹಳ್ಳಿಯಿಂದ ದಿಲ್ಲಿವರೆಗೂ ಆಡಳಿತ ನಡೆಸುವಂತಹ ಹೆಸರಾಂತ ರಾಜಕಾರಣಿಗಳು ಹುಟ್ಟಿಕೊಂಡರು. ಪ್ರತಿಯೊಂದು ಗೊಲ್ಲರ ಹಟ್ಟಿಗಳಲ್ಲಿ ಒಬ್ಬ ಯಜಮಾನ ಇರುತ್ತಾನೆ. ಸಾಮಾನ್ಯವಾಗಿ ಅಲ್ಲಿನ ದೈವಕ್ಕೆ ಅವನೇ ಅರ್ಚಕ. ಸಣ್ಣ ಪುಟ್ಟ ನ್ಯಾಯಗಳನ್ನು ಇವನೇ ತೀರ್ಮಾನಿಸುತ್ತಾನೆ. ದೊಡ್ಡ ದೊಡ್ಡ ನ್ಯಾಯಗಳಿಗೆ ಕಟ್ಟೆಮನೆಗಳಾದ ಸಿರಾ ತಾಲ್ಲೂಕಿನ ಬೇವಿನಹಳ್ಳಿ, ಗುಬ್ಬಿ ತಾಲ್ಲೂಕಿನ ಹಾಗಲವಾಡಿ ಮತ್ತು ಮಾಗಡಿಗಳಿಗೆ ಹೋಗುತ್ತಾರೆ. ಜುಂಜಪ್ಪನ ಹೆಸರಿನಲ್ಲಿ ಪ್ರಮಾಣವನ್ನು ಸ್ವೀಕರಿಸಿ ನ್ಯಾಯ ವಿಚಾರಣೆಗೆ ನಡೆಯುತ್ತದೆ. ಆದರೆ ಕಟ್ಟೆಮನೆಯ ನ್ಯಾಯ ತೀರ್ಮಾನಕ್ಕೆ ಮೊದಲು ಕೊಡುತ್ತಿದ್ದ ಗೌರವವನ್ನು ಇಂದು ಕಾಡುಗೊಲ್ಲರು ಕೊಡುತ್ತಿಲ್ಲ. ಆದರೂ ಇಂದಿಗೂ ಕಟ್ಟೆಮನೆಗಳಲ್ಲಿಯೇ ತಮ್ಮ ಜಗಳಗಳಿಗೆ ನ್ಯಾಯ ದೊರಕಿಸಿಕೊಳ್ಳುವವರೂ ಇದ್ದಾರೆ. ಕಾಡುಗೊಲ್ಲರ ನ್ಯಾಯ ತೀರ್ಮಾನ ಎಂತಹದ್ದೆಂದರೆ ಅವರು ಹಾಲು ಅನ್ನ ಉಂಬೋರು, ಕುಂತು ನ್ಯಾಯ ಮಾಡೋರು, ತುಪ್ಪ ಅನ್ನ ಉಂಬೋರು, ಕುಂತು ನ್ಯಾಯ ಮಾಡೋರು ಇವರಲ್ಲಿ ಹತ್ತಿದ ಜಗಳ ಅಷ್ಟು ಬೇಗ ಬಗೆಹರಿಯುವುದಿಲ್ಲ, ಕರಿಕಂಬಳಿ ಹಾಸಿ ನ್ಯಾಯಕ್ಕೆ ಕೂತರು ಅಂದರೆ ಹೊತ್ತು ಹೋದದ್ದು ಅವರ ಪರಿವಿಗೇ ಬರುವುದಿಲ್ಲ "ಗೊಲ್ಲರ ನ್ಯಾಯ ಊರೋರಿಗೆ ತಿಳಿಯಲ್ಲ, ಗೊಲ್ಲರಿಗೆ ಹರಿಯಲ್ಲ. ಗೊಲ್ಲರಿಗೆ ಇಕ್ಕಿದ್ರೆ ಒಂದು ನ್ಯಾಯ ದೇವರು ಮಾಡಿದ್ರೆ ಒಂದು ಕಥೆ ಹೇಳಿದ್ರೆ

ಒಂದು ನ್ಯಾಯ.[3] ಜನಪದ ಸಾಂಸ್ಕೃತಿಕ ವೀರರ ಅಸ್ತಿತ್ವ ಜನಸಾಮಾನ್ಯರ ದಿನ ನಿತ್ಯದ ಬದುಕಲ್ಲಿ ಬೆಸೆದುಕೊಂಡಿದೆ. ಮುಂಜಾನೆ ಏಳುವಾಗ ಪ್ರಾರಂಭವಾದ ಅವರ ಸ್ಮರಣೆ ಬದುಕಿನ ಪ್ರತೀ ಹೆಜ್ಜೆಯಲ್ಲಿಯೂ ತೋರುಗಂಬವಾಗಿ ನಿಂತಿದ್ದಾರೆ. ಪ್ರತಿಯೊಂದು ಆಚರಣೆ, ಕಷ್ಟ, ಸುಖ, ಏಳು ಬೀಳುಗಳಲ್ಲಿ ಈ ವೀರರ ಬದುಕು ಜನಪದರಿಗೆ ಸ್ಫೂರ್ತಿಯಾಗಿ ನಿಂತಿದೆ. ಎಷ್ಟೇ ಆಧುನೀಕತೆಯ ಪ್ರಭಾವವಾದರೂ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಪ್ರಗತಿಗಳಾದರೂ ಆಳದಲ್ಲಿಯ ತಾಯಿಬೇರಿನಂತೆ, ಕರುಳುಬಳ್ಳಿಯ ಸಂಬಂಧದಂತೆ ಸಮಾಜದೊಂದಿಗೆ ಇವರ ನಂಟು ಸೇರಿಕೊಂಡಿದೆ. ಹೀಗಿರುವಾಗ ಈ ವೀರರ ಅಸ್ತಿತ್ವ ಸರ್ವಕಾಲಿಕವಾದದ್ದು. ಹೊರನೋಟಕ್ಕೆ ಒಂದು ಕಡೆ ಗುಡಿ ಗೋಪುರಗಳು, ಬಾಹ್ಯ ಕುರುಹುಗಳು ಸಂಪೂರ್ಣ ನಾಶವಾಗುತ್ತಿರುವುದು ಸತ್ಯ ಸಂಗತಿಯಾದರೂ ಆಂತರಿಕ ನೆನಪು ಭದ್ರವಾಗಿ ಬೇರೂರಿವೆ. ಅರ್ಥಪೂರ್ಣವಾಗಿ ಮರೆಯಲೂ ಆಗದ, ಇತ್ತ ಪೂರ್ಣ ಆ ಹಿಂದಿನ ಅವರ ಆಚಾರ ವಿಚಾರಗಳಿಗೆ ಹೊಂದಿಕೊಳ್ಳಲೂ ಆಗದ ಸನ್ನಿವೇಶದಲ್ಲಿ ಹಳತು ಹೊಸತುಗಳ ಸಮತೂಕಕ್ಕೆ ಮುಂದಾಗಿದ್ದಾರೆ. ತಮ್ಮ ಸ್ವತ್ತುಗಳಿಗೆ, ವ್ಯಾಪಾರ ಮಳಿಗೆಗಳಿಗೆ, ಮಕ್ಕಳಿಗೆ ವೀರರ ಹೆಸರನ್ನಿಡುವ, ವೀರರಿಗಾಗಿ ನೆನಪಿನ ಸ್ಮಾರಕಗಳ ರೂಪದಲ್ಲಿ ದೇವಾಲಯ, ಛತ್ರ, ಛಾವಡಿಗಳನ್ನು ಕಟ್ಟಿಸಲಾಗುತ್ತದೆ. ಹೀಗೆ ವೀರರ ಅಸ್ತಿತ್ವ ಬಿಡಿಸಲಾಗದ ಬಂಧವಾಗಿದೆ. ಸಾಮಾಜಿಕವಾಗಿ ಕುಟುಂಬ, ನ್ಯಾಯ, ಉದ್ಯೋಗಗಳಲ್ಲಿ ಮಾರ್ಗದರ್ಶಕವಾಗಿ ಧಾರ್ಮಿಕವಾಗಿ ಪೂಜೆ ಪುರಸ್ಕಾರ, ಹಬ್ಬ ಹರಿದಿನ, ಉತ್ಸವ ಆಚರಣೆಗಳಲ್ಲಿ ಮಾರ್ಗದರ್ಶಕವಾಗಿ ಸಾಹಿತ್ಯದಲ್ಲಿ ಜನಪದ ಹಾಡು, ಒಗಟು, ಕಥೆ, ಕಾವ್ಯಗಳ ಮೂಲಕ ಸ್ಫೂರ್ತಿ ಶಕ್ತಿಯಾಗಿ ಪ್ರತಿಯೊಂದು ಚಟುವಟಿಕೆಗಳ ಆರಂಭದ ಶಕ್ತಿಯಾಗಿ ವೀರರ ಅಸ್ತಿತ್ವ ಉಳಿದುಕೊಂಡಿದೆ ಹೀಗಾಗಿ ಈ ವೀರರ ಓದು ಅವರ ಬದುಕು ಕುರಿತ ಅರಿವು ಸಮಾಜಕ್ಕೆ ಹೊಸ ಸ್ವರೂಪದಲ್ಲಿಬೇಕಾಗಿದೆ. ಇವರ ಬದುಕು ಎಂದೋ ನಡೆದ ಕಟ್ಟುಕತೆಗಳಾಗದೆ ಸ್ಫೂರ್ತಿದಾಯಕ ಶಕ್ತಿಗಳಾಗಿವೆ.

ಸಾಂಸ್ಕೃತಿಕ ವೀರರ ಬದುಕಿನ ರೀತಿ ತತ್ವಾದರ್ಶಗಳು ಅಂದಿನ ಹಾಗೂ ಅವರ ನಂತರದ ಸಮಾಜದ ಮನಸ್ಸನ್ನು ಗೆದ್ದಿದೆ. ಅವರು ಸಮಾಜಕ್ಕಾಗಿ ತಮ್ಮದೆ ಆದ ಕಾಣಿಕೆಯನ್ನು ತೆತ್ತಿದ್ದಾರೆ. ಅದು ವಸ್ತು ಒಡವೆಗಳ ರೂಪದ್ದಲ್ಲ, ಸಂಸ್ಕೃತಿಗೆ ಸಂಬಂದಿಸಿದ್ದು. ಅವರು ಎದುರಿಸಿದ ಸವಾಲುಗಳು, ಆ ಸಂದರ್ಭದ ಅವರ ಸೋಲು ಗೆಲುವುಗಳು ಅವರ ಹಠ ಇತರರ ಮನಸ್ಸನ್ನು ಸೆಳೆಯಬಲ್ಲಂತವುಗಳು ದಿಬ್ಬದ ವೀರಬೊಮ್ಮಣ್ಣ ತನ್ನ ಮನೆಯ ಕಂದನಿಗೆ ಕುಡಿಯಲು ಹಾಲಿಲ್ಲವಲ್ಲಾ ಎಂಬ ಕಾರಣಕ್ಕೆ ಮನೆ ಬಿಟ್ಟು ಹೋಗಿ ಗೊಲ್ಲರ ಮನೆಯಲ್ಲಿ ಗೋಪಾಲಕನಾಗಿ ಸೇರಿಕೊಂಡು ನಂತರ ತಾನು ಕಾಯುತ್ತಿರುವ ಗೋವುಗಳನ್ನೇ ಹೊಡೆದುಕೊಂಡು ಬರುವುದು. ಇಲ್ಲಿ ವೀರಬೊಮ್ಮಣ್ಣ ಗೋವುಗಳ ಕಳ್ಳತನ ಮಾಡಿದ ಎಂದು ಜನಪದರರಿಗೆ ಅನ್ನಿಸುವುದೇ ಇಲ್ಲ. ಬದಲಾಗಿ ಇವನು ಗೋವುಗಳನ್ನು ಹೊಡೆದು ತರುವಾಗ ಗಂಗೆ ಅಡ್ಡವಾದಳು, ಹಿಂದಿನಿಂದ

ಗೊಲ್ಲರು ಅಟ್ಟಿಸಿಕೊಂಡು ಬರುತ್ತಿದ್ದರು. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಸಿಕ್ಕ ವೀರಬೋಮ್ಮಣ್ಣ ತನ್ನ ತಲೆಯನ್ನೇ ತೆಗೆದು ಗಂಗೆಗೆ ನೈವೇದ್ಯ ಮಾಡುವುದು, ನಂತರ ಅಪಾಯದಿಂದ ಪಾರಾಗಿ ನದಿ ದಾಟುವುದು ಜಾನಪದರು ವೀರಬೊಮ್ಮಣ್ಣನಲ್ಲಿ ಕಂಡ ವೀರತ್ವ. ಮಹಾಭಾರತದ ದುರ್ಯೋಧನ ದುಷ್ಟನಾದರೂ, ಅಸತ್ಯ ಪರನಾದರೂ ಅವನ ಛಲದ ಗುಣ ಅವನನ್ನು ಒಬ್ಬ ವೀರನಂತೆ ಪ್ರತಿಬಿಂಬಿಸಬಲ್ಲದೋ ಅದೇ ರೀತಿ ಇಲ್ಲಿ ವೀರಬೊಮ್ಮಣ್ಣ ಒಬ್ಬ ವೀರನೆನಿಸಿದ. ತಮ್ಮ ಜನಾಂಗದ ಒಬ್ಬ ವ್ಯಕ್ತಿ ಹಟಕ್ಕೆ ಬಿದ್ದು ಏನೆಲ್ಲಾ ತೊಂದರೆ ಅನುಭವಿಸಿ ಕೊನೆಗೆ ಗೋವುಗಳ ಹೊಡೆದು ತರುವಲ್ಲಿ ಸಫಲನಾದಾಗ ಅವನಿಗೆ ಎಲ್ಲಿಲ್ಲದ ಗೌರವ ದೈವತ್ವ ಪ್ರಾಪ್ತವಾಯಿತು. ಇಲ್ಲಿ ವೀರಬೊಮ್ಮಣ್ಣ ಕತ್ತಿ ಹಿಡಿದು ಹೋರಾಡಿದವನಲ್ಲ. ಹಣಬಲ, ಜನಬಲದಿಂದ ದೊರೆಯಾಗಿ ಆಳಿದವನಲ್ಲ. ಇಂದು ಡಾ.ರಾಜ್‌ಕುಮಾರ್ ನಮ್ಮ ಪೀಳಿಗೆಯ, ನಾಡಿನ ನಾಯಕನಂತೆ ಬಿಂಬಿತವಾಗಿರುವುದೂ ಆತನ ಹೋರಾಟದ ಬದುಕಿನಲ್ಲಿ ಏಳುಬೀಳುಗಳನ್ನೆದುರಿಸಿ, ನಿರಕ್ಷರಸಾಕ್ಷಿಯಾದರೂ ತನ್ನ ಹುಟ್ಟು ಪ್ರತಿಭೆಯಿಂದ ಜನಮನವನ್ನು ಗೆದ್ದು ನಾಯಕನಾದಂತೆ, ಅಂದು ಬದುಕಿದ ಸಾಂಸ್ಕೃತಿಕ ವೀರರು ಅಂದಿನ ಜನರನ್ನು ತಮ್ಮ ಗುಣ ಸ್ವಭಾವದಿಂದ ಗೆದ್ದವರು. ಸಮಾಜದ ಶಾಂತಿಯನ್ನು ಬಯಸುವ ಗುರುಗುಂಡುರು, ಪಶುಪಾಲನೆಯಲ್ಲೇ ಸಾರ್ಥಕತೆ ಕಂಡ ಎತ್ತಪ್ಪ, ಜುಂಜಪ್ಪ, ಪತಿಯ ಹಿಂದೆ ಸತಿಯಾದ ಬರಗೂರು ವೀರಮ್ಮ, ತಮ್ಮ ತಂಗಿಯನ್ನು ಜೂಜಿನ ಪಣವಾಗಿ ಇಡು ಎಂದು ಕೇಳಿ ಅವಮಾನ ಪಡಿಸಿದನು ತನ್ನ ಸೋದರ ಬಾವಮೈದುನ ಎಂದು ಅವನ ಮೇಲೆ ಜಿದ್ದಿಗೆ ಬಿದ್ದ ರಂಗಪ್ಪನಾಯಕ ಇವರೆಲ್ಲರ ವೀರತ್ವದ ಮೌಲ್ಯಗಳು ಒಂದು ತೆರನಾದವುಗಳಲ್ಲ.

ಸಾಂಸ್ಕೃತಿಕ ವೀರರು ಗತಿಸಿ ಶತಮಾನಗಳು ಸಂದಿವೆಯಾದರೂ ಸಮಾಜದ ಮೇಲಿನ ಹಿಡಿತವನ್ನು ಇವರು ಕಳೆದುಕೊಂಡವರಲ್ಲ. ಕಂಪ್ಯೂಟರಿನ ಕೀಬೋರ್ಡಿನಂತೆ ಕಾರ್ಯ ನಿರ್ವಹಿಸುತ್ತಲೇ ಇರುವರು. ಇವರು ಸಾಮಾಜಿಕ, ಧಾರ್ಮಿಕ ವಲಯದಲ್ಲಿ ಹೆಚ್ಚು ಅಸ್ತಿತ್ವ ಪಡೆದವರು ಈ ಮಧ್ಯೆ ಎಲ್ಲಾ ರಂಗಗಳಲ್ಲೂ ಪಲ್ಲಟಗಳಾಗಿವೆ. ಇದರ ನಡುವೆಯೂ ಈ ವೀರರು ಅಸ್ತಿತ್ವ ಉಳಿಸಿಕೊಂಡಿದ್ದಾರೆ. ನಿರಕ್ಷರಿಗಳ, ಗ್ರಾಮೀಣರ ಬದುಕು ಇವರೊಂದಿಗೆ ಬೆಸೆದುಕೊಂಡಿದೆ. ದಿನಬೆಳಗಾದರೆ ಸ್ಥಳೀಯ ವೀರರ ನೆನಪು ಅವರ ಬದುಕಿನ ಪ್ರತೀ ಹೆಜ್ಜೆಯಲ್ಲೂ ವೀರನಾಯಕರ ಆದರ್ಶ ಮೇಳೈಸಿಕೊಂಡಿದೆ. ಶಿಷ್ಟ ದೇವತೆಗಳೆಂದು ಗುರ್ತಿಸುವ ಶಿವ, ರಾಮ, ಕೃಷ್ಣರಿಗೆ ಯಾವುದೇ ರೀತಿಯಲ್ಲಿ ಕಡಿಮೆ ಇಲ್ಲದಂತೆ ಈ ವೀರರು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿದ್ದಾರೆ. ಈ ವೀರರನ್ನು ದೈವವೆಂದು ಪೂಜಿಸಿಕೊಂಡು ಬಂದವು ಒಕ್ಕಲಿಗರ, ಕುಂಚಿಟಿಗ ಹಾಗೂ ಕಾಡುಗೊಲ್ಲ ಜನಾಂಗಗಳು. ಉದಾಹರಣೆಗೆ ಕುಂಚಿಟಿಗರು ವೀರಬೊಮ್ಮಣ್ಣ, ಬೊಪ್ಪರಾಯ, ವೀರಬಡಣ್ಣ, ಬರಗೂರು ವೀರಮ್ಮ, ವೀರಖ್ಯಾತರಾಯ, ತಾಯಿ ವೀರಮ್ಮ ಮೊದಲಾದವರು.

ಇನ್ನು ಕಾಡುಗೊಲ್ಲರ ದೈವ ಗೋವುಗಳನ್ನು ಮೇಯಿಸಲು ಹೋಗಿ ಅಕಾಲ ಮರಣ ಹೊಂದಿದವರೂ ವೀರಗಾರರೇ. ಜನಾಂಗೀಯ ರಕ್ಷಣೆಗಾಗಿ ಹೋರಾಡಿದ ಜುಂಜಪ್ಪ, ಎತ್ತಪ್ಪರ ಜೊತೆ ಜೊತೆಗೆ ಪ್ರತಿಯೊಂದು ಗೊಲ್ಲರ ಹಟ್ಟಿಯಲ್ಲಿಯೂ ಒಂದಲ್ಲಾ ಒಂದು ಸ್ಥಳೀಯ ವೀರರ ದೈವ ಆರಾಧಿಸಲ್ಪಡುತ್ತದೆ.

ಈ ವೀರರ ಹಿನ್ನೆಲೆಯಲ್ಲಿ ಜನಾಂಗೀಯ ಅಧ್ಯಯನ ಕೈಗೊಂಡರೆ ಈ ಜನಾಂಗಗಳು ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ನಡೆಸಬೇಕಾಗಿ ಬಂದ ಹೋರಾಟದ ಒಂದು ಇತಿಹಾಸವೇ ಬಿಚ್ಚಿಕೊಳ್ಳುತ್ತವೆ. ಇದನ್ನು ಜನಪದ ವೀರರ ಕತೆ, ಗೀತೆ, ಪದಗಳಲ್ಲಿ ನೆನಪಾಗಿ ಉಳಿಸಿಕೊಂಡಿದೆ. ಶಿಷ್ಟ ಇತಿಹಾಸಕ್ಕೆ ತದ್‌ವಿರುದ್ಧವಾಗಿ ಜನ ಸಾಮಾನ್ಯರ ಹೋರಾಟದ ಇತಿಹಾಸ ದಾಖಲಾಗಿದೆ. ಈ ವೀರರ ಅಧ್ಯಯನ ಹೊಸ ಇತಿಹಾಸದ ದೃಷ್ಟಿಕೋನವನ್ನು ಹುಟ್ಟಿಹಾಕುತ್ತದೆ. ಇರುವ ಇತಿಹಾಸವನ್ನು ಪುನರ್ ಕಟ್ಟಲು, ಪರಾಮರ್ಶಿಸಲು ಪ್ರೇರೇಪಿಸುತ್ತದೆ. ಆ ಮೂಲಕ ಹೆಚ್ಚು ವಾಸ್ತವೀಕರಣಗೊಳ್ಳುತ್ತದೆ. ಇತಿಹಾಸವನ್ನು ಬಲಿಷ್ಠರ ಕೇಂದ್ರದಿಂದ ಜನಸಾಮಾನ್ಯರ ಕಡೆಗೆ ಕೊಂಡೊಯ್ಯುವ ಕಾರ್ಯ ಮಾಡುತ್ತದೆ. ವೀರರ ಈ ಗುಡಿ, ಗೋಪುರಗಳು ಜಾನಪದ ಇತಿಹಾಸದ ಪಳೆಯುಳಿಕೆಗಳಾಗಿ ಉಳಿದುಕೊಂಡು ಭಕ್ತಿಯ ನೆಪದಲ್ಲಿ ಸತ್ಯವನ್ನು ಎತ್ತಿ ಹೇಳುತ್ತಿವೆ. ಆದ್ದರಿಂದಲೇ ಜನಸಾಮಾನ್ಯರು ಕಾಲ ಎಷ್ಟೇ ಬದಲಾದರೂ ಈ ವೀರರ ಕರುಳುಬಳ್ಳಿಯ ಸಂಬಂಧವನ್ನು ಕಡಿದುಕೊಂಡು ಹೊರಬರಲಾಗುತ್ತಿಲ್ಲ.

ಸಾಂಸ್ಕೃತಿಕ ವೀರರು ಯಾವುದೇ ಪ್ರಭಲ ಮತ ಧರ್ಮದ ಕೋಮು ಭಾವನೆಯ ಅಫೀಮಿಗೆ ಬಲಿಯಾಗದೆ ತಮ್ಮದೇ ಆದ ತತ್ವ ಸಿದ್ಧಾಂತಗಳನ್ನು ರೂಪಿಸಿಕೊಂಡವರು. ನಮ್ಮದೇ ಆದ ಮೌಲ್ಯಗಳನ್ನು ಸೃಷ್ಟಿಸಿಕೊಂಡವರು. ಅವುಗಳನ್ನೇ ನಂಬಿ ಬದುಕಿದವರು.

ಈ ವೀರರು ಗ್ರಾಮೀಣ ಪ್ರದೇಶದ ನಿರಕ್ಷರ ಬಡ, ಬಯಲು ಸೀಮೆಯಲ್ಲಿ ಕೇಂದ್ರೀಕೃತವಾಗಿ ಹೆಚ್ಚು ಅಸ್ತಿತ್ವ ಪಡೆದಿದ್ದಾರೆ. ಶಿಷ್ಟ ಇತಿಹಾಸಕ್ಕೆ ಈ ವೀರರ ವೀರತ್ವ, ಸಾಧನೆ ಮುಖ್ಯವಾಗಿ ಕಾಣಲಿಲ್ಲ. ಈ ವೀರರ ಕೇಂದ್ರಗಳು ಇಂದಿಗೂ ಅದೇ ಹಾಳುಬಿದ್ದ ಸ್ವರೂಪದಲ್ಲಿ ಬಡವರು, ನಿರಕ್ಷರಿಗಳು ವಾಸಿಸುವ ಪ್ರದೇಶಗಳಲ್ಲಿವೆ. ಈ ವೀರರಿಗೆ ಯಾವುದೇ ರೀತಿಯ ಶ್ರೀಮಂತರ, ಆಡಳಿತ ವರ್ಗದ, ವ್ಯಾಪಾರಗಾರರ ಬೆಂಬಲವಿರಲಿಲ್ಲ. ಇವರು ವ್ಯವಸ್ಥೆಯನ್ನು ಪ್ರತಿಭಟಿಸಿ ಪ್ರತ್ಯೇಕವಾಗಿ ನಿಂತವರು. ವೀರರಿಗೆ ಇಂದಿಗೂ ಅರ್ಪಿಸುವ ಹರಕೆ ಈ ಭಾಗದಲ್ಲಿ ಬೆಳೆವ ಬೆಳೆಗಳನ್ನು ಅಂದಿನ ಮತ್ತು ಇಂದಿನ ಬೆಳೆಗಳನ್ನು ಪ್ರತಿನಿಧಿಸುತ್ತವೆ. ಉದಾಹರಣೆಗೆ ಜುಂಜಪ್ಪನಿಗೆ ಹರಕೆ ಹೊರುವವರು ಹರಳು, ಹತ್ತಿ, ಕಡಲೆಕಾಯಿ, ತುಪ್ಪ, ಹಾಲು ಮೀಸಲು ಕೊಡುತ್ತಾರೆ.

ವೀರರಲ್ಲಿ ಕೆಲವು ಇತ್ಯಾತ್ಮಿಕ ಗುಣಗಳೂ ಇವೆ. ಆದರೆ ಜನಪದರಿಗೆ ಇವು ಗೌಣವಾಗುತ್ತವೆ. ಹಾಗೆಂದು ವೀರರು ಮಾಡಿದ್ದೆಲ್ಲವು ಸರಿ ಎಂಬ ತೀರ್ಮಾನಕ್ಕೆ ಬರಬೇಕಾಗಿಲ್ಲ. ವಾಸ್ತವ ಬದುಕಿನ

ಹೋರಾಟದಲ್ಲಿ ಅವರು ಎದುರಿಸಿದ ಸಂಘರ್ಷ ಸ್ವರೂಪ ಇಲ್ಲಿ ಮುಖ್ಯವಾಗುತ್ತದೆ. ಇಲ್ಲಿ ರಂಗಪ್ಪ ನಾಯಕ ಮಾಡಿದ್ದೇ ಸರಿ ಎಂದು ತೀರ್ಮಾನಿಸಲು ಸಾಧ್ಯವಿಲ್ಲ. ವೀರರಲ್ಲಿನ ಕೆಲವು ಅವಗುಣಗಳನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಅವರ ಅಂದಿನ ಬದುಕನ್ನು ಇಂದಿನ ದಿನದಲ್ಲಿ ನಿಂತು ಅವಲೋಕಿಸಿದಾಗ ಇವರು ವೀರರೇ ಎಂಬ ಪ್ರಶ್ನೆ ಏಳುತ್ತದೆ. ಆದ್ದರಿಂದ ಅಂದಿನ ಮೌಲ್ಯಗಳಿಗೆ ವೀರರೆನಿಸಿದವರನ್ನು ನಾವು ಇಂದು ಇವರ ಪ್ರಸ್ತುತತೆ ಏನು ಎಂದು ನೋಡಬೇಕಾಗುತ್ತದೆ. ವೀರಬೊಮ್ಮಣ್ಣ ಗೋವುಗಳನ್ನು ಕದ್ದು ತಂದ ಇದು ಕಳ್ಳತನ ಆದರೆ ಅವನು ಹಾಗೆ ತಂದುದರ ಹಿಂದಿನ ಉದ್ದೇಶ ಆ ಜನಾಂಗಕ್ಕೆ ಮುಖ್ಯವಾಯಿತು. ಶ್ರೀರಾಮವಾಲಿಯನ್ನು ಮೋಸದಿಂದ ಕೊಂದ ಅದು ಮೋಸವೇ ಆದರೆ ಅವನು ಆ ರೀತಿ ಕೊಂದುದ್ದರ ಹಿಂದಿನ ಉದ್ದೇಶ ಮುಖ್ಯವಾಗಿ ಬಿಡುತ್ತದೆ. ರಾವಣ ದುರ್ಯೋದನರೂ ಒಳ್ಳೆಯವರೇ ಆದರೆ ಅವರು ನಿಂತದ್ದು ಅಧರ್ಮದ ಪರವಾಗಿ.

ವೀರರ ಕುರಿತ ಅಧ್ಯಯನ ಎರಡು ನೆಲೆಗಳಲ್ಲಿ ಮುಖ್ಯವೆನಿಸುತ್ತದೆ. ಒಂದು ಚಾರಿತ್ರಿಕ ಮಹತ್ವದ ನೆಲೆ. ಇನ್ನೊಂದು ಸಮಕಾಲೀನ ಮಹತ್ವದ ನೆಲೆ. ಕೆಲವು ನಮ್ಮ ವೀರರು ಚಾರಿತ್ರಿಕ ಮಹತ್ವವನ್ನು ಪಡೆದುಕೊಂಡಿದ್ದು, ಸಮಕಾಲೀನ ಸಂದರ್ಭಕ್ಕೆ ಪ್ರಸ್ತುತವಲ್ಲದೆಯೂ ಇರಬಹುದು. ಇನ್ನೂ ಕೆಲವು ಸಾರಿ ಸಮಕಾಲೀನವಾಗಿ ಪ್ರಸ್ತುತವಾಗಿದ್ದು, ಅವರು ಚಾರಿತ್ರಿಕವಾಗಿ ಮಹತ್ವವೋ ಅಲ್ಲವೋ ಅನ್ನುವಂತಹ ಪ್ರಶ್ನೆಗಳು ನಮ್ಮ ಎದುರುಗಡೆ ಬರಬಹುದು. ಆದರೆ ಕೆಲವೇ ಕೆಲವರು ಮಾತ್ರವೇ ಚಾರಿತ್ರಿಕ ಮಹತ್ವ ಮತ್ತು ಸಮಕಾಲೀನ ಮಹತ್ವ ಈ ಎರಡನ್ನು ಒಟ್ಟಿಗೇ ಪಡೆಯುವುದಕ್ಕೆ ಸಾಧ್ಯ. ಇಲ್ಲಿಯವರೆಗೆ ಆಗಿ ಹೋಗಿರಬಹುದಾದ ಅನೇಕ ವೀರರ ಜೊತೆಗೆ ನಾವು ಅನುಸಂಧಾನ ನಡೆಸಿದ್ದೇವೆ. ಈ ವೀರರನ್ನು ನಮ್ಮ ಸಂದರ್ಭಲ್ಲಿ ಮತ್ತೊಮ್ಮೆ ಅರ್ಥ ಮಾಡಿಕೊಳ್ಳಬೇಕಾದ ಅಗತ್ಯ ಇದೆ. ಆರಾಧಿಸುವ ಅಗತ್ಯವಿದೆ ಎಂದಲ್ಲ, ಅವರನ್ನು ಅರ್ಥ ಮಾಡಿಕೊಳ್ಳಬೇಕಾದ ಅಗತ್ಯವಿದೆ ಎಂದರ್ಥ.

ಕೆಲವು ಸಾರಿ ಚಾರಿತ್ರಿಕವಾಗಿ ಒಬ್ಬ ವೀರ ಬಹಳ ಮಹತ್ವ ಪಡೆದಿರುವುದುಂಟು. ಆದರೆ ಇವತ್ತು ಅಷ್ಟೇ ಮಹತ್ವ ಅವನಿಗೆ ಇಲ್ಲದೆ ಇರಬಹುದು. ಆಗ ಅವನು ಕೇವಲ ಅಧ್ಯಯನದ ಆಸಕ್ತಿಗಾಗಿ ನಡೆಸುವ ಒಂದು ಅನುಸಂಧಾನ ಆಗಿರುತ್ತಾನೆ. ಸಮಕಾಲೀನ ಪ್ರಸ್ತುತತೆ ಹಾಗೂ ಚಾರಿತ್ರಿಕ ಮಹತ್ವ ಪಡೆದ ವೀರರಲ್ಲಿ ಜುಂಜಪ್ಪ, ಎತ್ತಪ್ಪ, ವೀರಬೊಮ್ಮಣ್ಣ ಮೊದಲಾದವರು ಮುಖ್ಯರಾಗುತ್ತಾರೆ. ಇವರು ನಮಗೆ ಹೆಚ್ಚು ಹತ್ತಿರವಾಗುತ್ತಾರೆ. ಎಲ್ಲೋ ಒಂದುಕಡೆ ಅವರ ಜೊತೆ ಮೌನವಾಗಿ ಮಾತನಾಡುವುದಕ್ಕೆ ಸಾಧ್ಯ. ನಮ್ಮ ಜೊತೆ ಮೌನವಾಗಿ ಮಾತುಕತೆ ನಡೆಸುವಷ್ಟರ ಮಟ್ಟಿಗೆ ಆತ್ಮೀಯತೆಯನ್ನು ಪಡೆದುಕೊಳ್ಳುತ್ತಾರೆ. ಇನ್ನು ಕೆಲವರು ಚಾರಿತ್ರಿಕವಾಗಿ ಮಹತ್ವ ಪಡೆದರೂ ನಮಗೆ ದೂರವಾಗುತ್ತಾರೆ.

ಈ ಸಾಂಸ್ಕೃತಿಕ ವೀರರು ಆಕಾಶದಿಂದ ಇಳಿದುಬಂದವರೇನಲ್ಲ ಅವರು ಈ ಭೂಮಿಯೊಳಗಿಂದ ಆಕಾಶ ಕಂಡವರು. ದೇವರೆಂದ ಭಾವಿಸಬಹುದಾದ ಪ್ರತೀಕವಾಗಿ ಬೆಳೆದು ನಿಂತ ಮನುಷ್ಯರು. ಭೂಮಿ ಬದುಕಿನೊಳಗೆ ರೂಪುಗೊಂಡ ಅಸಾಧರಣ ವ್ಯಕ್ತಿತ್ವ ಅವರದು. ಭೂಮಿಯನ್ನು ನಿಜವಾದ ಕ್ರಿಯಾ ಕ್ಷೇತ್ರವನ್ನಾಗಿ ಮಾಡಿಕೊಂಡವರು. ಹರಿಹರ ಕವಿಯ ಕೆಲವು ಪ್ರಮುಖ ರಗಳೆಗಳಾದ ಬಸವರಾಜ ದೇವರ ರಗಳೆ, ಪ್ರಭುದೇವರ ರಗಳೆ, ಅಕ್ಕಮಹಾದೇವಿಯ ರಗಳೆ ಮೊದಲಾದ ರಗಳೆಗಳ ನಾಯಕರು 'ಶಿವಗಣಂಗಳು' ಕೈಲಾಸದಲ್ಲಿ ಮಾಡಿದ ತಪ್ಪಿಗಾಗಿ ಭೂಮಿಯಲ್ಲಿ ಹುಟ್ಟಿ ಶುದ್ಧರಾಗಿ ಮತ್ತೆ ಕೈಲಾಸ ತಲುಪುತ್ತಾರೆ ಎಂಬ ಪರಿಕಲ್ಪನೆ ಇದೆಯೋ ಅದೇ ರೀತಿ ಸಾಂಸ್ಕೃತಿಕ ವೀರರಾದ ಎತ್ತಪ್ಪ, ಜುಂಜಪ್ಪ, ರಂಗನಾಥ ಮೊದಲಾದವರು ಅಲೌಕಿಕ ಹುಟ್ಟು ಪಡೆದ ದೈವ ಮಾನವರು. ಇವರ ಸುತ್ತಲೂ ದೈತ್ವದ ಪರಿಕಲ್ಪನೆ ಹೆಣೆಯಲ್ಪಟ್ಟಿದೆ.

ಕುಮಾರವ್ಯಾಸ ಭಾರತದಲ್ಲಿ ಕೃಷ್ಣ ಲೀಲಾಮಯನಾಗಿ ಚಿತ್ರಿತನಾಗಿದ್ದರೂ ಕಾವ್ಯದ ಕೃಷ್ಣ ಎಲ್ಲರಂತೆ ಎಲ್ಲರ ಜೊತೆಯಲ್ಲಿ ಬದುಕುವ ವ್ಯಕ್ತಿಯಾಗಿದ್ದಾನೆ. ಪಾಂಡವರಾದಿಯಾಗಿ ಎಲ್ಲರೂ ಆತನನ್ನು ದೈವವೆಂದು ಭಾವಿಸಿದರೂ ಸ್ವತಃ ಕೃಷ್ಣನು "ದೇವರೆಂದೇ ನೀವು ಬಗೆವಿರಿ ದೇವತನ ನಮ್ಮಲಿಲ್ಲವಲ್ಲ" ಎಂದು ಹೇಳುತ್ತಾನೆ. ಅದೇ ರೀತಿ ಜುಂಜಪ್ಪ, ಎತ್ತಪ್ಪ ವೀರಬೊಮ್ಮಣ್ಣರನ್ನು ಜನರು ದೇವರೆಂದೇ ಭಾವಿಸಿದರೂ ಅವರು ಮನುಷ್ಯರ ಜೊತೆಯಲ್ಲಿ ಮನುಷ್ಯರಾಗಿ ಬದುಕಿದವರು. ಕೆಲವು ವಿಶಿಷ್ಟ ಸನ್ನಿವೇಶಗಳಲ್ಲಿ ಅತಿಮಾನುಷತೆ ಪ್ರಕಟಗೊಂಡು ದೈವಕಲ್ಪನೆಗೆ ಕುಮ್ಮಕ್ಕು ಕೊಟ್ಟರೂ ಅವರು ಮಾನವರ ನಡುವಿನ ಅತಿಮಾನುಷರಾಗುತ್ತಾರೆಯೇ ಹೊರತು ವರಕೊಡುವುದಕ್ಕಾಗಿ ಹೊರಗೆ ನಿಂತ ದೈವವಾಗುವುದಿಲ್ಲ. ಅಂದರೆ ಇದು ನಮ್ಮ ಜನ ಮನಸ್ಸುಗಳು ದೈವವನ್ನು ದೂರದಲ್ಲಿ ನಿಲ್ಲಿಸದೆ ಸಮೀಪದಲ್ಲೆ ಸಹಜೀವಿಯಾಗಿ ಸ್ವೀಕರಿಸಿದ ವಿಶಿಷ್ಟ ಕಾಣ್ಕೆಯಾಗಿದೆ.

**ವೀರರ ಆರಾಧನಾ ಉಪ ಶಾಖೆಗಳು :** ವೀರರ ಜನಪ್ರೀಯತೆ ಹೆಚ್ಚಾದಂತೆ ಅವರ ಆರಾಧನಾ ಉಪ ಶಾಖೆಗಳು ಹೆಚ್ಚುತ್ತಾ ಹೋಗುತ್ತವೆ. ಉದಾಹರಣೆಗೆ ಜುಂಜಪ್ಪ ಎತ್ತಪ್ಪರ ಜನಪ್ರೀಯತೆ ಹೆಚ್ಚಾಗಿರುವುದರಿಂದ ಅವರ ಭಕ್ತರು ಎಲ್ಲಿಯೇ ಹೋಗಿ ನೆಲೆಸಲಿ ಅಲ್ಲಿಯೇ ಒಂದು ಗುಡಿಯನ್ನು ಕಟ್ಟಿ, ಬೆನವನನ್ನು ಇಟ್ಟು ಜುಂಜಪ್ಪನ ಆರಾಧನೆ ಪ್ರಾರಂಭಿಸುತ್ತಾರೆ. ಹೊರ ರಾಜ್ಯವಾದ ಆಂದ್ರಪ್ರದೇಶದಲ್ಲೂ ಇವರ ಆರಾಧನಾ ಶಾಖೆಗಳಿವೆ. ಬೇರೆ ಬೇರೆ ಜಿಲ್ಲೆಗಳಾದ ತುಮಕೂರು, ಚಿತ್ರದುರ್ಗಗಳಲ್ಲಿ ವಿವಿಧ ತಾಲ್ಲೂಕುಗಳಾದ ಸಿರಾ, ಮಧುಗಿರಿ, ಪಾವಗಡ, ಗುಬ್ಬಿ, ಕುಣಿಗಲ್, ಹಿರಿಯೂರು, ಚಳ್ಳಕೆರೆಗಳಲ್ಲಿ ಸ್ಥಾಪಿತವಾಗಿವೆ. ಈ ಎಲ್ಲಾ ಸ್ಥಳಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಏಕರೀತಿಯ ಆರಾಧನೆ, ಆಚರಣೆ, ಸಂಪ್ರದಾಯಗಳು ಕಂಡುಬರುತ್ತವೆ. ಜುಂಜಪ್ಪನ ಮೂಲ ನೆಲೆ ಕಳುವೊರಹಳ್ಳಿ ಎನಿಸಿದರೆ ಇತರ ಪ್ರಮುಖ ಆರಾಧನಾ ಸ್ಥಳಗಳೆಂದರೆ

ಹಾಗಲವಾಡಿ, ಬಿಜ್ಜಂಬೆಳ್ಳ, ಓಜಕುಂಟೆ, ಹಾಲೇನಹಳ್ಳಿ, ಮಾಡ್ಗನಹಟ್ಟಿ ಮೊದಲಾದವು. ಇಲ್ಲೆಲ್ಲಾ ಜಾತ್ರಾ ಮಹೋತ್ಸವಗಳೇ ನಡೆಯುತ್ತವೆ. ಇದೇ ರೀತಿ ಕಾಡುಗೊಲ್ಲರ ಹಟ್ಟಿಗಳಲ್ಲಿ ಎತ್ತಪ್ಪ ಜುಂಜಪ್ಪರ ಆರಾಧನಾ ಕೇಂದ್ರಗಳಿವೆ.

ಬರಗೂರು ವೀರಮ್ಮ, ವೀರಬೊಮ್ಮನಹಳ್ಳಿಯ ವೀರಬೊಮ್ಮಣ್ಣರ ಮೂಲ ನೆಲೆಗಳು ಊರಿಂದ ಹೊರಭಾಗದಲಿವೆ. ಸಾಂಸ್ಕೃತಿಕ ವೀರರು ಜನಪದರ ಸಮಸ್ಯೆಗಳಿಗೆ ತಕ್ಷಣ ಸ್ಪಂದಿಸುವ ದೈವಗಳಾಗಿದ್ದಾರೆ. ಕಷ್ಟಗಳನ್ನು ಎದುರಿಸುವ ಜನಪದರಿಗೆ ಈ ಕಷ್ಟಗಳು ತಲೆದೋರಿದಾಗ ಮೊದಲು ನೆನಪಾಗುವವರೇ ಸಾಂಸ್ಕೃತಿಕ ವೀರರು. ಹರಕೆ ಹೊರುವುದು, ಪೂಜೆ ಮಾಡಿಸುವುದು, ಮುಡುಪು ಕಟ್ಟುವುದು ಮೊದಲಾದವುಗಳನ್ನು ಮಾಡುತ್ತಾ ಅವರ ಮುಂದೆ ತಮ್ಮ ಸಂಕಷ್ಟಗಳನ್ನು ತೋಡಿಕೊಳ್ಳುತ್ತಾರೆ. ಕೊನೆಗೂ ಕಷ್ಟ ಪರಿಹಾರವಾಗದಿದ್ದರೆ. ದೈವ ತಮ್ಮ ಮೇಲೆ ಮುನಿಸಿಕೊಂಡಿದೆ ಎಂದು ಭಾವಿಸುತ್ತಾರೆಯೇ ಹೊರತು ವೀರರ ಮೇಲಿನ ವಿಶ್ವಾಸ ಕಳೆದುಕೊಳ್ಳುವುದಿಲ್ಲ. ಕಾಯಿಲೆ ಖಸಾಲೆಗಳು ಬಂದಾಗ ಕೊನೆಯದಾಗಿ ಆಸ್ಪತ್ರೆಗೆ ಹೋಗುತ್ತಾರೆ.

ದುಷ್ಟ ಜಂತುಗಳು ಕಾಣಿಸಿಕೊಂಡಾಗ ಜುಂಜಪ್ಪನಿಗೆ ಹರಕೆ ಹೊರುತ್ತಾರೆ. ತಮ್ಮಲ್ಲಿ ಯಾವುದೋ ತಪ್ಪಾಗಿದೆ ನಮ್ಮನ್ನು ಕ್ಷಮಿಸು ನಿನಗೆ ಬೆಳ್ಳಿಯ, ತಾಮ್ರದ, ಬಂಗಾರದ ಹಾವು, ಚೇಳು ಮಂಡರುಗಪ್ಪೆಗಳನ್ನು ಮಾಡಿಸಿಕೊಡುವುದಾಗಿ, ಜಾತ್ರೆಯ ಸಂದರ್ಭದಲ್ಲಿ ದೀಪಕ್ಕೆ ಎಣ್ಣೆ, ಅಭಿಷೇಕಕ್ಕೆ ಹಾಲು ಅರ್ಪಿಸುವುದಾಗಿ ಹರಕೆ ಹೊತ್ತು ಅದೇ ರೀತಿ ನಡೆದುಕೊಳ್ಳುತ್ತಾರೆ. ಬರಗೂರು ವೀರಮ್ಮ, ವೀರಬೊಮ್ಮಣ್ಣ, ರಂಗನಾಥ, ಬೊಪ್ಪರಾಯನ ಭಕ್ತರಲ್ಲಿ ಆರತಿ ಮಾಡುವ, ತಲೆ ಕೂದಲು ಕೊಡುವ, ಎಲೆ ಪೂಜೆ ಕಟ್ಟಿಸುವ, ಉತ್ಸವ ಮಾಡಿಸುವ, ಆಭರಣ ಮಾಡಿಸಿಕೊಡುವ, ಹೂವಿನ ತುಲಾಭಾರ ಮಾಡುವ ಮೊದಲಾದ ಹರಕೆಗಳನ್ನು ಹೊರುತ್ತಾರೆ. ಈ ರೀತಿ ಮಾಡಿದರೆ ತಮ್ಮ ಕಷ್ಟ ಹರಿಹಾರವಾಗುತ್ತದೆಂಬ ಪ್ರತೀತಿ ಇದೆ. ಒಂದು ವೇಳೆ ಕಷ್ಟ ಪರಿಹಾರವಾಗದಿದ್ದರೂ ಒಂದು ಮಾನಸಿಕ ನೆಮ್ಮದಿಯನ್ನು ಪಡೆಯುತ್ತಾರೆ. ಇದ್ದರೆ ಊರಿನ ಒಳಭಾಗದಲ್ಲಿ ಮೆರವಣಿಗೆ ದೇವತೆಗಳನ್ನಾಗಿ ಮಾಡಿ ಗುಡಿಕಟ್ಟಿದ್ದಾರೆ. ರಂಗನಾಥನ ಆರಾಧನೆ ನೆಲೆಗಳು ಗ್ರಾಮಕ್ಕೊಂದರಂತೆ ಕಂಡುಬರುತ್ತವೆ.

ವೈದೀಕರಣ ಮತ್ತು ನಾಗರೀಕರಣ ಆಧುನೀಕತೆಯ ಪ್ರಭಾವ ಜನಪದ ಸಾಂಸ್ಕೃತಿಕ ವೀರರ ಮೇಲೆ ಹೆಚ್ಚಾಗಿ ದಿನೇ ದಿನೇ ಇವರ ಅಸ್ತಿತ್ವವನ್ನೇ ಸಂಪೂರ್ಣ ಬದಲಾಯಿಸುವ ಹಂತಕ್ಕೆ ತರುತ್ತಿವೆ. ಇವುಗಳ ಪ್ರಭಾವದಿಂದ ಶಿಷ್ಟೀಕರಣಕ್ಕೆ ಒಳಗಾಗುವ ಮನಸ್ಸುಗಳ ಪ್ರಯತ್ನ ವೀರರ ರೂಪ, ಗುಣ, ಸ್ವಭಾವ, ಸೇರಿದಂತೆ ಆರಾಧನಾ ಸ್ಥಳ, ಪರಿಸರ, ಆಚರಣೆ, ಉತ್ಸವಗಳು, ಪೂಜಾ ವಿಧಾನ, ಗುಡಿ ಗೋಪುರಗಳ ಬದಲಾವಣೆಯಲ್ಲಿ ತೊಡಗಿದವು ಕಲ್ಲು ಬೆಸವನ ರೂಪದ ವೀರರು

ಇಂದು ಮನುಷ್ಯ ರೂಪದ ವಿಗ್ರಹಗಳ ಆಕಾರ ಪಡೆಯುತ್ತಿದ್ದಾರೆ. ವೀರರ ಹೋರಾಟ ಬದುಕಿನ ಕಥೆಯನ್ನು ಆಧರಿಸಿ ಅವರಿಗೆ ಒಂದು ರೂಪಕೊಡುವ ಪ್ರಯತ್ನಗಳು ನಡೆಯುತ್ತಿವೆ. ಕಳುವೊರಹಳ್ಳಿ ಜುಂಜಪ್ಪ, ವೀರಬೊಮ್ಮಣ್ಣ ಬಗೂರು ವೀರಮ್ಮ ಬೊಪ್ಪರಾಯರ ಪ್ರತಿಮೆಗಳು ಇಂದು ಶಿಷ್ಟ ದೇವತೆಗಳ ರೂಪದಲ್ಲಿ ಕಡೆಯಲ್ಪಟ್ಟು ಹೊಸ ಆಕಾರಗಳನ್ನು ಪಡೆದಿದ್ದಾರೆ.

ವೀರರ ಗುಣ ಸ್ವಭಾವಗಳಲ್ಲೂ ಬದಲಾವಣೆಗಳು ಕಂಡುಬರುತ್ತಿವೆ. ವೀರಮ್ಮ ಸಾತ್ವಿಕ ಸ್ವಭಾವದ ಶಾಂತ ಮೂರ್ತಿಯಂತೆ, ಜುಂಜಪ್ಪ ಹಾವು ಚೇಳುಗಳ ಮದ್ಯೆ ಪ್ರಸನ್ನ ಚಿತ್ತದಿಂದ ನಿಂತಿರುವಂತೆ, ಬೊಪ್ಪರಾಯ, ವೀರಬೊಮ್ಮಣ್ಣ ವೀರಾವೇಷದಿಂದ ಹೋರಾಡುತ್ತಿರುವ ಭಂಗಿಯಲ್ಲಿ ಚಿತ್ರಿಸಲಾಗಿದೆ.

ವೀರರ ಆರಾಧನಾ ಸ್ಥಳಗಳು ಈ ಮೊದಲು ಊರ ಹೊರಭಾಗದಲ್ಲಿ ಹೊಲ, ಗದ್ದೆಗಳಲ್ಲಿ ದಿಣ್ಣೆಗಳಲ್ಲಿ ಹಳ್ಳದ ದಂಡೆಗಳಲ್ಲಿ, ಗಿಡ ಮರಗಳ ಕೆಳಗೆ ಪೌಳಿಗಳನ್ನು ಮಾಡಿ ಚಿಕ್ಕ ಗುಡಿ ಕಟ್ಟಿ ಜನರು ಆರಾಧಿಸುತ್ತಿದ್ದರು, ಇಂದು ಆ ಮೂಲ ಸ್ಥಳಗಳು ಹಾಗೆಯೇ ಪಾಳುಬಿದ್ದು ಹಾಳುಸುರಿಯುತ್ತಿವೆ. ಅವುಗಳಿಗೆ ವರ್ಷಕ್ಕೊಮ್ಮೆ ಉತ್ಸವ ಜಾತ್ರೆಗಳಲ್ಲಿ ಮಾತ್ರ ಮಹತ್ವ ಬರುತ್ತದೆ. ಉಳಿದ ದಿನಗಳಲ್ಲಿ ಜನರ ನಿರ್ಲಕ್ಷ್ಯಕ್ಕೆ ಒಳಗಾಗುತ್ತವೆ. ಇವುಗಳನ್ನು ವೀರಗಾರರ ಗುಡಿಗಳೆಂದು ಕರೆಯುತ್ತಾರೆ. ಈ ಮೂಲ ಆರಾಧನಾ ಸ್ಥಳಗಳಿಗೆ ಬದಲಾಗಿ ಇಂದು ಊರಿನ ಒಳಭಾಗಗಳಲ್ಲಿ ಮೆರವಣಿಗೆ ದೇವಾಲಯವನ್ನಾಗಿ ಮಾಡಿ ಸುಂದರ ವಿಗ್ರಹ ಪ್ರತಿಮೆಗಳನ್ನು ಮಾಡಿಸಿ ಪ್ರತಿನಿತ್ಯ ಪೂಜಿಸುವುದನ್ನು ಕಾಣಬಹುದಾಗಿದೆ. ಮೂಲ ನೆಲೆಗಳಲ್ಲಿ ಪಡೆಯುತ್ತವೆ. ಇಂದು ಜುಂಜಪ್ಪ ಎತ್ತಪ್ಪ ವೀರಮ್ಮ, ಬೊಪ್ಪರಾಯ, ರಂಗನಾಥ ದೇವಾಲಯಗಳ ಹಟ್ಟಿ ಹಟ್ಟಿಗಳಲ್ಲಿ, ಪ್ರತಿಯೊಂದು ಹಳ್ಳಿಗಳಲ್ಲಿ ಸ್ಥಾಪಿತವಾಗುತ್ತಿವೆ.

ಆರಾಧನಾ ಸ್ಥಳಗಳು ಅಲ್ಲಿನ ಪರಿಸರ ಇಂದು ಜನದಟ್ಟಣೆ ಸ್ಥಳಗಳಲ್ಲಿ ಕೈತೋಟಗಳನ್ನು ಸುತ್ತಲೂ ಬೆಳಸಿ ಆಕರ್ಷಣೀಯ ವಾತಾವರಣ ನಿರ್ಮಿಸಲಾಗುತ್ತಿದೆ. ಭಕ್ತಿ ಭಾವನೆಗಳನ್ನು ಕೆರಳಿಸಬೇಕಾದ ಸ್ಥಳಗಳು ಮನರಂಜನೆಯ ಬೇಸರ ಕಳೆಯುವ ತಾಣಗಳಾಗುತ್ತಿವೆ. ತಿಂಗಳು ಅಥವಾ ವರ್ಷಕ್ಕಕೊಮ್ಮೆ ಆರಾಧಿಸಲ್ಪಡುತ್ತಿದ್ದ ವೀರರು ಇಂದು ನಿತ್ಯಪೂಜೆಯ ಭಾಗ್ಯ ಪಡೆದಿದ್ದಾರೆ. ಹಿಂದೆ ವೀರರನ್ನು ಆರಾಧಿಸುವಾಗ ಮಾಡುತ್ತಿದ್ದ ಆಚರಣೆಗಳು ಬದಲಾಗಿ ಹೊಸ ಆಚರಣೆಗಳು ಸೇರ್ಪಡೆಯಾಗುತ್ತಾ, ಹಳೆಯ ಸಂಕೀರ್ಣ ಆಚರಣೆಗಳು ಸರಳಗೊಳ್ಳುತ್ತಾ ಸಾಗುತ್ತಿವೆ. ವಾರಾನುಗಟ್ಟಲೆ ನಡೆಯುತ್ತಿದ್ದ ಉತ್ಸವ ಜಾತ್ರೆಗಳು ಒಂದೆರಡು ದಿನಗಳಲ್ಲಿ ಮುಕ್ತಾಯಗೊಳ್ಳುತ್ತಿವೆ. ಉತ್ಸವ ಜಾತ್ರೆಗಳು ಭಕ್ತಿಯ ಸಂಕೇತಗಳಾಗಿದ್ದವುಗಳು ಇಂದು ವಾಣಿಜ್ಯ ಕೇಂದ್ರಗಳಾಗಿ ಮಾರ್ಪಟ್ಟಿವೆ. ಆರಾಧನೆಗಿಂತ ವ್ಯವಹಾರವೇ ಮೇಲುಗೈ ಪಡೆಯುತ್ತಿವೆ. ಉದಾಹರಣೆಗೆ ಕಳುವೊರಹಳ್ಳಿ ಜುಂಜಪ್ಪನ ಜಾತ್ರೆ, ಮಾಗೋಡು, ತಾವರೇಕೆರೆ ರಂಗನಾಥನ ಜಾತ್ರೆಗಳು.

ಪೂಜಾ ವಿಧಾನಗಳಲ್ಲಿ ವೈದೀಕರಣ ಹೆಚ್ಚಾಗುತ್ತಿದೆ. ಶಿಷ್ಟ ದೇವತೆಗಳನ್ನು ಪೂಜಿಸುವಂತೆ ಎಲೆಪೂಜೆ ಕಟ್ಟಿಸುವುದು, ಅಭಿಷೇಕ ಮಾಡಿಸುವುದು, ಸಂಸ್ಕೃತ ಶ್ಲೋಕ, ಮಂತ್ರಗಳ ಪಠಣ ಮಾಡಿಸುವುದು ವೈದಿಕ ಪೂಜಾರಿಗಳನ್ನು ನೇಮಿಸುವುದು; ವಿಷ್ಣು, ಶಿವ, ಪಾರ್ವತಿ, ಲಕ್ಷ್ಮಿಯರ ಇತರ ವಿಗ್ರಹಗಳನ್ನು ಜೊತೆ ಜೊತೆಯಲ್ಲಿ ಪ್ರತಿಷ್ಠಾಪಿಸಿ ಶಿಷ್ಟ ಆರಾಧನೆಗೆ ಒಳಗಾಗುತ್ತಿದ್ದಾರೆ.

ವೀರಮ್ಮ, ಬೊಪ್ಪರಾಯ, ರಂಗನಾಥ ಮೊದಲಾದ ವೀರರ ಆರಾಧನೆ ಇಂದು ಮೂಲ ಸ್ವರೂಪದಲ್ಲಿ ಉಳಿಯದೆ ಶಿಷ್ಟಾಚಾರ, ವೈದೀಕರಣಕ್ಕೆ ಒಳಗಾಗಿವೆ.

ವೀರರ ಭಕ್ತರ ಪರಿವಾರ ದಿನೇ ದಿನೆ ಏರುಗತಿಯಲ್ಲಿ ಸಾಗುತ್ತಿದೆ. ಕೇವಲ ಕಾಡುಗೊಲ್ಲರಿಗೆ ಸೀಮಿತವಾಗಿದ್ದ ಜುಂಜಪ್ಪ, ಎತ್ತಪ್ಪ ಇಂದು ಎಲ್ಲಾ ಜಾತಿ ವರ್ಗಗಳಿಂದ ಆರಾಧಿಸುವ ಸಾರ್ವತ್ರಿಕ ದೈವವಾಗಿದ್ದಾರೆ. ಅದೇ ರೀತಿ ವೀರ ಬೊಮ್ಮಣ್ಣ, ಬರಗೂರು ವೀರಮ್ಮ ಬೊಪ್ಪರಾಯರು ಕುಂಚಿಟಿಗ ಜನಾಂಗದವರು ಮಾತ್ರ ಪೂಜಿಸುತ್ತಿದ್ದರು. ಇಂದು ಸ್ಥಳೀಯವಾಗಿ ಎಲ್ಲಾ ಜನರಿಂದಲೂ ಪೂಜೆಗೊಳಗಾಗಿದ್ದಾರೆ. ಭಕ್ತರ ಪರಿವಾರ ಹೆಚ್ಚಿದಂತೆ ಉದ್ಯೋಗ ನಿಮಿತ್ತ ಬೇರೆ ಬೇರೆ ಸ್ಥಳಗಳಿಗೆ ತೆರಳಿದ ಭಕ್ತರು ತಾವು ನೆಲೆಸಿದಲ್ಲಿಯೇ ಆ ವೀರರ ದೇವಸ್ಥಾನಗಳನ್ನು ಕಟ್ಟಿಸಿ ಆರಾಧಿಸಲು ಮೊದಲು ಮಾಡಿದ್ದರಿಂದ ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಸ್ವರೂಪದಲ್ಲಿ ಆರಾಧಿಸಲ್ಪಡುತ್ತಿದ್ದಾರೆ. ಸ್ಥಳೀಯವಾಗಿ ಕಥೆ, ಐತಿಹ್ಯಗಳು ಸೃಷ್ಟಿಗೊಳ್ಳುತ್ತಿವೆ. ಎತ್ತಪ್ಪ, ಜುಂಜಪ್ಪ, ರಂಗನಾಥರ ಆರಾಧನಾ ಸ್ಥಳಗಳು ಇಂದು ಹಳ್ಳಿ ಹಳ್ಳಿಗಳಲ್ಲಿ ಬೇರೆ ಬೇರೆ ತಾಲ್ಲೂಕು, ಜಿಲ್ಲೆ, ರಾಜ್ಯಗಳಲ್ಲಿ ಸ್ಥಾಪಿತವಾಗಿದೆ.

ವೀರರ ದೇವಾಲಯಗಳಿಗೆ ನೀಡುವ ದಾನ ದತ್ತಿಗಳು ಸ್ಥಳ, ವಸ್ತು, ವಡವೆ, ಹಣದ ರೂಪದಲ್ಲಿ ಕೊಡುವುದನ್ನು ಕಾಣಬಹುದು. ಜುಂಜಪ್ಪ, ವೀರಬೊಮ್ಮಣ್ಣ, ವೀರಮ್ಮ ದೇವಸ್ಥಾನಗಳಿಗೆ ಹತ್ತಾರು ಎಕರೆ ಭೂಮಿಯನ್ನು ದಾನ ಮಾಡಲಾಗಿದೆ. ಗೋಪುರ, ವಡವೆಗಳನ್ನು ಮಾಡಿಸಿಕೊಡಲಾಗುತ್ತದೆ. ಗಣ್ಯರ ಸಹಾಯದೊಂದಿಗೆ ವೀರರ ಗರ್ಭಗುಡಿ, ಸುಂದರ ಶಿಖರ ಇತ್ಯಾದಿಗಳನ್ನು ವೈದಿಕ ಪದ್ಧತಿಗನುಗುಣವಾಗಿ ಕಟ್ಟಿಸುವುದು ಸಾಮಾನ್ಯವಾಗಿದೆ. ಪೌಳಿಗಳಲ್ಲಿ ಬೆನವಗಳ ರೂಪದಲ್ಲಿದ್ದ ವೀರರು ಉತ್ಸವ ಮೂರ್ತಿಗಳಾಗಿ, ಮೆರವಣಿಗೆ ದೇವತೆಯಾಗಿ ವಾರ ಪೂರ್ತಿ ರಥೋತ್ಸವಗಳು ಹುಟ್ಟಿಕೊಂಡವು. ದಿನೇ ದಿನೆ ವೀರರ ಪೂಜಾರಿಗಳ ಸಂಖ್ಯೆಯಲ್ಲಿಯೂ ಏರಿಕೆಯಾಯಿತು. ಜಾತ್ರೆಗಳಲ್ಲಿ ಮಾರಾಟವಾಗುವ ಗೃಹ ಉಪಯೋಗಿ ವಸ್ತುಗಳು, ಮಕ್ಕಳ ಆಟಿಕೆಗಳು, ಇತ್ಯಾದಿಗಳಲ್ಲಿ ವೈವಿಧ್ಯತೆ, ಪ್ರಾದೇಶಿಕ ತಿಂಡಿ ತಿನಿಸುಗಳು, ಮನರಂಜನೆಗೆ ಆಧುನಿಕ ಆರ್ಕೆಸ್ಟ್ರಾ, ವಿವಿಧ ಸರ್ಕಸ್ ಕಂಪನಿಗಳು ಬಂದವು. ಇವೆಲ್ಲವೂ ಮನುಷ್ಯನ ಭಾವನಾತ್ಮಕ ಸಂಬಂಧವನ್ನು ಕಡಿದುಹಾಕಿ ವಾಣಿಜ್ಯ ರೂಪವಾಗಿ ಕಾಣಿಸಲಾಗುತ್ತದೆ. ಯಾವಾಗ ಬೇಕಾದರೂ

ಮುಕ್ತವಾಗಿ ಪೂಜಿಸುತ್ತಿದ್ದ ವೀರರುಗಳಿಗೆ ಕಟ್ಟು ಪಾಡುಗಳು ಹುಟ್ಟಿಕೊಂಡು ವರ್ಷದ, ವಾರದ ನಿಗದಿತ ಸಮುದಾಯಗಳಲ್ಲಿ ಪೂಜೆ ಸಲ್ಲಿಸುವಂತಾಗಿದೆ. ಹೀಗೆ ವೀರರ ಸಂಸ್ಕೃತೀಕರಣಕ್ಕೆ ಒಳಗಾದಂತೆ ಜನಪದರ ಭಾವನಾತ್ಮಕ ಸಂಬಂಧ ದೂರಾಗುತ್ತಿದೆ. ಕೇವಲ ಒಂದು ಜನ ವರ್ಗಕ್ಕೆ ಮೀಸಲಾಗಿದ್ದ ದೇವರು ಎಲ್ಲಾ ವರ್ಗದವರ ದೇವರಾಗಿ ಮಾರ್ಪಾಡಾಗುತ್ತಿರುವುದನ್ನು ಕಾಣಬಹುದು.

## ಅಡಿಟಿಪ್ಪಣಿ

೧. ಎಫಿಗ್ರಾಫಿಯಾ ಕರ್ನಾಟಕ, ಸಂಪುಟ ೧೨, ಬಿ.ಎಲ್.ರೈಸ್ (ಸಂಪಾದನೆ)

೨. ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು. ಲೇ. ತೀ.ನಂ.ಶಂಕರನಾರಾಯಣ, ಪುಟ,೨೯

## ಉಪಸಂಹಾರ

ಕನ್ನಡ ಜಾನಪದ ಲೋಕಕ್ಕೆ ಸಿರಾ ಸೀಮೆಯ ಕೊಡುಗೆ ಅಪಾರ. ಇಲ್ಲಿಯ ನೆಲದಲ್ಲಿ ಅಪಾರ ಜನಪದ ಕಥೆ, ಕಾವ್ಯಗಳ ಸಮೃದ್ಧಿ ಇದೆ. ಅನೇಕ ವೀರ-ನಾಯಕರು ಜನಿಸಿದ್ದಾರೆ. ಇತಿಹಾಸದಲ್ಲಿ ಗಂಡು ಭೂಮಿ ಎಂದು ಉಲ್ಲೇಖಿಸಲಾಗಿದೆ. ಈ ವೀರ-ನಾಯಕರಲ್ಲಿ ಎಷ್ಟೋ ಜನ ಬೆಳಕಿಗೆ ಬಾರದೆ ಎಲೆ ಮರೆಯ ಕಾಯಿಯಾಗಿದ್ದಾರೆ. ಇವರ ಬದುಕು, ಹೋರಾಟ, ಇವರು ನಂಬಿದ ಮೌಲ್ಯಗಳನ್ನು ಇಂದಿನ ಪೀಳಿಗೆಗೆ ತಿಳಿಸಬೇಕಾದುದು ಆದ್ಯ ಕರ್ತವ್ಯ. ಅಂತಹ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ನಾಡಿನಾದ್ಯಂತ ಜನಪ್ರಿಯವಾದ ಸಾಂಸ್ಕೃತಿಕ ವೀರರ ಸಾಲಿನಲ್ಲಿ ಇವರನ್ನು ಸರಿಸಮಾನವಾಗಿ ಗುರುತಿಸಲು ಹೋಗದೆ ಸ್ಥಳೀಯವಾಗಿ ಸಿರಾ ಸೀಮೆಯ ಸಂಸ್ಕೃತಿಯನ್ನು ಕಟ್ಟಿದವರೆಂದು ಮಾತ್ರ ಗುರುತಿಸಲಾಗಿದೆ. ಇವರ ಬಗೆಗೆ ಜನಪದೀಯವಾಗಿ ಪ್ರಚಲಿತವಿರುವ ಕಥೆ, ಕಾವ್ಯ, ಲಾವಣಿಗಳ ಹಿನ್ನೆಲೆಯಲ್ಲಿ ವೀರ-ನಾಯಕರ ಹುಟ್ಟು, ಹೋರಾಟ, ಅಸ್ತಿತ್ವಗಳನ್ನು ಕ್ಷೇತ್ರ ಕಾರ್ಯದ ಮೂಲಕ ಅಧ್ಯಯನಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಒಟ್ಟು ಎಂಟು ಅಧ್ಯಾಯಗಳಿದ್ದು ಮೊದಲನೆ ಅಧ್ಯಾಯದಲ್ಲಿ; ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯನ್ನು ಹೇಳಲಾಗಿದೆ. ಅಧ್ಯಾಯ ಎರಡರಲ್ಲಿ ಸಿರಾ ಸೀಮೆಯ ಸಂಕ್ಷಿಪ್ತ ಪರಿಚಯ ಮಾಡಲಾಗಿದೆ. ಈ ಪ್ರದೇಶದ ಭೌಗೋಳಿಕ, ಚಾರಿತ್ರಿಕ ಶೈಕ್ಷಣಿಕ ಪರಿಸರ, ಜಾನಪದ ಸಾಹಿತ್ಯ, ಕಲೆ, ಕಲಾವಿದರ ಬಗೆಗೆ ಸಾಕಷ್ಟು ವಿವರವಾಗಿ ಹೇಳಲಾಗಿದೆ. ಜಾನಪದ ವೀರ-ನಾಯಕರನ್ನು ಕುರಿತ ಈ ಉದ್ದೇಶಿತ ಅಧ್ಯಯನಕ್ಕೆ ಇದು ಅಗತ್ಯ ಹಿನ್ನೆಲೆಯನ್ನು ಒದಗಿಸುತ್ತದೆ. ಅಧ್ಯಾಯ ಮೂರರಲ್ಲಿ; ವೀರ-ನಾಯಕ ಪರಿಕಲ್ಪನೆಯ ಅರ್ಥ, ವೀರರ ಹುಟ್ಟು ಬೆಳವಣಿಗೆ, ವರ್ಗೀಕರಣ, ದೈವತ್ವಾರೋಪಣೆ ಕುರಿತು ಅನೇಕ ವಿದ್ವಾಂಸರ ಅಧ್ಯಯನದ ಹಿನ್ನೆಲೆಯಲ್ಲಿ ನೋಡಲಾಗಿದೆ. ವೀರ-ನಾಯಕರ ಮೌಲ್ಯಾದರ್ಶಗಳು, ಅವರ ಹೋರಾಟ, ಸಾಹಸ, ಪವಾಡಗಳು, ಎದುರಿಸಿದ ದುರಂತಗಳನ್ನು ಜಾನಪದರು ಹೇಗೆ ವೀರ-ನಾಯಕರಲ್ಲಿ ಗುರುತಿಸುತ್ತಾರೆ. ಎಂಬುದನ್ನು ತಿಳಿಯಲು ಈ ಅಧ್ಯಯನ ಸಹಕಾರಿಯಾಗಿದೆ. ಅಧ್ಯಾಯ ನಾಲ್ಕರಲ್ಲಿ; ಮುಖ್ಯವಾಗಿ ಈ ಅಧ್ಯಯನ ವಿಷಯಕ್ಕೆ ಸಂಬಂಧಿಸಿ ಸಿರಾ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕಂಡುಬರುವ ಪ್ರಮುಖ ವೀರ-ನಾಯಕರನ್ನು ಇಲ್ಲಿ ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಇವರು ವೀರ-ನಾಯಕರೆನಿಸಿಕೊಳ್ಳಲು ಕಾರಣವಾದ ಘಟನೆ, ಹೋರಾಟ, ನಂಬಿದ ಮೌಲ್ಯಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ. ಅಧ್ಯಾಯ ಐದರಲ್ಲಿ ವೀರ-ನಾಯಕರ ಕಾರ್ಯಕ್ಷೇತ್ರ ಆರಾಧನಾ ಕ್ಷೇತ್ರಗಳನ್ನು ಗುರುತಿಸಲಾಗಿದೆ. ಅವುಗಳ ವೈಶಿಷ್ಟ್ಯತೆ, ಆ ಕೇಂದ್ರಗಳ ಬಗೆಗೆ ಇರುವ ಕತೆ,

ಐತಿಹ್ಯಗಳು, ವೀರ-ನಾಯಕರಿಗೂ ಆ ಕೇಂದ್ರಗಳಿಗೂ ಇರುವ ಸಂಬಂಧ, ಆರಾಧನಾ ಭಕ್ತ ಸಮೂಹ ಮೊದಲಾದ ವಿಷಯಗಳ ಬಗೆಗೆ ಅವಲೋಕಿಸಲಾಗಿದೆ. ಈ ವಿಸ್ತೃತ ಅಧ್ಯಯನದಿಂದಾಗಿ ಈ ಪ್ರದೇಶದ ಜಾನಪದ ವೀರ-ನಾಯಕರುಗಳ ಆರಾಧನೆಯನ್ನು ಕುರಿತಂತೆ ಗೋಚರವಾದ ಗಮನಾರ್ಹ ಸಂಗತಿಗಳನ್ನು ಹೇಳಲಾಗಿದೆ. ಆರನೇ ಅಧ್ಯಾಯದಲ್ಲಿ; ವೀರ-ನಾಯಕರುಗಳ ಹೆಸರಿನಲ್ಲಿ ಪ್ರಚಲಿತವಿರುವ ಆಚರಣೆ ಕಟ್ಟು ಪಾಡುಗಳು ಯಾವುವು, ಅವುಗಳಿಗೂ ವೀರನಾಯಕರಿಗೂ ಇರುವ ಅರ್ಥಪೂರ್ಣ ಸಂಬಂಧಗಳೇನು, ಅವು ಯಾವಾಗ, ಎಲ್ಲಿ, ಹೇಗೆ ಆಚರಿಸಲ್ಪಡುತ್ತವೆ. ಎಂಬ ವಿಚಾರಗಳ ಬಗೆಗೆ ವಿವರವಾದ ಅಧ್ಯಯನ ನಡೆಸಲಾಗಿದೆ. ಅಧ್ಯಾಯ ಏಳರಲ್ಲಿ; ಸ್ಥಳೀಯ ಚರಿತ್ರೆಗೂ, ವೀರನಾಯಕರಿಗೂ ಇರುವ ಸಂಬಂಧಗಳೇನು, ಇವರ ಕಥೆ, ಹಾಡು, ಐತಿಹ್ಯಗಳಲ್ಲಿ ಸ್ಥಳೀಯ ಚರಿತ್ರೆ, ಜನಾಂಗೀಯ ಚರಿತ್ರೆ ಹೇಗೆ ಸೇರಿಕೊಂಡಿದೆ, ಇವರ ಅಧ್ಯಯನದ ಹಿನ್ನೆಲೆಯಲ್ಲಿ ಸ್ಥಳೀಯ ಚರಿತ್ರೆಯನ್ನು ಹೇಗೆ ಪುನರ್ ಕಟ್ಟಬಹುದೆಂಬ ವಿಷಯಗಳ ಬಗೆಗೆ ಹೇಳಲಾಗಿದೆ. ಅಧ್ಯಾಯ ಎಂಟರಲ್ಲಿ; ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಈ ವೀರ-ನಾಯಕರು ಹೇಗೆ ಅಸ್ತಿತ್ವ ಸ್ಥಾಪಿಸಿಕೊಳ್ಳುತ್ತಾರೆ, ರಾಷ್ಟ್ರೀಯ ಮನ್ನಣೆ ಪಡೆಯದಿದ್ದರೂ ಸ್ಥಳೀಯ ಬದುಕಿನ ಮೇಲೆ ಹೇಗೆ ಪ್ರಭಾವ ಬೀರಿದ್ದಾರೆ, ಕುಲ, ಸಮುದಾಯಗಳು ಇವರ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೇಗೆ ಪ್ರಯತ್ನಿಸುತ್ತವೆ, ಆಧುನಿಕ ಮನಸ್ಸಿನೊಳಗೆ ಇವರ ಕನಸುಗಳು, ಬದುಕು ಹೇಗೆ ಪ್ರಕಟಗೊಳ್ಳುತ್ತದೆ, ಇವರ ಅಸ್ತಿತ್ವಕ್ಕೆ ಯಾವ ಒತ್ತಡಗಳು ಕಾರಣವಾಗಿವೆ ಎಂಬ ವಿಷಯಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಅಧ್ಯಯನದ ಅಂತಿಮ ಭಾಗದಲ್ಲಿ ಉಪಸಂಹಾರ ಹಾಗೂ ಅನುಬಂಧಗಳನ್ನು ಕೊಡಲಾಗಿದೆ.

ಸಿರಾ ಸೀಮೆಗೆ ಸಂಬಂಧಿಸಿದಂತೆ ಸಾಕಷ್ಟು ವ್ಯಾಪಕವಾಗಿ ಹಾಗೂ ವಿವರವಾಗಿ ನಡೆಸಿದ ಈ ಅಧ್ಯಯನದಿಂದಾಗಿ ಒಂದೇ ವಿಷಯಕ್ಕೆ ಸಂಬಂಧಿಸಿದ ಇಷ್ಟೊಂದು ಸಂಗತಿಗಳು ಹೊರಬಂದವು. ಮೌಖಿಕ ಹಾಗೂ ಲಿಖಿತ ಆಕರಗಳೆರಡನ್ನು ಬಳಸಿಕೊಂಡು ಸಮಾನತೆಯ ನೆಲೆಯಲ್ಲಿ ಪೂರ್ವಾಗ್ರಹಗಳಿಲ್ಲದೆ ಅಧ್ಯಯನ ಮಾಡಲಾಗಿದೆ.

ಒಟ್ಟಾರೆ ಈ ಅಧ್ಯಯನವೇ ಅಂತಿಮ ರೂಪ ಎಂಬ ನಿಲುವಿಗೆ ಬರಲು ಸಾಧ್ಯವಿಲ್ಲ. ಈ ಅಧ್ಯಯನದ ಹಿನ್ನೆಲೆಯಲ್ಲಿ ಇನ್ನೂ ಹೆಚ್ಚಿನದಾಗಿ ಒಬ್ಬೊಬ್ಬ ವೀರ-ನಾಯಕರ ಬಗೆಗೆ ಪ್ರತ್ಯೇಕ ಅಧ್ಯಯನ ಕೈಗೊಳ್ಳಲು ಸಾಧ್ಯವಿದೆ. ಕಾಡುಗೊಲ್ಲ ಹಾಗೂ ಕುಂಚಿಟಿಗ ಜನಾಂಗದ ವೀರಗಾರರು, ಮಹಾಸತಿಯರ ಬಗೆಗೆ ತೌಲನಿಕ ಅಧ್ಯಯನಕ್ಕೆ ಅವಕಾಶವಿದೆ. ಒಂದೇ ಬಗೆಯ ವಲಸೆಯ ಕಥೆಗಳನ್ನು ಹೇಳುವ ಕಾಡುಗೊಲ್ಲ, ಕುಂಚಿಟಿಗ ಜನಾಂಗಗಳ ತೌಲನಿಕ ಅಧ್ಯಯನಕ್ಕೂ ಅವಕಾಶವಿದೆ. ವೀರ-ನಾಯಕರ ಬಗೆಗೆ ಜನರಲ್ಲಿರುವ ಪದ, ಕಥೆ, ಐತಿಹ್ಯವನ್ನು ಸಮಗ್ರವಾಗಿ ಸಂಗ್ರಹಿಸಬಹುದಾಗಿದೆ. ಆ ಮೂಲಕ ಈವರೆಗೂ ಇರುವ ಸಿರಾ ಸೀಮೆಯ ಲಿಖಿತ ಇತಿಹಾಸವನ್ನು

ಮುರಿದು ಕಟ್ಟಬಹುದು. ನಿಜವಾದ ಸ್ಥಳೀಯ ಇತಿಹಾಸ ರಚನೆಗೆ ಈ ಸಾಂಸ್ಕೃತಿಕ ವೀರ-ನಾಯಕರ ಅಧ್ಯಯನ ಮಹತ್ವವೆನಿಸಿಕೊಳ್ಳುವುದು ಹಾಗೂ ಸಹಕಾರಿಯಾಗಬಲ್ಲದು. ಇಲ್ಲಿನ ಹೋರಾಟ, ಸಾಂಸ್ಕೃತಿಕ ಬದುಕನ್ನು ಈ ಅಧ್ಯಯನ ಸೂಕ್ಷ್ಮವಾಗಿ ತಿಳಿಸಿಕೊಡುತ್ತದೆ. ಇಲ್ಲಿನ ರಾಜಕೀಯ, ಸಾಮಾಜಿಕ ಸ್ಥಿತಿಗತಿಗಳು ಇಂದು ರೂಪುಗೊಳ್ಳುತ್ತಿರುವ ಈ ಸಾಮಾಜಿಕ, ರಾಜಕೀಯ ಬದುಕಿನ ಮೇಲೆ ಹೇಗೆ ಮತ್ತು ಎಷ್ಟರ ಮಟ್ಟಿಗೆ ಪ್ರಭಾವ ಬೀರುತ್ತಿದೆ ಎಂಬುದನ್ನು ತಿಳಿಯಲು ಈ ಅಧ್ಯಯನ ನೆರವಾಗುತ್ತದೆ. ಜನ ಸಮುದಾಯವನ್ನೇ ಚರಿತ್ರೆಯ ನಿಜವಾದ ಕೇಂದ್ರ ನಿರ್ಮಾಪಕರೆಂದು ಒಪ್ಪಿಕೊಂಡು ಅವರ ಉತ್ಪನ್ನದ ಚರಿತ್ರೆಯೇ ಸಾಂಸ್ಕೃತಿಕ ವೀರರ ಚರಿತ್ರೆಯೂ ಆಗುತ್ತದೆ ಎಂಬ ಸತ್ಯದ ನೆಲೆಗೆ ಬರಲು ಇದರಿಂದ ಸಾಧ್ಯವಾಗುತ್ತದೆ. ಮುಂದಿನ ಅಧ್ಯಯನಕ್ಕೆ ಇದು ಒಂದು ಕೈಪಿಡಿಯಾಗಬಹುದೆಂಬ ನಂಬಿಕೆ ನನ್ನದು.

# ಅನುಬಂಧ

೧ ಪರಾಮರ್ಶನ ಗ್ರಂಥಗಳು

೨ ಲೇಖನಗಳು

೩ ವಕ್ತೃಗಳ ವಿವರಗಳು

೪. ಕ್ಲಿಷ್ಟಪದಕೋಶ

೫ ಜಾನಪದ ಹಾಡು

೬ ಸಾಂಸ್ಕೃತಿಕ ವೀರರ ಹೆಸರನ್ನಿಟ್ಟಿರುವ ಗ್ರಾಮಗಳು

೭ ಛಾಯಾಚಿತ್ರಗಳು

## ೧ ಪರಾಮರ್ಶನ ಗ್ರಂಥಗಳು


೧ ಆಯ್ದ ಜನಪದ ಕಥೆಗಳು, ಡಾ. ಜಿ.ಶಂ. ಪರಮಶಿವಯ್ಯ, ಮೈಸೂರು ವಿಶ್ವವಿದ್ಯಾಲಯ, ೧೯೭೦.

೨ ಇತಿಹಾಸ ದರ್ಶನ ಸಂ.೧೩, ಮೀರಾಸಾಬಿಹಳ್ಳಿ ಶಿವಣ್ಣ, ಕರ್ನಾಟಕ ಇತಿಹಾಸ ಅಕಾಡೆಮಿ, ೧೯೯೮. (ಲೇಖನ. ಬೊಪ್ಪರಾಯ ಕುಂಚಿಟಿಗರ ಸಾಂಸ್ಕೃತಿಕ ವೀರ)

೩ ಉತ್ತರ ಕರ್ನಾಟಕದ ಜನಪದ ಕಥೆಗಳು, ಡಾ. ಎಲ್.ಆರ್. ಹೆಗಡೆ, ಕರ್ನಾಟಕ ವಿ.ವಿ., ೧೯೭೫.

೪ ಎತ್ತಪ್ಪ, ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಸಿ.ವಿ.ಜಿ ಪಬ್ಲಿಕೇಷನ್, ೨೦೦೨.

೫ ಎಪಿಗ್ರಾಫಿಯಾ ಕರ್ನಾಟಕ, ಸಂಪುಟ ೧೨

೬ ಕನ್ನಡ ಜಾನಪದ ವಿಶ್ವಕೋಶ ಸಂ.೧, ಡಾ. ಚಂದ್ರಶೇಖರ ಕಂಬಾರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫.

೭ ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ನಿಂಗಪ್ಪ ಮುದೇನೂರು, ಕನ್ನಡ ವಿ.ವಿ., ಹಂಪಿ, ಪಿಎಚ್.ಡಿ. ಪ್ರಬಂಧ, ೨೦೦೩.

೮ ಕರ್ನಾಟಕ ಜನಪದ ಕಾವ್ಯಗಳು, ಡಿ. ಲಿಂಗಯ್ಯ, ಕರ್ನಾಟಕ ವಿ.ವಿ., ೧೯೭೯.

೯ ಕರ್ನಾಟಕ ಜಾನಪದ ಕಥೆಗಳು, ರಾ.ಗೌ ಮತ್ತು ತಾ.ವೆಂ., ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೯.

೧೦ ಕರ್ನಾಟಕ ವಿಷಯ ವಿಶ್ವಕೋಶ, ಸಂ. ಹಾ.ಮಾ.ನಾಯಕ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ, ೧೯೭೯.

೧೧ ಕನ್ನಡ ಶಾಸನಗಳ ಸಾಂಸ್ಕೃತಿ ಅಧ್ಯಯನ, ಡಾ. ಚಿದಾನಂದಮೂರ್ತಿ, ಮೈಸೂರು ವಿ.ವಿ, ೧೯೭೯.

೧೨ ಕರ್ನಾಟಕ ಸಂಸ್ಕೃತಿ ಪರಂಪರೆ, ರಂ.ಶ್ರೀ. ಮುಗಳಿ, ಸಮಾಜ ಪುಸ್ತಕ ಮಾಲೆ, ೧೯೯೯.

೧೩ ಕಲ್ಪಸಿರಿ, ೬೯ನೇ ಅ.ಭಾ.ಕ.ಸಾಹಿತ್ಯ ಸಮ್ಮೇಳನ, ತುಮಕೂರು, ೨೦೦೨.

೧೪ ಕಾಡುಗೊಲ್ಲರ ಜನಪದ ಗೀತೆಗಳು, ಎಂ. ಹಿರಿಯಣ್ಣ, ಕನ್ನಡ ಅಧ್ಯಯನ ಸಂಸ್ಥೆ, ಮೈ, ೧೯೭೨.

೧೫ ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ತಿ.ನಂ. ಶಂಕರನಾರಾಯಣ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೨.

೧೬ ಕಿನ್ನರಿಯ ಮೇಲೆ ಕಿರುಗೆಜ್ಜೆ, ಡಾ. ಚಿಕ್ಕಣ್ಣಯಣ್ಣೇಕಟ್ಟೆ, ಗ.ಜಾ.ಸಂ.ಕೇಂದ್ರ, ಸಿರಾ, ೨೦೦೦.

೧೭ ಕುಂಚಿಟಿಗ ಜನಾಂಗದ ಇತಿಹಾಸ, ಡಾ. ಎಂ.ಎಚ್. ನಾಗರಾಜ, ಅನಿಕೇತನ ಪ್ರಕಾಶನ, ತುಮಕೂರು, ೨೦೦೩.

೧೮ ಕುಂಚಿಟಿಗರ ಸಮಾಜದ ಚರಿತ್ರೆ, ಎಂ. ಪುಟ್ಟಯ್ಯ, ಅ.ಕುಂ.ಮಹಾಮಂಡಲ, ಬೆಂಗಳೂರು, ೨೦೦೨.

೧೯ ಕುಂಚಿಟಿಗರ ಸಂದೇಶ, ಮಾಸಪತ್ರಿಕೆ, ಬೆಂಗಳೂರು, ಮೇ, ೨೦೦೧.

೨೦ ಕೂಡುಕಟ್ಟು, ಪುರುಷೋತ್ತಮ ಬಿಳಿಮಲೆ, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೧೯೯೬.

೨೧ ಕೃಷ್ಣಗೊಲ್ಲರ ಕಥನ ಕಾವ್ಯಗಳು, ಡಾ. ಕೆ.ಎಂ. ಮೈತ್ರಿ, ಕನ್ನಡ ವಿ.ವಿ. ಹಂಪಿ, ೨೦೦೦.

೨೨ ಕೃಷ್ಣಗೊಲ್ಲರ ಕಥನಗಳು, ಡಾ. ಕೆ.ಎಂ. ಮೈತ್ರಿ, ಕನ್ನಡ ವಿ.ವಿ. ಹಂಪಿ, ೨೦೦೦.

೨೩ ಗುಮ್ಮನಹಳ್ಳಿ ಕದನ, ಹೆಚ್.ವಿ. ವೀರನಾಯ್ಕ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೮.

೨೪ ಗೊಲ್ಲ ಕಡಗ, ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು೧೯೯೮.

೨೫ ಗ್ರಾಮದೇವತೆಗಳು, ಡಾ. ಸಿದ್ಧಲಿಂಗಯ್ಯ, ಮಾಲಾಭಾರತಿ ಪ್ರಕಾಶನ, ಬೆಂಗಳೂರು, ೧೯೯೬.

೨೬ ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಡಾ. ವಿರೂಪಾಕ್ಷಿ ಪೂಜಾರಹಳ್ಳಿ, ಕನ್ನಡ ವಿ.ವಿ. ಹಂಪಿ, ೨೦೦೨.

೨೭ ಚಿತ್ರದುರ್ಗ ಪಾಳೇಗಾರರು, ಎಂ.ಎಸ್. ಪುಟ್ಟಣ್ಣ, ಬೆಂಗಳೂರು, ೧೯೨೩.

೨೮ ಚಿತ್ರದೇವರ ಕಾವ್ಯ, ಡಾ. ಚಿಕ್ಕಣ್ಣಯಣ್ಣೆಕಟ್ಟೆ, ಗ.ಜಾ. ಸಂಪರ್ಕ ಕೇಂದ್ರ, ಸಿರಾ, ೧೯೯೮.

೨೯ ಚೆನ್ನುಡಿ ನೆನಪಿನ ಸಂಚಿಕೆ, ಕೆ.ಎಸ್. ಸಿದ್ದಲಿಂಗಪ್ಪ, ತುಮಕೂರು ಜಿಲ್ಲಾ, ೫ನೇ ಕನ್ನಡ ಸಾಹಿತ್ಯ, ಸಮ್ಮೇಳನ, ಗುಬ್ಬಿ.

೩೦ ಜನಪದ ವೀರಗೀತೆಗಳು, ಕೃಷ್ಣಮೂರ್ತಿ ಹನೂರು, ಕನ್ನಡ ಅಧ್ಯಯನ ಸಂಸ್ಥೆ, ಮೈ, ೧೯೮೬.

೩೧ ಜಯಮಂಗಲಿ, ೬೯ನೇ ಅ.ಭಾ.ಕ.ಸಾಹಿತ್ಯ ಸಮ್ಮೇಳನ, ತುಮಕೂರು, ೨೦೦೨.

೩೨ ಜಾನಪದ ಅಧ್ಯಯನ, ಡಿ.ವಿ.ಕೆ. ಮೂರ್ತಿ, ಡಾ. ಡಿ.ಜವರೇಗೌಡ, ಮೈಸೂರು, ೧೯೯೯.

೩೩ ಜಾನಪದ ವೀರಗೀತೆಗಳು, ಡಾ. ಬಿ.ಬಿ.ಮಹೀಷವಾಡಿ, ಕರ್ನಾಟಕ ವಿ.ವಿ., ೧೯೭೧.

೩೪ ಜಾನಪದ ಲೋಚನ, ಡಾ. ಅಂಬಳಿಕೆ ಹಿರಿಯಣ್ಣ, ಪ್ರಜ್ವಲ ಪ್ರಾಶನ, ಮೈಸೂರು, ೧೯೯೪.

೩೫ ಜುಂಜಪ್ಪ, ಡಾ. ಚಲುವರಾಜು, ಕನ್ನಡ ವಿ.ವಿ., ಹಂಪಿ, ೧೯೯೬.

೩೬ ತುಮಕೂರು ಜಿಲ್ಲಾ ಜನಪದೀಯ ಅಧ್ಯಯನ, ಡಾ. ಚಿಕ್ಕಣ್ಣ ಯಣ್ಣೆಕಟ್ಟೆ, ಗ.ಸಾ. ಪಂಪರ್ಕ ಕೇಂದ್ರ, ಕಾಳಿದಾಸನಗರ, ಸಿರಾ, ೨೦೦೧.

೩೭ ತುಮಕೂರು ಜಿಲ್ಲಾ ಜಾತ್ರೆಗಳು, ಡಾ. ಚಿಕ್ಕಣ್ಣ ಯಣ್ಣೆಕಟ್ಟೆ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩.

೩೮ ತುಮಕೂರು ಜಿಲ್ಲಾ ದರ್ಶನ, ಶ್ರೀ.ಎನ್. ಭಾಸ್ಕಪ್ಪ, ಟೈಮ್ಸ್ ಪಬ್ಲಿಕೇಷನ್, ತುಮಕೂರು, ೧೯೮೧.

೩೯ ತುಮಕೂರು ಜಿಲ್ಲೆಯ ಕೋಟೆ ಕೊತ್ತಲಗಳ : ಜನಪದೀಯ ಅಧ್ಯಯನ, ಪಿಎಚ್.ಡಿ. ಪ್ರಬಂಧ, ಮುದ್ದವೀರಪ್ಪ, ಕನ್ನಡ ವಿ.ವಿ., ಹಂಪಿ, (ಅಪ್ರಕಟಿತ), ೨೦೦೪.

೪೦ ದಲಿತರು ಮತ್ತು ಜಾಗತೀಕರಣ, ಮೊಗಳ್ಳಿ ಗಣೇಶ್, ಕನ್ನಡ ವಿ.ವಿ, ಹಂಪಿ, ೧೯೯೯.

೪೧ ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಡಾ. ವಸು, ಕನ್ನಡ ವಿ.ವಿ, ಹಂಪಿ, ೨೦೦೧.

೪೨ ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ಜಿ.ಶಂ.ಪ., ಮೈಸೂರು ವಿ.ವಿ., ೧೯೭೯.

೪೩ ದುರುಗ ಜಾನಪದ, ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಶಕ್ತಿ ಮುದ್ರಣ ಮತ್ತು ಪ್ರಕಾಶನ, ೧೯೯೯.

೪೪ ಧರ್ಮ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೩, ಡಾ. ರಹಮತ್ ತರಿಕೆರೆ, ಕನ್ನಡ ವಿ.ವಿ., ಹಂಪಿ, ೨೦೦೦.

೪೫ ನಮ್ಮ ಜನಪದ ಕಥೆಗಳು, ಡಾ. ಎಲ್.ಆರ್. ಹೆಗಡೆ, ಕನ್ನಡ ಅಧ್ಯಯನ ಸಂಸ್ಥೆ, ಮೈ, ೧೯೭೮.

೪೬ ಪಾವಗಡ ತಾಲ್ಲೂಕಿನ ಜಾನಪದ ವೀರ ನಾಯಕರು, ಡಾ. ಪಿ.ವಿ. ರಂಗಲಕ್ಷ್ಮಿ, ೨೦೦೬.

೪೭ ಪಾಳೇಗಾರರ ಪದಗಳು, ಕೃಷ್ಣಸ್ವಾಮಿ ಕ.ರಾ., ಜಾನಪದ ಸಾಹಿತ್ಯ ಅಕಾಡೆಮಿ, ಮೈಸೂರು, ೧೯೯೩.

೪೮ ಪಿರಿಯಾಪಟ್ಟಣದ ಕಾಳಗ, ರಾಜಶೇಖರ್ ಪಿ.ಕೆ., ಮೈಸೂರು, ೧೯೯೦.

೪೯ ಬೇವಿನಹಳ್ಳಿ ಹಟ್ಟಿ ಒಂದು ಅಧ್ಯಯನ (ಪಿಎಚ್.ಡಿ. ಪ್ರಬಂಧ), ಕಾಳೇಗೌಡ ನಾಗವಾರ, ಬೆಂಗಳೂರು ವಿ.ವಿ.

೫೦ ಬಂಡಿ ರಂಗನಾಥಸ್ವಾಮಿ ದೇವಾಲಯದ ಇತಿಹಾಸ ಮಹಿಮೆ, ಟಿ. ತಾರೇಗೌಡ, ತಾವರೇಕೆರೆ, ೧೯೬೪.

೫೧ ಮಲೆಯ ಮಾದೇಶ್ವರ, ಸ್ವಾಮಿ ಬಿ.ಎಸ್., ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೫

೫೨ ಮಲೆ ಮಾದೇಶ್ವರ ಕಾವ್ಯ, ಡಾ. ಕೇಶವನ್ ಪ್ರಸಾದ್, ಕನ್ನಡ ವಿ.ವಿ., ಹಂಪಿ, ೧೯೯೭.

೫೩ ಮಲೆಯ ಮಾದೇಶ್ವರ, ಕ.ರಾ. ಕೃಷ್ಣಸ್ವಾಮಿ, ಜಾನಪದ ಅಕಾಡೆಮಿ, ಮೈಸೂರು, ೧೯೯೨.

೫೪ ಮರಗೋಡು ಕಂಬದ ರಂಗನಾಥಸ್ವಾಮಿ, ಡಾ. ಚಿಕ್ಕಣ್ಣ ಯಣ್ಣೆಕಟ್ಟೆ, ಗ.ಜಾ.ಸಂಪರ್ಕ ಕೇಂದ್ರ, ಸಿರಾ, ೨೦೦೨.

೫೫ ಮ್ಯಾಸ ಮಂಡಲ, ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂ. ೨೦೦೩.

೫೭ ಮಹಾ ಶಿವಶರಣೆ ಶ್ರೀ ವೀರ ನಾಗಮ್ಮ ದೇವಿ, ಡಾ. ರಾಜಣ್ಣ ಹುಣಸೇಪಾಳ್ಯ, ಸಾಹಿತ್ಯ ಕಮ್ಮಟ, ದೊಡ್ಡಬಳ್ಳಾಪುರ, ೧೯೯೬.

೫೮ ಮಹಾಸತಿ ಆಚರಣೆ ಒಂದು ಅಧ್ಯಯನ, ಬಸವರಾಜ ಕಲ್ಗುಡಿ, ಬೆಂಗಳೂರು ವಿ.ವಿ., ೧೯೮೫.

೫೯ ಮೈಲಾರಲಿಂಗನ ಕಾವ್ಯ, ಮಂಜುನಾಥ ಬೇವಿನಕಟ್ಟೆ, ಕನ್ನಡ ವಿ.ವಿ. ಹಂಪಿ, ೧೯೯೯.

೬೦ ಮಂಟೇಸ್ವಾಮಿ ಕಾವ್ಯ ಸಾಂಸ್ಕೃತಿಕ ಮುಖಾಮುಖಿ, ವೆಂಕಟೇಶ್ ಇಂದ್ವಾಡಿ, ಕನ್ನಡ ವಿ.ವಿ. ಹಂಪಿ, ೨೦೦೪.

೬೧ ಮಂಟೇಸ್ವಾಮಿ ಪರಂಪರೆ, ವೆಂಕಟೇಶ್ ಇಂದ್ವಾಡಿ, ಕನ್ನಡ ವಿ.ವಿ. ಹಂಪಿ, ೧೯೯೯.

೬೨ ಮಂಟೇಸ್ವಾಮಿ ಮಹಾಕಾವ್ಯ, ಹಿ.ಚಿ.ಬೋರಲಿಂಗಯ್ಯ, ಕನ್ನಡ ವಿ.ವಿ. ಹಂಪಿ, ೧೯೯೭.

೬೩ ಮಂಟೇಸ್ವಾಮಿ ಮಹಾಕಾವ್ಯ, ಜಿ.ಶಂ.ಪ., ಸಾಹಿತ್ಯ ಸದನ, ಮೈಸೂರು, ೧೯೭೩.

೬೪ ವಡ್ಡಗೆರೆ ವೀರನಾಗಮ್ಮನವರಚರಿತೆ, ಪಂಡಿತ ಹನುಮಂತಯ್ಯ ಪಾಪಯ್ಯ, ಮಹಡಿಮನೆ ಸರ್ಕಾರಿ ಪ್ರೌಢಶಾಲೆ, ಮಧುಗಿರಿ, ೧೯೬೮.

೬೫ ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು, ಚಿದಾನಂದ ಮೂರ್ತಿ, ಐಬಿಎಚ್. ಪ್ರಕಾಶನ, ಬೆಂಗಳೂರು, ೧೯೭೫.

೬೬ ವೀರ ಮಹೇಶ್ವರಿ ಅಮ್ಮಾಜಿವರ ಚರಿತ್ರೆ, ಎಂ. ವೀರಪ್ಪ, ೧೯೯೪.

೬೭ ಲೌಕಿಕ-ಅಲೌಕಿಕ, ರಾಜರಾಮ ಹೆಗಡೆ, ಆನಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ ಚಿತ್ರದುರ್ಗ ಜಿಲ್ಲೆ, ೨೦೦೧.

೬೮ ಶಾಸನಗಳಲ್ಲಿ ಕರ್ನಾಟಕ ಸ್ತ್ರೀ ಸಮಾಜ, ಕರ್ನಾಟಕ ವಿ.ವಿ.ಧಾರವಾಡ, ೧೯೯೦.

೬೯ ಸಂಕ್ರಮಣ ಮಾರ್ಚ್ ಏಪ್ರಿಲ್, ೨೦೦೩.

೭೦ ಸ್ಥಳೀಯ ಚರಿತ್ರೆ, ಲಕ್ಷ್ಮಣ್ ತೆಲಗಾವಿ, ಕನ್ನಡ ವಿ.ವಿ. ಹಂಪಿ, ೨೦೦೩.

೭೧ ಹರತಿಯ ಸಿರಿ, ಲಕ್ಷ್ಮಣ್ ತೆಲಗಾವಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭.

೭೨ ಹೈದ್ರಬಾದ್ ಕರ್ನಾಟಕದ ಗ್ರಾಮದೇವತೆಗಳ ಜನಪದೀಯ ಅಧ್ಯಯನ, ಚನ್ನಣ್ಣ ವಾಲಿಕಾರ, ದಲಿತ ಬಂಡಾಯ ಸಾಗಿತ್ಯ, ಗುಲ್ಬರ್ಗ, ೧೯೯೮.

೭೩ ಹರಿಹರನ ರಗಳೆಗಳು ಸಾಂಸ್ಕೃತಿಕ ಮುಖಾಮುಖಿ, ಡಾ. ಶಿವಾನಂದ ವಿರಕ್ತಮಠ, ಕನ್ನಡ ವಿ.ವಿ. ಹಂಪಿ, ೨೦೦೪.

೭೪ ಹಾಗಲವಾಡಿ ನಾಯಕರು, ಯೋಗೀಶ್ವರಪ್ಪ ಡಿ.ಎಸ್., ಕನ್ನಡ ವಿ.ವಿ. ಹಂಪಿ, ೧೯೯೯.

## ೨ ಲೇಖನಗಳು


೧. ಓ.ಎಲ್. ನಾಗಭೂಷಣ ಸ್ವಾಮಿ, ಮಂಟೇಸ್ವಾಮಿ ಕಾವ್ಯ ಮತ್ತು ನಮ್ಮತನದ ಹುಡುಕಾಟ, ಕನ್ನಡ ಅಧ್ಯಯನ (ಮಳೆ ಸಂಚಿಕೆ) ಸಂ.೮, ಸಂ.೧, ಜುಲೈ, ಆಗಸ್ಟ್, ಸೆಪ್ಟಂಬರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೨. ಡಿ.ಆರ್. ನಾಗರಾಜ್, ಮಂಟೇಸ್ವಾಮಿ ಮಹಾಕಾವ್ಯ ಆಧ್ಯಾತ್ಮಿಕ ದಂಗೆಯ ಕೃತಿ, ಕನ್ನಡ ಅಧ್ಯಯನ (ಚಳಿ ಸಂಚಿಕೆ) ಸಂ.೫, ಸಂ.೨, ಅಕ್ಟೋಬರ್, ನವೆಂಬರ್, ಡಿಸೆಂಬರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೩. ಕೆ.ರಂ. ನಾಗರಾಜ, ಮಂಟೇಸ್ವಾಮಿ ಪರಂಪರೆ ಕುಲಸ್ಥಾಪನೆಯ ಯತ್ನ, ಕನ್ನಡ ಅಧ್ಯಯನ (ಚಳಿ ಸಂಚಿಕೆ) ಸಂ.೮, ಸಂ.೧, ಜುಲೈ ಆಗಸ್ಟ್, ಸೆಪ್ಟಂಬರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೪. ಹಿ.ಶಿ. ರಾಮಚಂದ್ರೇಗೌಡ, ಮಲೆ ಮಾದೇಶ್ವರ ಸಾಂಸ್ಕೃತಿಕ ಪುಂಡ ಪ್ರಭುದ್ಧ ಕರ್ನಾಟಕ, (ಜಾನಪದ ವಿಚಾರ ಗೋಷ್ಠಿ ವಿಶೇಷಾಂಕ), ಸಂ.೨೮-೨೯, ಸಂ.೩೦೩-೩೧೪, (ಸಂಯುಕ್ತ) ೧೯೯೭-೯೮.

೫. ಸಿ.ಎನ್. ರಾಮಚಂದ್ರನ್, ಜಾನಪದ ಮಹಾಕಾವ್ಯಗಳು ಹಾಗೂ ಅನನ್ಯತೆಯ ಛಲ, (ಚಳಿ ಸಂಚಿಕೆ) ಸಂ.೮, ಸಂ.೧, ಜುಲೈ, ಆಗಸ್ಟ್, ಸೆಪ್ಟಂಬರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೬. ಎಸ್.ಎಸ್. ಹಿರೇಮಠ್, ಮಲೆಯ ಮಹಾದೇಶ್ವರ ಪರಂಪರೆ, ಐತಿಹಾಸಿಕ ನೆಲೆ, ಪ್ರಭುದ್ಧ ಕರ್ನಾಟಕ, (ಜಾನಪದ ವಿಚಾರ ಗೋಷ್ಠಿ ವಿಶೇಷಾಂಕ), ಸಂ.೨೮-೨೯, ಸಂ.೩೦೩-೩೧೪, (ಸಂಯುಕ್ತ), ೧೯೯೭-೯೮.

೭. ಹೆಚ್.ಎಸ್. ಶಿವಪ್ರಕಾಶ್, ಮಂಟೇಸ್ವಾಮಿ ಪರಂಪರೆಯ ಸೃಜನಶೀಲ ಅನುಸಂಧಾನ, ಸಂಪಾದಕರು, ರಹಮತ್ ತರೀಕೆರೆ, ಕನ್ನಡ ಅಧ್ಯಯನ, (ಚಳಿ ಸಂಚಿಕೆ) ಸಂ.೮, ಸಂ.೧, ಜುಲೈ, ಆಗಸ್ಟ್, ಸೆಪ್ಟಂಬರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

## ೩. ವಕ್ತೃಗಳ ವಿವರಗಳು

| ಕ್ರ.ಸಂ. | ವಕ್ತೃವಿನ ಹೆಸರು | ವಯಸ್ಸು | ವೃತ್ತಿ | ಜಾತಿ | ಊರು |
|---|---|---|---|---|---|
| ೧. | ಆಲಿಂಗಪ್ಪ | ೬೦ | ವ್ಯವಸಾಯ | ಕುಂಚಿಟಿಗ | ವೀರಬೊಮ್ಮನಹಳ್ಳಿ |
| ೨. | ಈರಮಂಚಣ್ಣ | ೩೦ | ಉಪನ್ಯಾಸಕರು | ಕಾಡುಗೊಲ್ಲರು | ದೊಡ್ಡಬಾಣಗೆರೆ ಗೊಲ್ಲರಹಟ್ಟಿ |
| ೩. | ಕವಿತಾ ಸಿ.ಆರ್. | ೨೩ | ವಿದ್ಯಾರ್ಥಿನಿ | ಬಲಿಜಿಗ | ಚನ್ನನಕುಂಟೆ |
| ೪. | ಕವಿತಾ ಎಸ್. | ೨೩ | ವಿದ್ಯಾರ್ಥಿನಿ | ಅಗಸ | ಮೂಗನಹಳ್ಳಿ |
| ೫. | ಕಿರಣ್ | ೨೭ | ಉಪನ್ಯಾಸಕರು | ಕುಂಚಿಟಿಗ | ಮೂಗನಹಳ್ಳಿ |
| ೬. | ಗುರುರಾಜ ಮುಗಳಿ | ೨೭ | ಸಂ. ವಿದ್ಯಾರ್ಥಿ | ಲಿಂಗಾಯತ | ಕನ್ನಡ ವಿ.ವಿ. |
| ೭. | ಗಂಗಾಧರ | ೪೫ | ಉಪನ್ಯಾಸಕರು | ಕುರುಬರು | ಸಿರಾ |
| ೮. | ಡಾ. ಚಿಕ್ಕಣ್ಣ ಯಣ್ಣೆಕಟ್ಟೆ | ೪೦ | ಉಪನ್ಯಾಸಕರು | ಕುರುಬರು | ಸಿರಾ |
| ೯. | ಪ್ರೊ. ಚಂದ್ರಣ್ಣ | ೬೦ | ಉಪನ್ಯಾಸಕರು | ಕುಂಚಿಟಿಗ | ಕಟ್ಟಾವೀರನಹಳ್ಳಿ |
| ೧೦. | ಚಂದ್ರಾಚಾರ್ | ೩೮ | ವ್ಯಾಪಾರ | ಅಕ್ಕಸಾಲಿಗ | ಬರಗೂರು |
| ೧೧. | ಜಗನ್ನಾಥ್ | ೪೫ | ವ್ಯವಸಾಯ | ಸಾದರು | ಮಾಗೋಡು |
| ೧೨. | ಜೋಗೇರ ದಾಸಣ್ಣ | ೬೦ | ವ್ಯವಸಾಯ | ಕಾಡುಗೊಲ್ಲ | ಮಾಗೋಡು |
| ೧೩. | ನಟೇಶ್ ಬಾಬು | ೨೯ | ಪತ್ರಕರ್ತ | ಈಡಿಗ | ಸಿರಾ |
| ೧೪. | ಡಾ. ನಂದೀಶ್ವರ ಎನ್. | ೩೮ | ಪ್ರಾಂಶುಪಾಲರು | ಕುಂಚಿಟಿಗ | ಸಿರಾ |
| ೧೫. | ನಂಜುಂಡಪ್ಪ | ೫೮ | ವ್ಯವಸಾಯ | ಕುಂಚಿಟಿಗ | ಬೆಜ್ಜಿಹಳ್ಳಿ |
| ೧೬. | ನಿಂಗಪ್ಪ | ೬೮ | ಜನಪದ ಕಲಾವಿದ | ಕಾಡುಗೊಲ್ಲ | ಲಕ್ಕವ್ವನಹಳ್ಳಿ ಗೊಲ್ಲರಹಟ್ಟಿ |
| ೧೭. | ಶ್ರೀ ಶ್ರೀ ನಂಜಾವಧೂತ ಸ್ವಾಮಿಗಳು | ೨೮ | ಪೀಠಾಧ್ಯಕ್ಷರು | ಕುಂಚಿಟಿಗ | ಪಟ್ಟನಾಯಕನಹಳ್ಳಿ |
| ೧೮. | ಪುಟ್ಟಲಿಂಗಪ್ಪ | ೭೦ | ನಿವೃತ್ತ ಶಿಕ್ಷಕರು | ಕುಂಚಿಟಿಗ | ಬರಗೂರು |

| | | | | | |
|---|---|---|---|---|---|
| ೧೯. | ಪುಟ್ಟಲಿಂಗಪ್ಪ | ೬೦ | ವ್ಯವಸಾಯ | ಲಿಂಗಾಯತ | ಮದಲೂರು |
| ೨೦. | ಪೂಜಾರಪ್ಪ | ೫೫ | ವ್ಯವಸಾಯ | ಯಾದವ | ವಿ.ಗೊಲ್ಲಳ್ಳಿ |
| ೨೧. | ಪೂಜಾರ್ ನಾಗರಾಜಪ್ಪ | ೫೮ | ವ್ಯವಸಾಯ | ಕುಂಚಿಟಿಗ | ವೀರಬೊಮ್ಮನಹಳ್ಳಿ |
| ೨೨. | ಪೂಜಾರ್ ಅಜ್ಜೇಗೌಡ | ೭೦ | ಕುರಿಸಾಕಾಣೆ | ಕಾಡುಗೊಲ್ಲ | ಬಂಗಾರಿಹಟ್ಟಿ |
| ೨೩. | ಪ್ರಸನ್ನಕುಮಾರ್ | ೩೨ | ಉಪನ್ಯಾಸಕರು | ಕುಂಚಿಟಿಗ | ಸಿರಾ |
| ೨೪. | ಬಲರಾಮರೆಡ್ಡಿ | ೩೫ | ವ್ಯವಸಾಯ | ಕುಂಚಿಟಿಗ | ವೀರಬೊಮ್ಮನಹಳ್ಳಿ |
| ೨೫. | ಡಾ. ಮುದ್ದವೀರಪ್ಪ | ೩೪ | ಉಪನ್ಯಾಸಕರು | ಕುಂಚಿಟಿಗ | ಬೆಂಗಳೂರು |
| ೨೬. | ಮಂಜುಳಾ ಬಿ.ಎನ್. | ೨೫ | ವಿದ್ಯಾರ್ಥಿನಿ | ಕುಂಚಿಟಿಗ | ಬೆಜ್ಜಿಹಳ್ಳಿ |
| ೨೭. | ಮಣಿ | ೨೦ | ವಿದ್ಯಾರ್ಥಿನಿ | ಕುಂಚಿಟಿಗ | ಹೂಯಿಲ್‌ದೊರೆ |
| ೨೮. | ಡಾ. ರಂಗಲಕ್ಷ್ಮಿ | ೩೨ | ಉಪನ್ಯಾಸಕಿ | ಕುಂಚಿಟಿಗ | ಪಾವಗಡ |
| ೨೯. | ರಾಘವೇಂದ್ರಾಚಾರ್ | ೨೮ | ಗ್ರಂಥಪಾಲಕರು | ಅಕ್ಕಸಾಲಿಗ | ಸಿರಾ |
| ೩೦. | ಎಲ್. ರಾಮಲಿಂಗಪ್ಪ ಪೂಜಾರ್ | ೭೭ | ನಿವೃತ್ತ ಗ್ರಾಮಾಧಿಕಾರಿ | ಕುಂಚಿಟಿಗ | ಗಜಮಾರನಹಳ್ಳಿ |
| ೩೧. | ರಾಮಯ್ಯ | ೮೦ | ನಿವೃತ್ತ ಶಿಕ್ಷಕರು | ಕುಂಚಿಟಿಗ | ಸತ್ತಿಗೇನಹಳ್ಳಿ |
| ೩೨. | ಲಕ್ಷ್ಮಿನಾರಾಯಣ ಪಿ. | ೪೫ | ಪ್ರಾಂಶುಪಾಲರು | ಕುಂಚಿಟಿಗ | ಸಿರಾ |
| ೩೩. | ಶಾಂತರಾಜು | ೨೮ | ವ್ಯಾಪಾರ | ಲಿಂಗಾಯತ | ಮದಲೂರು |
| ೩೪. | ಶಿವರಾಜು | ೩೬ | ವ್ಯವಸಾಯ | ಕುಂಚಿಟಿಗ | ಕಸಾಪುರ |
| ೩೫. | ಸುರೇಶಯ್ಯ ವಿ.ಪಿ. | ೨೯ | ಶಿಕ್ಷಕರು | ಲಿಂಗಾಯತ | ಬೆಂಗಳೂರು |
| ೩೬. | ಸಂದೀಪ್ | ೨೦ | ವಿದ್ಯಾರ್ಥಿ | ಕುಂಚಿಟಿಗ | ಬೇವಿನಹಳ್ಳಿ |
| ೩೭. | ಸುರೇಶ್ | ೨೩ | ವಿದ್ಯಾರ್ಥಿ | ಕುಂಚಿಟಿಗ | ಚಿರತಹಳ್ಳಿ |
| ೩೮. | ಸೋಮಶೇಖರ್ | ೪೭ | ಉಪನ್ಯಾಸಕರು | ಕುಂಚಿಟಿಗ | ಸಿರಾ |
| ೩೯. | ಹನುಮಂತೇಗೌಡರು | ೭೦ | ವ್ಯವಸಾಯ | ಕುಂಚಿಟಿಗ | ಕೆಂಕೆರೆ |
| ೪೦. | ಹನುಮಂತರಾಯಪ್ಪ | ೪೩ | ಶಿಕ್ಷಕರು | ನಾಯಕ | ಬರಗೂರು |

## ೪. ಕ್ಲಿಷ್ಟಪದಕೋಶ

ಅಮ್ಮ ಬರುವುದು : ಮೈ ಕೈಯಲ್ಲಿ ಗುಳ್ಳೆ ಬರುವುದು.

ಅಯೋನಿಜ : ಮಾನವ ಸಹಜವಾಗಿ ಜನಿಸದವನು. (ಎತ್ತಪ್ಪ)

ಆವಿನಗೂಡು : ದನಕರುಗಳನ್ನು ಕೂಡಿಸುವ, ಮುಳ್ಳು ಬೇಲಿಯಿಂದ ಸುತ್ತುವರಿದ ಸ್ಥಳ.

ಆವು : ಗೋವು, ದನಕರು.

ಹಿಕಮತ್ತು : ಕುತಂತ್ರ, ಕೈವಾಡ.

ಉಕ್ಕಿನ ಪಾಳು : ಉಕ್ಕಿನ ಕಂಬ.

ಒತ್ತಿಗೆ : ಪುಸ್ತಕ

ಕಂಬೇರ ಗೊಲ್ಲರು : ಕಾಡುಗೊಲ್ಲ ಜನಾಂಗದ ಒಂದು ಉಪ ಪಂಗಡ.

ಕಂಡುಗ : ನೂರು ಕೇಜಿ ಅಳತೆಯ ಒಂದು ಪ್ರಮಾಣ.

ಕಂದಕ: ಕೋಟೆಯ ಸುತ್ತಲಿರುವ ಅಗ್ಗಳು.

ಕಚ್ಚಿ : ಹಲ್ಲಿನಿಂದ ಕಚ್ಚುವುದು.

ಕಡ್ಲೆಪುರಿ : ಮಂಡಕ್ಕಿ.

ಕಣೆ : ಶಾಸ್ತ್ರ.

ಕಾಣಿಕೆಯವರು : ಜುಂಜಪ್ಪ, ಎತ್ತಪ್ಪ ಮೊದಲಾದವರಿಗೆ ಹರಕೆ ಹೊತ್ತ ಭಕ್ತರಿಂದ ಆ ಹರಕೆಯ ವಸ್ತುಗಳನ್ನು ಪಡೆದುಕೊಂಡು ಹೋಗಿ ವೀರರ ಮೂಲ ಗದ್ದುಗೆಗಳಿಗೆ ತಲುಪಿಸುವವರು.

ಕಾವಲು : ದನಕರುಗಳು ಮೇಯುವ ಹುಲ್ಲುಗಾವಲು, ಗೋಮಾಳ.

ಕರೆಕಡೆ : ನೀತಿ ನಿಯಮಗಳು, ತಪ್ಪು ಒಪ್ಪು.

ಕ್ವಾರೆ : ಎತ್ತರವಾದ ಪ್ರದೇಶ.

ಕುರಿ ಕರೆಯುವುದು : ಜುಂಜಪ್ಪ, ಎತ್ತಪ್ಪ, ಬೂತಪ್ಪ, ಕರಿಯಮ್ಮ, ರಂಗನಾಥ ಮೊದಲಾದ ದೇವಾಲಯಗಳ ಸುತ್ತ ಕುರಿಗಳನ್ನು ಓಡಿಸುವ ಒಂದು ಬಗೆಯ ಭಕ್ತಿ ಸಮರ್ಪಣೆ.

ಖಿನ್ನರಾಗು : ಬೇಸರಗೊಳ್ಳು.

ಗಣೆ : ಬಿದಿರುಕೋಲು, ಗಳ.

ಗಿಂಡಿ : ಕಿರಿದಾದ ಬಾಯುಳ್ಳ ಪಾತ್ರೆ, ಸೊಂಡಿಲಿರುವ ಸಣ್ಣ ಪಾತ್ರೆ.

ಗೂಡೆ : ದೊಡ್ಡ ಬುಟ್ಟಿ, ಮಂಕರಿ.

ಗೊಡುಗು : ಛತ್ರಿ, ಕೊಡೆ.

ಜಲದಿ : ಕೊಳ, ಹಳ್ಳ ಅಥವಾ ಕೆರೆಯ ನೀರಿನಲ್ಲಿ ದೇವರ ವಿಗ್ರಹಗಳನ್ನು ತೊಳೆಯುವ ಧಾರ್ಮಿಕ ಕ್ರಿಯೆ.

ತುಲಾಭಾರ : ತನ್ನ ತೂಕದಷ್ಟು ವಸ್ತು, ವಡವೆ ಮುಂತಾದವುಗಳನ್ನು ದಾನ ಮಾಡುವ ವ್ರತ.

ದಳಪತಿ : ದಂಡನಾಯಕ, ನಾಯಕ, ಮುಂದಾಳು.

ದತ್ತೂರಿ ಬೀಜ : ಇದು ಕೆರೆಯಲ್ಲಿ ಸಿಗುವ ಸಾಸಿವೆ ಜಾತಿಗೆ ಸೇರಿದ ವಿಷಪೂರಿತ ಸಸ್ಯ.

ದಾಯ ಪಗಡೆ : ಪಣಕಟ್ಟಿ ಆಡುವ ಪಗಡೆ ಆಟ.

ಪಡುವಲ : ಪಶ್ಚಿಮ ದಿಕ್ಕು.

ಪರ : ಉತ್ಸವ, ಜಾತ್ರೆ ಮುಂತಾದ ಸಂದರ್ಭಗಳಲ್ಲಿ ಅವುಗಳ ಅಂಗವಾಗಿ ಮಾಡುವ ಊಟ, ಸಮಾರಾಧನೆ.

ಪರಸು : ಮುಟ್ಟಿದ್ದೆಲ್ಲವೂ ಚಿನ್ನವಾಗಿಸುವ ಅಪೂರ್ವ ವಸ್ತು.

ಬಾವ : ಸಹೋದರಿಯ ಗಂಡ.

ಬಾಯಿಬತ : ಬಾಯಿಗೆ ಬಟ್ಟೆ ಕಟ್ಟಿಕೊಂಡು ಆಚರಿಸುವ ವ್ರತ.

ಬೆನವ : ಕೆತ್ತನೆ ಇಲ್ಲದ ಚಿಕ್ಕದಾದ ಕಾಡುಗಲ್ಲು ರೂಪ. ಪೂಜಿಸಲ್ಪಡುವ ಕಾಡುಗಲ್ಲು.

ಮಣ : ತೂಕದ ಒಂದು ಪ್ರಮಾಣ; ಸುಮಾರು ನಲವತ್ತು ಸೇರು.

ಮಣೇವು : ಬೂತಪ್ಪನಿಗೆ ಸಲ್ಲಿಸುವ ಒಂದು ಬಗೆಯ ಧಾರ್ಮಿಕ ಸೇವೆ.

ಮರಡಿಗುಡ್ಡ : ಎತ್ತರವಾದ ಬೋಳು ಬೋಳಾದ ಗುಡ್ಡ.

ಮಸಲತ್ತು : ಕುತಂತ್ರ, ಭೇದೋಪಾಯ.

ಮಾರಿ : ಪ್ಲೇಗು, ಕಾಲರ, ಸಿಡುಬು ಮುಂತಾದ ಸಾಂಕ್ರಾಮಿಕ ರೋಗ.

ಮಾರೇನೊರು : ಕಾಡುಗೊಲ್ಲ ಜನಾಂಗದ ಒಂದು ಉಪಪಂಗಡ.

ಮುಟ್ಟು ಅಥವಾ ಮಟ್ಟು : ಮಿಣಿ, ಹಗ್ಗ.

ಮೊಗೆಯೀರಿ : ಕುಡಿಯಿರಿ.

ಪೌಳಿ : ಸುತ್ತುಗೋಡೆ, ಪ್ರಾಕಾರ.

ಸೂಲಗಿತ್ತಿ : ಹೆರಿಗೆ ಮಾಡಿಸಲು ಸಹಾಯ ಮಾಡುವವಳು.

ಹಗೇವು : ಕಾಳುಗಳನ್ನು ಸಂಗ್ರಹಿಸುವ ನೆಲಮಾಳಿಗೆ.

ಹಯನ : ಮೊಸರು, ಬೆಣ್ಣೆ ಮುಂತಾದವು.

ಹಿಕ್ಕೆ : ಮಲ, ಗಲೀಜು.

ಹೊನ್ನಾರು : ಕೃಷಿ ಚಟುವಟಿಕೆ ಪ್ರಾರಂಭಿಸುವ ಮೊದಲು ಮಾಡುವ ಪೂಜೆ.

# ೫ ಜಾನಪದ ಹಾಡು

## ೧ ಒಂಬತ್ತು ದೇವುತರೆ ಎದ್ದು ನಿಮ್ಮ ಪಾದ ನೆನೆದೇವು

ಹೊತ್ತಿಲೆ ಎದ್ದು
ಯಾರ್‍ಯಾರ ನೆನೆದೇವಮ್ಮ
ಉತ್ತುತ್ತಿ ಹಣ್ಣೆ ಪಳುವಳುಗೋ
ಉತ್ತುತ್ತಿ ಹಣ್ಣೆ ಪಳುವಳಿಗೆ ಸ್ವಾಮಿ
ವಡ್ಡಿಗೇರಿಯ ವೀರೂನಾಗಮ್ಮನ
ಏರುಗಾರತವ ನೆನೆದೇವುರ ||
ಸ್ವಾಮಿ ಹರಹರನೆ ಸೀರೆದು ರಂಗಪ್ಪ
ನಂದಿಹಳ್ಳಿ ರಂಗಪ್ಪ
ಮರಡಿಗುಡ್ಡದ ರಂಗಪ್ಪ
ತಾವುರೆಗೆರೆ ರಂಗಪ್ಪ
ಬಳಿಗೆರೆ ಈರಣ್ಣ
ಕಾರೇಹಳ್ಳಿ ಹನುಮಂತ
ಅಂಬುಲುಗೆರೆ ರಂಗಪ್ಪ
ಗಿಡುಗನ ಹಳ್ಳಿ ರಂಗದಾಮ
ಮಾಗೋಡು ರಂಗಪ್ಪ
ಸಕ್ಕುದು ದೀರಣ್ಮ
ಮಲ್ಲೇರಂಗಪ್ಪ
ಒಂಬತ್ತು ಜನ ದೇವುತುರೆ
ಎದ್ದು ನಿಮ್ಮ ಪಾದವನು ನೆನುದರು ಸ್ವಾಮಿ
ಇದ್ದ ಪಾಪಗಳೆಲ್ಲವೂ ಪರಿಹಾರ

ಹರಿಹರ ಶಂಕರನೆ
ಕೇಳಿರೆ ದೇವತೆಗಳಿರಾ
ದೇವುರು ಕರುಣಾದಿಂದಾ ಸ್ವಾಮಿ
ತೊರಿಗದ್ದೆ ಭೂತ

ಜೇಡುಗುಟ್ಟೆ ಭೂತ
ಏಳು ನಾಮದೊಡೆಯ
ಪುರುಲಳ್ಳಿ ಭೂತ
ನಾರಾಯಣನೆ
ನಿಮ್ಮ ಪಾದವೆನ್ನು ಹೊತ್ತಿಲೆ
ಎದ್ದು ನೆನೆದರೆ ಸ್ವಾಮಿ
ಇದ್ದ ಪಾಪಗಳೇ ಪರಿಹಾರೊ

ಸ್ವಾರೆ ಕುಂಟೆ ಕರಿಯಮ್ಮ/ಬೇವಿನ ಹಳ್ಳಿ ಕರಿಯಮ್ಮ
ಹಾಗುಲುವಾಡಿ ಕರಿಯಮ್ಮ/ದಣ್ಣೆನು ಮಾರಮ್ಮ
ಸಿಕ್ಕನಹಳ್ಳಿ ಕರಿಯಮ್ಮ/ಸೆಟ್ಟಿ ಹಳ್ಳಿ ಮಾರೆಮ್ಮ
ಇದ್ದಂತ ಪಾಪಗಳೆಲ್ಲ ಪರಿಹಾರೋ/

ಸಿದ್ದರ ಬೆಟ್ಟದೊಳಮ್ಮ
ನಿದ್ದುರುಣ್ಣನ ಬಿದುರಮ್ಮ
ಸೋಬಾನ ಪಾಡಮ್ಮ
ಸ್ವಾಮಿ ಒದ್ದುಪಾಲುಗುದೊಳುಗೆ
ಧ್ವನಿ ಮಾಡಿ ಬಾರಮ್ಮ
ಸರಸ್ವತಿಯೇ ನೀನು ಪಾದ ನೆನುದೇವಮ್ಮೋ/

ಹರಿಹರನೆ ಶಂಕರನೆ
ಚಂದ್ರ ಸೂರ್‍ಯಾದಿಗಳೆ
ಸೂರ್‍ಯ ನವಗ್ರಹ ದೇವತೆಗಳಿರ
ನಿಮ್ಮ ಪಾದವ್ನ
ಹೊತ್ತೀಲೆ ಎದ್ದು ನೆನುದುರ ಸ್ವಾಮಿ
ಇದ್ದ ಪಾಪಗಳೆ ಪರಹಾರೋ /

ಮಹಾಲಿಂಗ ಹುಟ್ಟುತಲೆ
ಅಂಗೈಯಗಾರು ಕೋಟಿ
ಲಿಂಗದು ದೊರೆಯಲ್ಲಮ್ಮ
ಮುಂಗೈಲಿ ಮೂರು ಕೋಟಿ
ಲಿಂಗದು ದೊರೆಯಲ್ಲಮ್ಮ

ಮಾಲಿಂಗ
ಶಿವನೆ ಸಿತ್ತೂರು ಲಿಂಗ
ಮುನ್ನೂರು ಅರವತ್ತು ಕೋಟಿ ಲಿಂಗ
ನಿಮ್ಮ ಶ್ರೀಪಾದವನ್ನು ಹೊತ್ತೀಲೆ
ಎದ್ದು ನೆನೆದುರೆ ಸ್ವಾಮಿ
ಇದ್ದ ಪಾಪಗಳೇ ಪರಿಹಾರೋ /

ಕಲೇ ಲಿಂಗ ಮಲ್ದೇಲಿಂಗ
ಮೈಲಾರುದು ಲಿಂಗ
ಚೆನ್ನಬಸವ / ಕೋಡುಗಲ್ಲು ಬಸವ
ಕುಡುಗೋಲೀರೂ ಬದ್ನುರು ಸ್ವಾಮಿ
ಕಲ್ಲುಕುಂಟೆ ಶಿವ ಸಿತ್ತುರು ಲಿಂಗ
ಮಾಲಿಂಗ
ಮುನ್ನೂರರವತ್ತು ಕೋಟಿ ಲಿಂಗ
ನಿಮ್ಮ ಪಾದವನ್ನು
ಹೊತ್ತಿಲೇ ಎದ್ದು ನೆನೆದರು ಸ್ವಾಮಿ
ಇದ್ದಂತ ಪಾಪುಗಳು ಪರಿಹಾರೋ

ಕೃಪೆ: ತುಮಕೂರು ಜಿಲ್ಲೆ ಜಾನಪದೀಯ ಅಧ್ಯಯನ, ಡಾ. ಚಿಕ್ಕಣ್ಣ ಯಣ್ಣೆಕಟ್ಟೆ

## ೨ ದೇವರು ಕರೆಯೋ ಪದಗಳು

ಕುರಿ ಕುರಿಯೇ ಚಂದ
ಕುದುರೆ ಮರಿಯೇ ಚಂದ
ರಂಗಣ್ಣಾ ನೀ ಕುಣಿಸೋ ಕುದುರೆ ಬಹುಚಂದ

ತುಂಬಿದಾ ಕೆರೆಯಾಗೆ ತೂಬತ್ತೋನು ನೀನ್ಯಾರು
ಕಚ್ಚೆ ಹಚ್ಚಡದ ಶರಣ ಜುಂಜಪ್ಪ
ಬಾಳೆಗೆ ನೀರ ತಿರುವೇನು

ಅಮ್ಮನ ಗುಡಿ ಮುಂದೆ ಗಮ್ಮನದೇನು
ಗಂಡು ಬೂತಾಳೆ ಗಜನಿಂಬೆ! ಮರದಡಿಯ
ದಂಡು ಬಿಟ್ಟಾಳೆ ಜಗಳಾಕ.

ಹಳ್ಳ ಕೊಳ್ಳದ ನೀರು ಬೆಳ್ಳಿಯ ಬಿಂದಿಗೆ
ಅಲ್ಲಿ ಕರಿಯಮ್ಮನ ಶಿವ ಪೂಜೆ! ಆಗುವಾಗ
ಕಲ್ಯಾಣದ ಗಂಟೆ ಗಳಿರೆಂದೋ!

ಕೃಪೆ: ತುಮಕೂರು ಜಿಲ್ಲೆ ಜಾನಪದೀಯ ಅಧ್ಯಯನ, ಡಾ. ಚಿಕ್ಕಣ್ಣ ಯಣ್ಣೆಕಟ್ಟೆ

## ೬. ಸಾಂಸ್ಕೃತಿಕ ವೀರರ ಹೆಸರನ್ನಿಟ್ಟಿರುವ ಗ್ರಾಮಗಳು

**ಕಸಬ ಹೋಬಳಿ**

ಮುದ್ದರಂಗನಹಳ್ಳಿ

ಬೊಪ್ಪನದು

ರಂಗನಾಥಪುರ

ರಂಗಾಪುರ

ರಂಗನಹಳ್ಳಿ

ಜುಂಜರಾಮನಹಳ್ಳಿ

**ಕಳ್ಳಂಬೆಳ್ಳ ಹೋಬಳಿ**

ಮುದ್ದವೀರನಹಳ್ಳಿ

ರಂಗನಹಳ್ಳಿ

ಕಟ್ಟಾವೀರನಹಳ್ಳಿ

ಎತ್ತಪ್ಪನಹಟ್ಟಿ

**ಬುಕ್ಕಾಪಟ್ಟಣ ಹೋಬಳಿ**

ಗುಡ್ಡದರಂಗನಹಳ್ಳಿ

ರಂಗನಹಳ್ಳಿ

ಕ್ಯಾತದೇವನಹಟ್ಟಿ

**ಗೌಡಗೆರೆ ಹೋಬಳಿ**

ಬೊಮ್ಮಗಾನಹಳ್ಳಿ

ರಂಗನಹಳ್ಳಿ

ವೀರಗಾನಹಳ್ಳಿ

ವೀರಾಪುರ

ರಂಗಾಪುರ

**ಹುಲಿಕುಂಟೆ ಹೋಬಳಿ**

ಚಿಕ್ಕವೀರನಹಳ್ಳಿ

ಬೊಪ್ಪರಾಯನಪಾಳ್ಯ

ವೀರನಹಳ್ಳಿ

ರಂಗಾಪುರ

## ೬ ಛಾಯಾಚಿತ್ರಗಳು

೧. ಮೊಗಲರ ಆಡಳಿತ ಕಾಲದಲ್ಲಿ ಕಾಸಿಂಖಾನನಿಂದ ನಿರ್ಮಿತವಾದ ಜುಮೀಯಾ ಮಸೀದಿ (ದೊಡ್ಡ ಮಸೀದಿ), ಸಿರಾ

೨. ರಂಗಪ್ಪನಾಯಕ ಕಟ್ಟಿಸಿದ ದೊಡ್ಡಕೆರೆಯ ನೋಟ, ಸಿರಾ

೩. ರಂಗಪ್ಪನಾಯಕ ಕಟ್ಟಿಸಿದ ನೆಲಕೋಟೆ ಹಾಗೂ ಅದರ ಸುತ್ತಲೂ ಇರುವ ಕಂದಕ, ಸಿರಾ. (ಕೆರೆಯ ನೀರು ಕಂದಕಕ್ಕೆ ಬಂದು ಕೋಟೆಗೆ ರಕ್ಷಣೆ ಒದಗಿಸುವ ವ್ಯವಸ್ಥೆ ಮಾಡಲಾಗಿದೆ.)

೪. ಕೋಟೆಯ ಒಳಗಿರುವ ಅರಮನೆಯ ಅವಶೇಷ, ಸಿರಾ.

೫. ವೀರಮ್ಮ ಮಹಾಸತಿಯಾದ ಸ್ಥಳ, ಬರಗೂರು.

೬. ವೀರಮ್ಮ ಮೆರವಣಿಗೆ ದೇವತೆ, ಬರಗೂರು

೭. ವೀರ ಬೊಪ್ಪರಾಯನ ವೀರಗಲ್ಲಿನ ದೇವಾಲಯ, ಬೆಜ್ಜಿಹಳ್ಳಿ, ಸಿರಾ.

೮. ದಿಬ್ಬದ ವೀರ ಬೊಮ್ಮಣ್ಣನ ಪೌಳಿಯ ಒಂದು ನೋಟ, ವೀರ ಬೊಮ್ಮನಹಳ್ಳಿ.

೯. ಪೌಳಿಯ ಒಳಭಾಗದಲ್ಲಿರುವ ವೀರಬೊಮ್ಮಣ್ಣನ ವೀರಗಲ್ಲು, ವೀರ ಬೊಮ್ಮನಹಳ್ಳಿ

೧೦. ವೀರ ಬೊಮ್ಮಣ್ಣನ ಮೆರವಣಿಗೆ ದೇವರು, ವೀರ ಬೊಮ್ಮನಹಳ್ಳಿ.

೧೧. ಗುರುಗುಂಡ ಬ್ರಹ್ಮೇಶ್ವರ ದೇವಾಲಯ, ಪಟ್ಟನಾಯಕನಹಳ್ಳಿ

೧೨. ಜುಂಜಪ್ಪ ಸಮಾದಿಯಾಗಿರುವ ಗುಡ್ಡೆ (ಸ್ಥಳ), ಕಳುವೋರಹಳ್ಳಿ

೧೩. ಜುಂಜಪ್ಪನಿಗೆ ಬಿಟ್ಟ ಬಸವನ ಗುಡ್ಡೆ, ಬಿಜ್ಜಂಬೆಳ್ಳ

೧೪. ಊರ ಹೊರಭಾಗದಲ್ಲಿರುವ ಗುಡ್ಡದ ರಂಗನಾಥನ ಮೂಲ ದೇವಾಲಯ, ತಾವರೆಕೆರೆ

೧೫. ಜುಂಜಪ್ಪನ ಮೆರವಣಿಗೆ ದೇವರು, ಹಳೇ ಬಿಜ್ಜಂಬೆಳ್ಳ

೧೬. ಜುಂಜಪ್ಪ ತನ್ನ ಗೆಳೆಯ ರಂಗನಾಥನಿಗೆ ಕೊಟ್ಟಿರುವನೆಂದು ಹೇಳಲಾಗುವ, ಬಿಲ್ಲು ಭಾಣಗಳು, ಮರಡಿಗುಡ್ಡ

೧೭. ಕಂಬದ ರಂಗನಾಥನ ದೇವಾಲಯ, ಮಾಗೋಡು

೧೮. ರಾಮಾನುಜಾಚಾರ್ಯರು ಹಾಗೂ ಇತರರ ಪ್ರತಿಮೆ, ಕಾಲುವೆ ರಂಗನಾಥನ ದೇವಾಲಯ, ಬುಕ್ಕಾಪಟ್ಟಣ

೧೯. ಬೂತಪ್ಪನ ಪೌಳಿ, ಪುರಲೇಹಳ್ಳಿ

೨೦. ಬೂತಪ್ಪನ ಪೌಳಿಯಲ್ಲಿರವ ಬೆನವಗಳು (ಕಾಡುಗಲ್ಲುಗಳು), ಪುರಲೇಹಳ್ಳಿ



ಮೊಗಲರ ಆಡಳಿತ ಕಾಲದಲ್ಲಿ ಕಾಸಿಂಖಾನನಿಂದ ನಿರ್ಮಿತವಾದ
ಜುಮೀಯಾ ಮಸೀದಿ (ದೊಡ್ಡ ಮಸೀದಿ), ಸಿರಾ



ರಂಗಪ್ಪ ನಾಯಕ ಕಟ್ಟಿಸಿದ ದೊಡ್ಡಕೆರೆಯ ನೋಟ
ಸಿರಾ



ರಂಗಪ್ಪನಾಯಕ ಕಟ್ಟಿಸಿದ ನೆಲಕೋಟೆ ಹಾಗೂ ಅದರ ಸುತ್ತಲೂ ಇರುವ ಕಂದಕ, ಸಿರಾ.
(ಕೆರೆಯ ನೀರು ಕಂದಕಕ್ಕೆ ಬಂದು ಕೋಟೆಗೆ ರಕ್ಷಣೆ ಒದಗಿಸುವ ವ್ಯವಸ್ಥೆ ಮಾಡಲಾಗಿದೆ.)



ಕೋಟೆಯ ಒಳಗಿರುವ ಅರಮನೆಯ ಅವಶೇಷ
ಸಿರಾ



ವೀರಮ್ಮ ಮೆರವಣಿಗೆ ದೇವತೆ
ಬರಗೂರು



ವೀರಮ್ಮ ಮಹಾಸತಿಯಾದ ಸ್ಥಳ
ಬರಗೂರು.



ವೀರ ಬೊಪ್ಪರಾಯನ ವೀರಗಲ್ಲಿನ ದೇವಾಲಯ
ಬೆಜ್ಜಿಹಳ್ಳಿ, ಸಿರಾ.



[illegible] ವೀರ ಬೊಮ್ಮಣ್ಣನ ಕೋಟೆಯ ಒಂದು ನೋಟ
ವೀರ ಬೊಮ್ಮನಹಳ್ಳಿ.



ಪೌಳಿಯ ಒಳಭಾಗದಲ್ಲಿರುವ ವೀರಬೊಮ್ಮಣ್ಣನ ವೀರಗಲ್ಲು
ವೀರ ಬೊಮ್ಮನಹಳ್ಳಿ



ವೀರ ಬೊಮ್ಮಣ್ಣನ ಮೆರವಣಿಗೆ ದೇವರು
ವೀರ ಬೊಮ್ಮನಹಳ್ಳಿ.



ಜುಂಜಪ್ಪನಿಗೆ ಬಿಟ್ಟ ಬಸವನ ಗುಡ್ಡೆ
ಬಿಜ್ಜಂಬೆಳ್ಳ



ಊರ ಹೊರಭಾಗದಲ್ಲಿರುವ ಗುಡ್ಡದ ರಂಗನಾಥನ ಮೂಲ ದೇವಾಲಯ
ತಾವರೆಕೆರೆ



ಜುಂಜಪ್ಪ ತನ್ನ ಗೆಳೆಯ ರಂಗನಾಥನಿಗೆ ಕೊಟ್ಟಿರುವನೆಂದು ಹೇಳಲಾಗುವ
ಬಿಲ್ಲು ಬಾಣಗಳು, ಮರಡಿಗುಡ್ಡ



ಜುಂಜಪ್ಪನ ಮೆರವಣಿಗೆ ದೇವರು
ಹಳೇ ಬಿಜ್ಜಂಬೆಳ್ಳ



ಬೂತಪ್ಪನ ಪೌಳಿ, ಪುರಲೇಹಳ್ಳಿ



ಬೂತಪ್ಪನ ಪೌಳಿಯಲ್ಲಿರುವ ದೇವರುಗಳು (ಕಾಡುಗಲ್ಲುಗಳು)
ಪುರಲೇಹಳ್ಳಿ

